ಮನೋಹರ ಗ್ರಂಥಮಾಲೆಯ ೧೦೪ನೆಯ ಕುಸುಮ.

# ಇಂದ್ರಚಾಪ

( ಯುದ್ಧಜೀವನದ ಒಂದು ರಶಿಯನ್ ಕಾದಂಬರಿಯ ರೂಪಾಂತರ )

ಮೂಲ ಲೇಖಿಕೆ

ವಾಂಡಾ ವಾಸಿಲೆವ್‌ಸ್ಕಾ.

ಅನುವಾದಕರು

ರಂಗರಾವ್ ತಲಚೇರಕರ, ಬಿ. ಎ ಎಲೆಲ್ ಬಿ.

ಫೆಬ್ರುವರಿ ೧೯೪೧

ಬೆಲೆ : ೨-೮-೦

ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ.

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು :

ಶ್ರೀ. ದ ರಾ. ಬೇಂದ್ರೆ ಎಂ. ಎ.
ಶ್ರೀ. ವಿ ಕೃ. ಗೋಕಾಕ ಬಿ. ಎ. (ಆಕ್ಸಫರ್ಡ)
ಶ್ರೀ. ರಂ ಶ್ರೀ. ಮುಗುಳಿ ಎಂ. ಎ. ಬಿಟಿ.

ಸಂಪಾದಕ

ಜಿ. ಬಿ. ಜೋಶಿ.



ವ್ಯವಸ್ಥಾಪಕ ಸಂಪಾದಕ

ಪ್ರಲ್ಹಾದ. ಜಿ. ಕಾಟೋಟಿ.

ಪ್ರಕಾಶಕರು

ಶ್ರೀ. ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ.

ಮುದ್ರಕರು :

ಶ್ರೀ. ಎನ್. ವ್ಹಿ. ಕುರಡಿ,
ಶ್ರೀ ಸರಸ್ವತೀ ಮುದ್ರಣಾಲಯ,
ಧಾರವಾಡ.

## ಅರ್ಪಣ

ಮಂಗಳೂರಿನಲ್ಲಿ ನನ್ನ ಅಸ್ವಸ್ಥದ ಕೊನೆಯ ದಿನಗಳಲ್ಲಿ
ಮನಃಪೂರ್ವಕವಾಗಿ ನನ್ನನ್ನು ಉಪಚರಿಸಿ
ಸೇವೆಗೈದ ಹಳ್ಳಿಯ ಒಬ್ಬ ಹುಡುಗ

ಪೂಜಾರಿ ಶೇಷಪ್ಪನಿಗೆ

ಕೃತಜ್ಞತೆಯಿಂದ ಈ ಕೃತಿಯನ್ನು ಅರ್ಪಿಸಿದ್ದೇನೆ.

—ರಂಗರಾವ ತಲಚೇರಕರ.

# ನಮ್ಮ ಮಾತು

'ಇಂದ್ರಚಾಪ' ಒಬ್ಬ ರಶಿಯನ್ ಲೇಖಿಕೆ ಬರೆದುದು. ಈಕೆಯ ಹೆಸರು 'ವಾಂಡಾ ವಾಸಿಲೆವ್‌ಸ್ಕಾ' ಈಕೆ ಸೋವಿಯೆಟ್ ರಶ್ಯದಲ್ಲಿ ನೆಲಸಿರುವ ಮಧ್ಯಮ ವಯಸ್ಸಿನ ಪೋಲಿಶ್ ಮಹಿಳೆ. ಪೋಲೆಂಡಿನ ವಿಖ್ಯಾತ ಕಾದಂಬರಿಕಾರರಲ್ಲಿ ಒಬ್ಬರು ಕಳೆದ ಯುದ್ಧದಲ್ಲಿ ಪೋಲೆಂಡ್, ಜರ್ಮನರಿಂದ ಆಕ್ರಮಿಸಲ್ಪಟ್ಟಾಗ ಪೋಲೆಂಡಿನ ಹೊರಗೆ ರಶ್ಯಾದಲ್ಲಿ ರಚಿತವಾದ "ಪೋಲಿಶ್ ಬಂಧವಿಮೋಚನಾ ಸರಕಾರ" ದಲ್ಲಿ ಈಕೆ ಒಬ್ಬ ಮಂತ್ರಿಯಾಗಿದ್ದಳು ಈಗ ಈಕೆ 'ಸೋವ್ಹಿಯೆಟ್ ಲಿಟರೇಚರ್' ಎಂಬ ರಶ್ಯದ ಒಂದು ಮಾಸಪತ್ರಿಕೆಯ ಸಂಪಾದಕವರ್ಗದಲ್ಲಿದ್ದಾಳೆ

'ಇಂದ್ರಚಾಪ' ಕಳೆದ ಯುದ್ಧದ ಕಾಲಾವಧಿಯಲ್ಲೆ–ಯುದ್ಧವಿನ್ನೂ ನಡೆದಿದ್ದಾಗಲೇ—ಬರೆಯಲ್ಪಟ್ಟ ಕಾದಂಬರಿ ಇದರಂತೆಯೇ ಯುದ್ಧವಾದ ನಂತರ ಆಕೆ ಬರೆದ "Just Love" ಕಾದಂಬರಿ ತುಂಬಾ ಪ್ರಸಿದ್ಧವಾಗಿದೆ. ಇಂದ್ರಚಾಪವನ್ನೊಳಗೊಂಡು ಆಕಯ ಕೃತಿಗಳೆಲ್ಲ ಜಗತ್ತಿನ ವಿವಿಧ ಭಾಷೆಗಳಲ್ಲಿ ಪ್ರಕಟವಾಗಿವೆ.

ಈ ಕೃತಿಯನ್ನು ಕನ್ನಡಕ್ಕೆ ತಂದು, ಪ್ರಕಟಿಸುವ ಸುಸಂಧಿಯನ್ನು ನಮ್ಮ ಗ್ರಂಥಮಾಲೆಗೆ ಒದಗಿಸಿಕೊಟ್ಟುದಕ್ಕಾಗಿ ಶ್ರೀ ತಲಚೇರಿ ರಂಗರಾಯರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ

ಕಾದಂಬರಿಗೆ ಹೊಂದಿಕೆಯಾಗುವಂತಹ ಸುಂದರವಾದ ಹೊದಿಕೆ ಚಿತ್ರವನ್ನು ಬರೆದು ಕೊಟ್ಟ ಶ್ರೀ. ವಾಮನ ಶಿರಹಟ್ಟಿಯವರಿಗೂ ನಾವು ತುಂಬ ಕೃತಜ್ಞರಾಗಿದ್ದೇವೆ.

—ಸಂಪಾದಕ.

# ೧

ಒಂದು ಸಣ್ಣ ಗುಡ್ಡ. ಮೂಡಲಿಂದ ಪಡು ಕಡೆಗೆ ಹೋಗುವ ಹಾದಿಯು ತೆಂಕಣಿಂದ ಬಡಗಲು ಹೋಗುವ ಹಾದಿಯನ್ನು ಆ ಗುಡ್ಡದ ಮೇಲೆಯೇ ದಾಟುತ್ತಿತ್ತು. ಅಲ್ಲೇ ನಿದ್ರಿಸುವ ಒಂದು ಹಳ್ಳಿ. ದಾರಿಗಳ ಎರಡೂ ಕಡೆಗಳಲ್ಲಿ ಗುಂಪಾಗಿ ಸಾಲಿನಲ್ಲಿದ್ದ ಗುಡಿಸಲುಗಳು ಕ್ರೂಜೆಯ (Cross) ಕೈಗಳಂತೆ ಕಾಣುತ್ತಿದ್ದವು. ನಡುವಿನ ಚಿಕ್ಕ ಚೌಕದಲ್ಲಿ ದೇವಾಲಯದ ಗೋಪುರವು ಮೇಲೇರಿತ್ತು. ಗುಡ್ಡದ ಕೆಳಗೆ ಸಣ್ಣ ತೊರೆಯೊಂದು, ಮಂಜಿನ ಮುಸುಕಿನಲ್ಲಿ ಕಾಣದಂತಾಗಿ ಒಂದು ಕೊರಕಲಿನಲ್ಲಿ ಹರಿಯುತ್ತಿತ್ತು.

ಕೊಡಗಳೆರಡನ್ನು ಹಿಡಿದು ಮುದುಕಿಯೊಬ್ಬಳು ಗುಡಿಸಲಿನಿಂದ ಹೊರಗೆ ಬಂದಳು. ಹೆಗಲ ಮೇಲೆ ಹೊತ್ತಿದ್ದ ಬಿದಿರಿಗೆ ತೂಗುಹಾಕಿದ ಆ ಕೊಡಗಳು ಭಾರದಿಂದ ಅಲ್ಲಾಡುತ್ತಾ ಅವಳ ನಿದಾನವಾದ ನಡಿಗೆಗೆ ತಾಳಗಟ್ಟುತ್ತಿದ್ದುವು. ಇಳಿಜಾರಾದ ಕಾಲುದಾರಿಯಿಂದ ಇಳಿದು, ಮುದುಕಿಯು ಹೊಳೆಯ ದಡೆಗೆ ಬಂದಳು. ಹೊಳೆಯನ್ನು ಮುಚ್ಚಿದ ಹಿಮದ ನಡುವಿನಲ್ಲಿ ತೋರುತ್ತಿದ್ದ ಕೂತಿನ ಬಳಿ ಕೊಡಗಳನ್ನಿಟ್ಟು ಆಕೆ ಸುತ್ತಲೂ ನೋಡಿದಳು. ಯಾರೂ ಕಾಣಿಸುತ್ತಿದ್ದಿಲ್ಲ. ಸುತ್ತಲಿನ ಗುಡಿಸಲುಗಳೆಲ್ಲ ದುಃಖದ ಮೌನವನ್ನು ತಾಳಿದ್ದವು. ಮುದುಕಿಯು ಒಂದು ಕ್ಷಣ ನಿಶ್ಚಲವಾಗಿ ನಿಂತಳು. ಆಮೇಲೆ ಕೊಡಗಳನ್ನು ಅಲ್ಲೇ ಬಿಟ್ಟು ನದಿಯ ದಂಡೆಗುಂಟ ಸ್ವಲ್ಪ ಮುಂದೆ ನಡೆದಳು.

ಅಲ್ಲಿ ನದಿಯ ಪ್ರವಾಹವು ಬಲಗಡೆಗೆ ತಿರುಗಿ ಸ್ವಲ್ಪ ದೊಡ್ಡದೊಂದು ಕೊರಕಲಿನೊಳಗೆ ಹರಿಯುತ್ತಿತ್ತು. ಅದರ ದಡದಲ್ಲಿದ್ದ ಕಾಲುದಾರಿಯು ದಟ್ಟವಾಗಿ ಬೆಳೆದ ಪೊದೆಗಳಿಂದ ಮುಚ್ಚಿಹೋಗಿತ್ತು. ಮುದುಕಿಯು ಗಿಡಗಳ ಕೊಂಬೆಗಳನ್ನು ಕೈಗಳಿಂದ ದೂರ ತಳ್ಳುತ್ತಾ ಆ ದಾರಿಯಲ್ಲಿ ಮುಂದೆ ಹೋದಳು.

ಥಕ್ಕನೆ ಕೊನೆಗೊಳ್ಳುವ ಕುರುಡು ದಾರಿ ಅದು. ಮಂದ, ಜಡದೃಷ್ಟಿಯಿಂದ ಮುದುಕಿಯು ಮುಂದೆ ನೋಡಿದಳು. ನಿಸರ್ಗವು ಅಲ್ಲಿ ತನ್ನ ಸೊಬಗನ್ನು ಪಸರಿಸಿತ್ತು. ಹಿಮದಿಂದ ಆಚ್ಛಾದಿತವಾದ ದಿನ್ನೆಗಳು ಶುಭ್ರ ಬಿಳಿ ಉಡುಪನ್ನು ಧರಿಸಿದಂತೆ ಭಾಸವಾಗುತ್ತಿತ್ತು. ಗಿಡಗಳ ಗೆಲ್ಲುಗಳಿಗೆ ತೂಗುತ್ತಿದ್ದ ಮಂಜಿನ ಕಣಗಳು ರವಿಬೆಳಕಿನಲ್ಲಿ ರನ್ನಕಣಗಳಂತೆ ಮಿನುಗುತ್ತಿದ್ದವು. ಎಲೆಗಳ ಹಸುರು ಹಾಗೂ ಹೂಗಳ ವಿವಿಧ ಬಣ್ಣಗಳು ಹಿಮದ ಬಿಳಿ ಪಾರ್ಶ್ವಭೂಮಿಯ ಮೇಲೆ ಅತ್ಯಂತ ಮನೋಹರವಾಗಿ ಕಾಣುತ್ತಿದ್ದವು.

ಆದರೆ ಮುದುಕಿಯ ದೃಷ್ಟಿ ಈ ಸೊಬಗಿನ ಸಂಗ್ರಿಯ ಕಡೆಗೆ ಹರಿಯಲಿಲ್ಲ. ಹಿಮ ಇಬ್ಭಾಗವಾದೆಡೆಗಳಲ್ಲಿ ಏನೋ ಕಪ್ಪಗೆ ಕಾಣಿಸುತ್ತಿದ್ದುದನ್ನು ಅವಳು ಎವೆಯಿಕ್ಕದೆ ನೋಡುತ್ತಿದ್ದಳು. ಒಂದೆಡೆ ಹರಕು ಅರಿವೆಯ ರಾಶಿಯೊಂದಿತ್ತು. ಲೋಹದ ಚಿಕ್ಕ ತುಂಡುಗಳು ಹಾಗೂ ಮಣ್ಣು ಹಿಡಿದ ಮೊಳೆಗಳು ಅಲ್ಲಲ್ಲಿ ಬಿದ್ದಿದ್ದವು.

ಮುದುಕಿಯು ಎರಡು ಹೆಜ್ಜೆ ಮುಂದರಿದು ನೆಲವನ್ನು ನೋಡುತ್ತಾ ಮೂರ್ಛೆ ಹೋದವಳಂತೆ ಬಿದ್ದುಬಿಟ್ಟಳು. ಹೌದು, ಅವನೇ ಅದು. ಶರೀರವು ಹಿಮಗಟ್ಟಿ ಹೋದರೂ ಕಾಲುಗಳನ್ನು ಉದ್ದಕ್ಕೆ ಚಾಚಿ ಮಲಗಿದಂತೆ ಮೊದಲಿಗೆ ಭಾಸವಾಗುತ್ತಿತ್ತು. ಹಸ್ತಿದಂತದಲ್ಲಿ ಕತ್ತಿದಂತೆ ಬೆಳ್ಳಗಿದ್ದ ಸುಂದರ ಮುಖ. ಎಳೆಯವನಾಗಿರುವಾಗ, ತಾಯಿಯ ತುಟಿಯ ಮುತ್ತಿನ ಮುದ್ರೆ ಬೀಳದ ಭಾಗ ಆ ಮುಖದಲ್ಲಿ ಯಾವುದೂ ಇರಲಿಲ್ಲ. ದೊಡ್ಡವನಾದ ಮೇಲೆ ಹಿಂದಿನ ಸವಿನೆನವು ಹಾಗೂ ಮುಂದಿನ ಸವಿಗನಸುಗಳಿಂದ ಉಕ್ಕೇರುವ ಆನಂದವನ್ನು ಇಮ್ಮಡಿಯಾಗಿಸಿದ ಆ ನಗುಮೊಗ, ಇಂದು ಅದೇ ಮುಖ ಅಹುದೋ ಅಲ್ಲವೋ ಎನ್ನುವಷ್ಟು ನಿಶ್ಚೇತನವಾಗಿ ಬಿದ್ದಿದೆ. ಸಂತೋಷ ಉತ್ಸಾಹಗಳಿಂದ ಸದಾ ಕುಣಿಯುತ್ತಲಿದ್ದ ಕಣ್ಣುಗಳು ಇಂದು ರೆಪ್ಪೆಗಳಿಂದ ಅರ್ಧ ಮುಚ್ಚಲ್ಪಟ್ಟು ನಿರ್ಜೀವವಾಗಿದೆ. ಆದಗೂ ಮುಖದಲ್ಲಿ ಅಂತ್ಯಕಾಲದ ದೃಢಪ್ರತಿಜ್ಞೆಯ ಶಾಂತತೆ ಕಾಣುತ್ತಿದೆ.

ಒಳಗಿನ ನೀಲಿ ಬಣ್ಣದ ಅರ್ಧ ಚಡ್ಡಿಯನ್ನು ಬಿಟ್ಟರೆ ಮೈ ಮೇಲಿನ ಬಟ್ಟೆ ಬೇರೇನೂ ಉಳಿದಿರಲಿಲ್ಲ. ಎಲ್ಲವನ್ನೂ ದುಷ್ಟ ಜರ್ಮನ್ ಸೈನಿಕರು

ಕಸಕೊಂಡಿದ್ದರು ಆ ಕಾಳಗದ ದಿನ, ಅವನನ್ನು ಕೊಂದ ದಿನ ಅವಳಿಗೆ ನೆನಪಿಗೆ ಬಂತು ಅಂದು ಅತಿಯಾಗಿ ಹಿಮ ಬಿದ್ದಿತ್ತು ಮೃತದೇಹ ಬಹು ಬೇಗನೆ ಹಿಮುಗಟ್ಟಿದ್ದರಿಂದ ಮೈಗೆ ಬಿಗಿಯಾಗಿ ಅಂಟಿಕೊಂಡಿದ್ದ ಅರ್ಧಚಣ್ಣ ವನ್ನು ಮಾತ್ರ ತೆಗೆಯಲು ಅವರಿಗೆ ಸಾಧ್ಯವಾಗಿರಲಿಲ್ಲ

ಮುದುಕಿಯು ದಿಟ್ಟಿಸಿ ನೋಡಿದಳು. ನೋಡಿದ್ದನ್ನು ಹೃದಯಕ್ಕೆ ಮುಟ್ಟಿಸುವ ಕೆಲಸವನ್ನು ಕಣ್ಣು ಮಾಡಿತು ಕಾಲುಚೀಲವನ್ನೂ ಕಸಕೊಂಡಿದ್ದರಿಂದ ಬರಿದಾದ ಕಾಲಬೆರಳು ಚಳಿಯಿಂದ ಒಡೆದು ಹೋಗಿ ಮಾಂಸ ಹೊರಗೆ ಕಾಣುತ್ತಿತ್ತು ಕೆನ್ನೆಯ ಮೇಲೆ ಕಾಣುತ್ತಿದ್ದ ದೊಡ್ಡ ತೂತು ಪ್ರಾಣವನ್ನು ತೆಗೆದು ಗುಂಡು ಒಳಗೆ ಹೊಕ್ಕಿದ್ದ ದಾರಿಯನ್ನು ತೋರಿಸುತ್ತಿತ್ತು ಅದರ ಸುತ್ತಲೂ ಬಿದ್ದಿದ್ದ ನೆತ್ತರು ಬಿಳಿ ಹಿಮದ ಮೇಲೆ ಇನ್ನಷ್ಟು ಕೆಂಪಾಗಿ ತೋರುತ್ತಿತ್ತು ಮುರುಟಿ ಹೋಗಿ ಭೂಮಿಯಲ್ಲಿ ಹೂತಿದ್ದ ಕೈ ಬೆರಳುಗಳು ಅಂತ್ಯಕಾಲದ ಕೊನೆಯ ವೇದನೆಯನ್ನು ಸೂಚಿಸುತ್ತಿದ್ದುವು

ಮುದುಕಿಯ ಕಣ್ಣಿನಲ್ಲಿ ನೀರು ಬರಲಿಲ್ಲ ಅವಳ ದುಃಖವು ಅಳುವನ್ನೂ ನೀಗಿಸುವಂತಹುದಾಗಿತ್ತು. ನಡುಗುವ ಕೈಯನ್ನವಳು ಮೆಲ್ಲನೆ ಮುಂದೆ ಮಾಡಿದಳು ಅವನ ಮುಖದ ಮೇಲೆ ಬಿದ್ದಿದ್ದ ಮಂಜನ್ನು ತೆಗೆದು ಕೆನ್ನೆಯನ್ನು ಕೋಮಲ ಕೈಗಳಿಂದ ಸವರಿದಳು ಕೆಲವು ಕೂದಲುಗಳು ಗಾಳಿಗೆ ಹಾರಿ ಗುಂಡಿನೇಟಿನ ಗಾಯದ ಮೇಲೆ ಬಿದ್ದಿದ್ದುವು ಅವನ್ನು ಹಿಂದೆ ದೂಡಲು ಕೈ ಮುಂದೆ ಮಾಡಿದಳು ಆದರೆ ಆ ಕೂಡಲೇ ಫಕ್ಕನೆ ಹಿಂಜರಿದಳು ಗಾಯಕ್ಕೆ ಮುಟ್ಟಿದರೆ ನೋವು ಹೆಚ್ಚಾದೀತೆಂತ ಹೆದರಿದಳೇನೋ ಮಾತೃಹೃದಯದ ಕೋಮಲತೆ ಅದು ಮಗನು ಜೀವಂತನಿಲ್ಲನೆಂಬುದನ್ನೂ ಮರೆಸಬಲ್ಲುದು ಇನ್ನೊಮ್ಮೆ ಮಗನನ್ನು ನೋಡಿದಳು

"ಸೊನ್ನೀ "

ಮಗನ ಈ ಮುದ್ದು ಹೆಸರು ಅವಳ ತುಟಿಗಳಿಂದ ಹೊರಬಿತ್ತು

"ಸೊನ್ನೀ . "

ತಾಯಿಯ ಪ್ರೇಮ ಆಕಾಂಕ್ಷೆಗಳೆಲ್ಲವೂ ಅಡಕವಾಗಿರುವ ಅಕ್ಕರೆಯ ಶಬ್ದಗಳು. ಆದರೆ ಸೊನ್ನೀಗೆ ಅವು ಕೇಳಿಸುವುವೆ ?

"ಸೋನ್ನೀ .. ..."

ಈ ಶಬ್ದಗಳನ್ನು ಇನ್ನೊಮ್ಮೆ ಉಚ್ಚರಿಸಿದಳು. ಈ ಶಬ್ದಗಳನ್ನು ಕೇಳಿ ಅವನು ಏಳುವನೆಂಬ ಆಸೆಯಿಂದೆಂಬಂತೆ ಅಲ್ಲೇ ನಿಶ್ಚಲಳಾಗಿ ನಿಂತುಬಿಟ್ಟಳು

ಹತ್ತಿರದಲ್ಲಿ ಮರದ ಮೇಲೆ ಕೂತಿದ್ದ ರಣಹದ್ದೊಂದು ಹಾರಿ ಬಂದು ಅವನ ಮೃತದೇಹವನ್ನು ಕುಕ್ಕಿತು. ಅದರ ರೆಕ್ಕೆಗಳ ಸಪ್ಪಳಕ್ಕೆ ಅವಳು ತನ್ನ ಸಮಾಧಿಯಿಂದ ಎಚ್ಚತ್ತಳು.

"ಶೂ"

ರಣಹದ್ದು ಸ್ವಲ್ಪ ದೂರ ಹಾರಿ ತಿರುಗೊಮ್ಮೆ ದೇಹದ ಕಡೆಗೆ ಬಂತು. ಮುದುಕಿಯು ಒಂದು ಕಲ್ಲನ್ನು ಹೆಕ್ಕಿ ರಣಹದ್ದಿಗೆ ಒಗೆದಳು. ಭಾರವಾದ ತನ್ನ ರೆಕ್ಕೆಗಳನ್ನು ಅಲ್ಲಾಡಿಸುತ್ತಾ ಅದು ಹಾರಿಹೋಯಿತು. ಮುದುಕಿಯು ಒಂದು ನಿಟ್ಟುಸಿರನ್ನು ಬಿಟ್ಟು ಮಗನನ್ನು ಮತ್ತೊಮ್ಮೆ ನೋಡಿ ಬಂದ ಕಡೆಗೆ ಹಿಂದಿರುಗಿದಳು. ಕೊಡಗಳಿಟ್ಟಲ್ಲಿಗೆ ಬಂದು ನೀರನ್ನು ತುಂಬಿಸಿ ಕೊಡಗಳನ್ನು ಬಿದಿರಿಗೆ ಸಿಕ್ಕಿಸಿ ಹೆಗಲ ಮೇಲಿಟ್ಟುಕೊಂಡಳು. ಹಾಗೂ ಹೊರೆಯ ಭಾರದಿಂದ ಬಗ್ಗಿ ದೀರ್ಘಶ್ವಾಸದಿಂದ ಮುದುಕಿಯು ಏರನ್ನು ಹತ್ತಿ ಗುಡಿಸಲಿಗೆ ಬಂದಳು.

"ಇಷ್ಟು ತಡವೇಕೆ? ನಿನಗಾಗಿ ಎಷ್ಟು ಹೊತ್ತು ಕಾಯಲಿ?" ಬಾಗಿಲ ಬಳಿ ನಿಂತಿದ್ದ ಯುವತಿಯೊಬ್ಬಳು ಸಿಟ್ಟಿನಿಂದ ನುಡಿದಳು.

ಮುದುಕಿಯು ಮರುಮಾತಾಡಲಿಲ್ಲ. ನೆಟ್ಟಗೆ ಒಲೆಯ ಹತ್ತಿರ ಹೋಗಿ ಒಲೆಯಮೇಲಿದ್ದ ಪಾತ್ರೆಯಲ್ಲಿ ನೀರನ್ನು ಸುರಿದು ಒಲೆಯಲ್ಲಿ ಕಟ್ಟಿಗೆಯ ತುಂಡುಗಳನ್ನು ಒಗೆದಳು.

"ಒಂದು ಲೋಟ ನೀರು ಕೊಡು, ಬಾಯಾರಿಕೆಯಾಗಿದೆ." ಯುವತಿಯು ಮುದುಕಿಯ ಮೌನದಿಂದ ಇನ್ನಷ್ಟು ಸಿಟ್ಟಿಗೆದ್ದು ನುಡಿದಳು.

"ಕೊಡದಲ್ಲಿ ನೀರಿದೆ. ಬೇಕಷ್ಟು ತಕೊ" ಮುದುಕಿಯು ಶಾಂತಳಾಗಿ ಉತ್ತರವಿತ್ತಳು.

ಯುವತಿಯ ಕೋಪವು ನೆತ್ತಿಗೇರಿತು. ಅದರ ಅತಿರೇಕದಿಂದ ನಡುಗಿ, "ನನ್ನ ಗಂಡ ಬರಲಿ, ಅವನಿಗೆ ಹೇಳುವೆ" ಎಂದು ಹೆದರಿಸಿದಳು.

ಮುದುಕಿಯು ತಿರಸ್ಕಾರದ ದೃಷ್ಟಿಯೊಂದನ್ನು ಬೀರಿದಳು.

"ಗಂಡ!"

ಒಲೆಯಲ್ಲಿ ಕಟ್ಟಿಗೆ ಕೂಡಿಸುತ್ತಾ ಮುದುಕಿಯು ತನ್ನ ವಿಚಾರಗಳಲ್ಲೇ ಮಗ್ನಳಾದಳು. ವಿಧಿಯ ವೈಚಿತ್ರ್ಯ! ಆ ಹಳ್ಳಿಯಲ್ಲಿದ್ದ ಮುನ್ನೂರು ಮನೆಗಳಲ್ಲಿ ಪ್ರತಿ ಮನೆಯಿಂದ ಒಬ್ಬನಾದರೂ ಯುದ್ಧಕ್ಕೆ ಹೋಗಿದ್ದನು. ಅವರೆಲ್ಲರ ಪೈಕಿ ಅವಳ ಮಗನಿಗೆ ಮಾತ್ರ ಈ ದುರ್ದೈವವು ಒದಗಿತು. ಅಲ್ಲೇ ನದಿದಂಡೆಯಲ್ಲಿ ಅವನು ಮಲಗಿ ಒಂದು ತಿಂಗಳಾಯಿತು. ಅವನ ಶವಸಂಸ್ಕಾರವನ್ನು ಮಾಡಲು ಕೂಡ ಜರ್ಮನ ಅಧಿಕಾರಿಗಳು ಬಿಡುತ್ತಿರಲಿಲ್ಲ. ಸತ್ತು ಹಿಮದಿಂದ ಮರಗಟ್ಟಿ ಹೋಗಿ ಒಂದು ತಿಂಗಳಾದರೂ ಅವರ ದ್ವೇಷಬುದ್ಧಿ ಮಾತ್ರ ಎಳ್ಳಷ್ಟು ಕಡಿಮೆಯಾಗಿರಲಿಲ್ಲ. ನಾಡಿನ ಸ್ವಾತಂತ್ರ್ಯವನ್ನು ಉಳಿಸಲು ಆ ಊರಿನಿಂದ ದಂಡಿಗೆ ಹೋದವರಲ್ಲಿ ಎಷ್ಟೋ ಜನರು ಜೀವ ಕೊಟ್ಟಿದ್ದರು. ಆದರೆ, ತನ್ನ ಊರಲ್ಲೇ, ತನ್ನ ಮನೆಯಿಂದ ಬರೀ ಇನ್ನೂರು ಹೆಜ್ಜೆಗಳಷ್ಟು ಸಮೀಪದ ಕೊರಕಲಿನಲ್ಲಿ ಸತ್ತುಬಿದ್ದು ರಣಹದ್ದುಗಳಿಂದ ತಿನ್ನಲ್ಪಡುವ ದುರ್ದೈವ ಅವಳ ಮಗನ ಪಾಲಿಗೆ ಮಾತ್ರ ಬಂದಿತ್ತು. ಈ ಆಪತ್ತನ್ನು ಅವಳ ಮೇಲೆ ಹೇರಿದರೂ ಕೂಡ ವಿಧಿಯು ತೃಪ್ತಿ ಹೊಂದಲಿಲ್ಲ. ಅವಳನ್ನು ಅಣಕಿಸಲೆಂಬಂತೆ ಆ ಜರ್ಮನ ಆಫೀಸರನು ತಾನು ಇಟ್ಟುಕೊಂಡವಳನ್ನು ಅವಳ ಮನೆಯಲ್ಲೇ ಇರಿಸಿದ್ದನ. ಅದೂ ಅವಳು ಆಫೀಸರನಂತೆಯೇ ಅಪರಿಚಿತ ಅನ್ಯಭಾಷೆಯನ್ನಾಡುವ ಜರ್ಮನಳಾದರೆ ಮುದುಕಿಗೆ ಅಷ್ಟು ವ್ಯಥೆಯಾಗುತ್ತಿರಲಿಲ್ಲ. ಆದರೆ ಇವಳು ತಮ್ಮವಳೇ, ಕೆಂಪು ಸೇನೆಯ ಓರ್ವ ನಾಯಕನ ಧರ್ಮಪತ್ನಿ. ಸುಖದಾಸೆಯಿಂದ ರೇಶ್ಮೆ ಉಡುಪಿಗೂ ಫ್ರೆಂಚ ಮದ್ಯಕ್ಕೂ ಮರುಳಾಗಿ ತನ್ನ ದೇಶ, ಧರ್ಮ, ಅವುಗಳಿಗಾಗಿ ಜೀವದ ಹಂಗುದೊರೆದು ಕಾದಾಡುವ ತನ್ನ ಗಂಡ, ನಾಡಿನ ಸ್ವಾತಂತ್ರ್ಯಕ್ಕಾಗಿ ಪ್ರಾಣವನ್ನರ್ಪಿಸಿದ ಸ್ತ್ರೀಪುರುಷರು, ಇವರೆಲ್ಲರಿಗೂ ದ್ರೋಹ ಬಗೆದು ಈ ಜರ್ಮನ ಆಫೀಸರನ ಸೂಳೆಯಾಗಿದ್ದಳು. ಈ ಕುಲಗೆಟ್ಟ ಹೆಂಗಸು ತನ್ನ ಮನೆಯಲ್ಲಿ ಗರಿಯ ತೆಳ್ಳನ್ನ ಹಾಸಿಗೆಯಲ್ಲಿ ಹೊರಳಾಡುತ್ತ ನೌಕರಳಂತೆ ತನಗೆ ಆಜ್ಞೆ ಮಾಡುವಾಗ ಮುದುಕಿಯ ಮೈ ಜುಮ್ಮೆನ್ನುತ್ತಿತ್ತು. ತಿರ

ಸ್ಕಾರ, ದ್ವೇಷ, ರೋಷಗಳ ಸಮ್ಮಿಲಿತ ತೀವ್ರಭಾವನೆಯಿಂದ ಅವಳ ರಕ್ತವು ಕುದಿಯುತ್ತಿತ್ತು.

ಮಲಗುವ ಕೋಣೆಯಿಂದ ಬರುತ್ತಲಿದ್ದ ಬೈಗಳ ಸುರಿಮಳೆಯನ್ನು ತುಚ್ಛೀಕರಿಸಿ ಮುದುಕಿಯು ಮೆಲ್ಲನೆ ಹೇಳಿದಳು

" ನಿಲ್ಲು. ನಿಲ್ಲು ಗಡಿಬಿಡಿ ಮಾಡಬೇಡ ನಿನಗೆ ಎಲ್ಲಾ ಸಿಗುವುದು, ಚೆನ್ನಾಗಿ ಸಿಗುವುದು. ಹುಟ್ಟದಿದ್ದರೇನೆ ಒಳಿತಾಗುತ್ತಿತ್ತು ಎಂದು ನೂರು ಬಾರಿ ಅನ್ನುವಷ್ಟು ಸಿಗುವುದು. "

ಬೂಟುಗಳ ಸಪ್ಪಳ ಕೇಳಿಸಿತು ಜರ್ಮನ ಆಫೀಸರನು ಒಳಗೆ ಬಂದನು ಮುದುಕಿಯು ಏಳಲಿಲ್ಲ ತಿರಸ್ಕಾರದಿಂದ ಹಲ್ಲುಕಚ್ಚಿದಳು ಅವಳ ಸ್ಥೈರ್ಯ, ಗಾಂಭೀರ್ಯಗಳು ಆಫೀಸರನ ಮೇಲೂ ಸ್ವಲ್ಪ ಪರಿಣಾಮವನ್ನುಂಟುಮಾಡಿದುವು. ಅವಿಧೇಯತೆಗಾಗಿ ಅವಳನ್ನು ಎಚ್ಚರಿಸಲಿಲ್ಲ ಅವಳ ಕಡೆಗೆ ನೋಡದಂತೆ ನಟಿಸಿ ಮಲಗುವ ಕೋಣೆಯೊಳಗೆ ಹೋದನು

"ಏನು, ಇನ್ನೂ ಹಾಸಿಗೆಯಲ್ಲೇ ? " ತನ್ನ ಪ್ರೇಯಸಿಯನ್ನುದ್ದೇಶಿಸಿ ಕೇಳಿದನು

" ಯಾಕೆ ಏಳಲಿ ? ನೀನಿಲ್ಲಿರುವುದೇ ಇಲ್ಲ ನನಗೆ ಬೇಸರಿಕೆಯಿಂದ ಅಳು ಬರುತ್ತದೆ ಇಡೀ ದಿನ ನಾನು ಈ ಹಾಳು ಹೆಂಗಸಿನ ಜೊತೆಯಲ್ಲಿ ಇರಬೇಕು ಒಂದು ದಿನ ಅವಳು ನನಗೆ ವಿಷ ಕೊಟ್ಟೇ ಕೊಡುವಳು "

ಅವನು ಹಾಸಿಗೆ ಬಳಿ ಕುಳಿತನು.

"ಹುಚ್ಚಿ, ಬಾರೇ ಇಲ್ಲಿ ಯಜಮಾನಳು ನೀನೇ, ತಿಳಿಯಿತೇ ? ಬೇಸರಿಕೆ ಏಕೆ ? ಹೊತ್ತು ಹೋಗುವುದಿಲ್ಲವಾದರೆ ಏನಾದರೂ ಓದು, ಇಲ್ಲವೆ ಗ್ರಾಮಫೋನ್ ಹಚ್ಚು ಗಾನದೋಸೆಗಳ ರಾಶಿಯೇ ಬಿದ್ದದೆ ನನ್ನ ಬಿಡುವಿನ ಪ್ರತಿ ಕ್ಷಣವನ್ನೂ ನಿನ್ನೊಡನೆ ಕಳೆಯುತ್ತಿದ್ದೇನೆ ಆದರೆ ಇದು ಯುದ್ಧ, ಹೆಚ್ಚಿನ ಬಿಡುವು ದೊರೆಯುವುದು ಹೇಗೆ ತಾನೆ ಸಾಧ್ಯ "

ಯುವತಿಯು ನಿಟ್ಟುಸಿರು ಬಿಟ್ಟಳು.

"ಯುದ್ಧ, ಯಾವಾಗಲೂ ಯುದ್ಧ, ರಜೆ ತೆಗೆದುಕೊಂಡಾದರೂ ನನ್ನನ್ನು ಇಲ್ಲಿಂದ ಕರೆದೊಯ್ಯಬಾರದೇ ? "

ಆಫೀಸರನು ಹುಸಿನಗೆಯನ್ನು ನಕ್ಕನು

"ಮೂರ್ಖಳು ! ರಜೆ ಪಡೆಯಲು ಇದು ಸಮಯವಲ್ಲ. ಅಲ್ಲದೆ, ನಿನ್ನನ್ನೊಬ್ಬಳನ್ನೇ ಜರ್ಮನಿಗೆ ಕಳಿಸಿದರೆ ಅಲ್ಲಿ ನೀನೇನು ಮಾಡುವೆ? ನಾವಿಬ್ಬರೂ ಒಂದೆಡೆ ಇರುವುದೇ ಒಳಿತಲ್ಲವೇ ? "

ಅವಳು ಪ್ರತ್ಯುತ್ತರ ಕೊಡಲಿಲ್ಲ ಮೆಲ್ಲನೆ ಎದ್ದು ಖುರ್ಚಿಯ ಮೇಲಿದ್ದ ತನ್ನ ಅರಿವೆಗಳನ್ನು ತೆಗೆದಳು. ಆಫೀಸರನು ಮಂಚದ ಬದಿಯಿಂದೆದ್ದು ಬೆಂಚಿನ ಮೇಲೆ ಕುಳಿತು ಅವಳನ್ನೇ ನೋಡುತ್ತಿದ್ದನು. ನಿಜವಾಗಿಯೂ ಅವಳು ರೂಪವತಿಯಿದ್ದಳು ಆದ್ದರಿಂದಲೇ ಅವನು ಅವಳನ್ನು ಹೋದೆಡೆಯಲ್ಲೆಲ್ಲಾ ಒಯ್ಯುತ್ತಿದ್ದನು. ಈ ಮೊದಲು ಅವನು ಅನುಭವಿಸಿದ್ದ ಸ್ತ್ರೀಯರಿಗಿಂತ ಅವಳು ನಿಸ್ಸಂದೇಹವಾಗಿ ಬೇರೆಯಾಗಿದ್ದಳು.

"ಪುಸ್ಯಾ, ಇಲ್ಲಿಯ ಉಪಾಧ್ಯಾಯಿನಿಯು ನಿನ್ನ ಅಕ್ಕಳೆಂದು ಯಾರೊ ನನಗೆ ಹೇಳಿದರು "

ಪುಸ್ಯಾಳು ಕಾಲಿಗೆ ತೊಡಲು ತೆಗೆದಿದ್ದ ಕಾಲುಚೀಲವನ್ನು ಕೈಯಲ್ಲೇ ಹಿಡಿದು ಕೊರಳನ್ನು ನೇರಮಾಡಿ ಅವನನ್ನೇ ದಿಟ್ಟಿಸಿ ನೋಡಿದಳು.

"ಹೌದು, ಅವಳು ನನ್ನ ಅಕ್ಕ, ಅದರಿಂದೇನು ?"

"ನಮ್ಮ ಮೇಲೆ ಅವಳಿಗೇನೂ ಪ್ರೀತಿ ಇಲ್ಲ, ಈ ನಿನ್ನ ಅಕ್ಕನಿಗೆ ''

ಪುಸ್ಯಾಳು ಸಂಶಯಾತ್ಮಕ ದೃಷ್ಟಿಯಿಂದ ನೋಡಿದಳು.

''ನೀನು ಅವಳನ್ನು ಮೆಚ್ಚಿರುವೆಯೇನು?"

ಅವನು ನಕ್ಕನು ಪರ್ವತ ಕಂದರದಲ್ಲಿ ಬೀಸುವ ಬಿರುಗಾಳಿಯಂತೆ ಕರ್ಕಶವಾಗಿತ್ತು ಆ ನಗು.

''ಎಂದಿಗೂ ಇಲ್ಲ. ಎಂತಹ ಕಲ್ಪನೆ ನನಗೆ ದಪ್ಪ ಹೆಂಗಸರು ರುಚಿಸುವುದೇ ಇಲ್ಲ. ಅವಳ ಕಾಲುಗಳು ಎಷ್ಟು ಕೊಬ್ಬಿವೆ ! ನನ್ನ... .... ..." ಹೆಂಡತಿಯ ಕಾಲಿನಂತೆ ಎಂತ ಹೇಳ ಹೊರಟಿದ್ದನು. ಫಕ್ಕನೆ ಅಲ್ಲೇ ನಿಲ್ಲಿಸಿದನು

ಪುಸ್ಯಾಳು ತನ್ನ ಸುಂದರ ಕಾಲುಗಳ ಕಡೆಗೆ ಅಭಿಮಾನದಿಂದ ನೋಡಿದಳು.

"ಹೌದು, ಅವಳು ಸ್ವಲ್ಪ ದಪ್ಪಗೆ ಇದ್ದಾಳೆ"

"ನಿನಗೆ ಇಲ್ಲೊಬ್ಬ ಅಕ್ಕ ಇದ್ದಾಳೆಂದು ನೀನು ನನಗೆ ಹೇಳಲೇ ಇಲ್ಲ"

"ಯಾಕೆ ಹೇಳಲಿ, ನಾವು ಒಬ್ಬರಿಂದೊಬ್ಬರು ದೂರವಿದ್ದೆವು. ಭೆಟ್ಟಿ ಕೂಡಾ ಆಗುತ್ತಿರಲಿಲ್ಲ ಅವಳ ಸ್ವಭಾವ ಬೇರೆಯೇ."

"ಬೇರೆ ಅಂದರೆ ಹೇಗೆ?"

"ಅವಳು ಮಕ್ಕಳಿಗೆ ಪಾಠ ಹೇಳುವಳು ಹಗಲಿರುಳು ದುಡಿಯು ತ್ತಾಳೆ. ಈ ಬಿಡುವಿಲ್ಲದ ದುಡಿಮೆಯಿಂದ ಅವಳಿಗೆ ಸಿಗುವುದಾದರೂ ಏನು? ಏನೂ ಇಲ್ಲ ಅವಳಿಗೆ ಆಸೆ ಎಂಬುದೇ ಇಲ್ಲ ಎಲ್ಲದರಲ್ಲಿಯೂ ಅವಳಿಗೆ ಸಮಾಧಾನ. ಎಲ್ಲದರಿಂದಲೂ ಅವಳಿಗೆ ತೃಪ್ತಿ"

"ಸ್ಪಷ್ಟ ಹೇಳುವುದಾದರೆ ಅವಳು ಬೊಲ್ಶೆವಿಕಳು ಅಲ್ಲವೆ?" ಆಫೀಸ ರನು ಎಳೆನಗು ನಗುತ್ತಾ ನುಡಿದನು.

"ಯಾರು ಬಲ್ಲರು? ಇದ್ದರೂ ಇರಬಹುದು" ಪುಸ್ಯಾ ಬೇಸರದ ದನಿ ಯಲ್ಲಿ ಹೇಳಿದಳು ಆದರೆ ಆ ಕೂಡಲೆ ಫಕ್ಕನೆ ಸಿಟ್ಟಿಗೆದ್ದು "ನೀನು ಅವಳ ವಿಷಯ ಇಷ್ಟು ಪ್ರಶ್ನೆಗಳನ್ನೇಕೆ ಕೇಳುತ್ತಿರುವೆ? ಅವಳಂಥ ದಪ್ಪ ಹೆಂಗಸರು ನಿನಗೆ ರುಚಿಸುವದಿಲ್ಲವಂತೆ- ಮತ್ತೇಕೆ ಅವಳ ಬಗ್ಗೆ ಇಷ್ಟು ಕುತೂಹಲ?"

"ನನಗೆ ಅವಳಲ್ಲಿ ಕುತೂಹಲವಿದ್ದರೆ ಅದು ಅವಳು ಸ್ತ್ರೀ ಎಂಬುದರಿಂ ದಲ್ಲ. ಇದನ್ನು ನಿನಗೆ ಖಾತ್ರಿಯಿಂದ ಹೇಳುತ್ತೇನೆ" ಎಂದು ಹೇಳಿ ಕಿಸೆ ಯಿಂದ ಒಂದು ಚೋಕೊಲೇಟಿನ ಪೊಟ್ಣವನ್ನು ತೆಗೆದು "ಇದನ್ನು ತಗೊಂಡು ಬಾಯಿ ಸಿಹಿ ಮಾಡು ನನಗೆ ತುಂಬಾ ಕೆಲಸವಿದೆ ಆದಷ್ಟು ಬೇಗನೇ ಬರುವೆ." ಎಂದು ಹೇಳಿ ಹೊರಡಲುದ್ಯುಕ್ತನಾದನು.

ಪುಸ್ಯಾಳ ಮೋರೆ ಸಣ್ಣದಾಯಿತು

"ಒಬ್ಬಂಟಿಗಳು, ಇಡೀ ದಿನ ಒಬ್ಬಳೇ. ಈ ಯುದ್ಧ ಮುಗಿಯುವು ದಾದರೂ ಎಂದು?"

"ಮುಗಿಯುವುದು ಒಂದು ದಿನ"

"ನಿಮಗೇನು, ಹಾಗೆನ್ನುವುದು ಸುಲಭವಾಗಿದೆ" ಬಾಯಲ್ಲಿ ಚೊಕೊ ಲೇಟನ್ನು ತುರುಕುತ್ತಾ ಪುಸ್ಯಾ ಹೇಳಿದಳು.

"ಗ್ರಾಮಫೋನ್ ಹಚ್ಚು ನಿನ್ನ ಊಟ ಇಲ್ಲಿಗೇನೇ ತರುವರು ಒಳ್ಳೇದು. ಸದ್ಯ ಬೀಳ್ಕೊಳ್ಳುವೆ ''

ಅವಸರದಿಂದ ಅವಳಿಗೆ ಮುದ್ದಿಟ್ಟು ಜರ್ಮನ ಆಫೀಸರನು ಹೊರಕ್ಕೆ ಹೋದನು

ಚೌಕದಲ್ಲಿ ಒಂದು ಸಾಧಾರಣ ದೊಡ್ಡ ಕಟ್ಟಡವಿತ್ತು. ಗ್ರಾಮ ಪಂಚಾಯತ (ಸೋವಿಯಟ್)ದ ಆಫೀಸು ಅದು ಈಗ ಜರ್ಮನ ಸೈನಿಕರ ಕೇಂದ್ರವಾಗಿ ಮಾರ್ಪಟ್ಟಿತ್ತು. ಆಫೀಸರನು ನೇರಾಗಿ ಅಲ್ಲಿಗೆ ಹೋದನು. ಅಲ್ಲಿ ಕೂಡಿಪ್ಪ ಸೈನಿಕರೆಲ್ಲಾ ಅವನನ್ನು ಕಂಡು ಫಕ್ಕನೆ ಎದ್ದು ನಿಂತು ಶಿಸ್ತಿನಿಂದ ಸಲಾಮು ಮಾಡಿದರು. ಆಫೀಸರನು ತನ್ನ ಕೋಣೆಗೆ ಹೋಗಿ ಕುರ್ಚಿಯ ಮೇಲೆ ಕುಳಿತು ದೀರ್ಘ ಶ್ವಾಸವನ್ನು ಬಿಟ್ಟನು. ''ಪುಸ್ಯಾಳಂತೆ ತನಗೂ ಮಧ್ಯಾಹ್ನದ ವರೆಗೂ ಹಾಯಾಗಿ ಹಾಸಿಗೆಯಲ್ಲಿ ಹೊರಳಾಡಲು ಸಾಧ್ಯವಿದ್ದರೆ'' ಎಂಬ ವಿಚಾರವು ಅವನ ಮನಸ್ಸಿನಲ್ಲಿ ಬಂತು. ಆದರೆ ಯುದ್ಧ ಮುಗಿಯುವ ತನಕ ಅದೆಲ್ಲಿ ಸಾಧ್ಯ?

ಆಫೀಸರನು ಆಶಾಭೂಮಿಯಿಂದ ಕರ್ಮಭೂಮಿಗೆ ಇಳಿದನು ಬಾಗಿಲ ಬಳಿ ನಿಂತಿಪ್ಪ ಜವಾನನನ್ನು ಕರೆದು ಅವಳನ್ನು ತರಹೇಳು ಎಂದನು

ಸೈನಿಕರಿಬ್ಬರು ಕರೀ ಉಡುಪನ್ನು ಧರಿಸಿದ ಓರ್ವ ಸ್ತ್ರೀಯನ್ನು ಒಳಗೆ ತಂದು ಅವನ ಮುಂದೆ ನಿಲ್ಲಿಸಿದರು. ಅವಳ ಮೇಲೆ ಸಂಶಯಾತ್ಮಕ ದೃಷ್ಟಿಯನ್ನು ಬೀರಿ

'' ಇವಳೇ ಏನು ಅವಳು " ಎಂದನು

''ಇವಳೇ" ಸೈನಿಕರ ಅಮಲ್ದಾರನು ಉತ್ತರವಿತ್ತನು

ಸ್ತ್ರೀಯು ಸಾಧಾರಣ ರೈತವರ್ಗದ ಹೆಂಗಸರಂತೆಯೇ ಇದ್ದಳು ಸ್ವಲ್ಪ ಇಳಿದಾದ ಮುಖ, ಸ್ವಲ್ಪ ಮುಂದೆ ಬಂದಂತಿದ್ದ ಹಣೆಯ ಎಲುಬಗಳು. ಕೆನ್ನೆಯು ಮುಚ್ಚಿದಂತಾಗಿ ಅಲ್ಲಿನ ಮೂಳೆಗಳು ಎದ್ದು ಕಾಣುತ್ತಿದ್ದುವು. ಕೂದಲು ಸ್ವಲ್ಪ ಬಿಳುಪಾಗಿತ್ತು ಕಷ್ಟಸಹಿಷ್ಣುತೆಯ ಲಕ್ಷಣಗಳು ಮುಖದಲ್ಲಿ ಒಡೆದು ಕಾಣುತ್ತಿದ್ದುವು

ಆಫೀಸರನು ಅವಳನ್ನೇ ದಿಟ್ಟಿಸಿ ನೋಡಿದನು. ಅವಳೂ ಅವನನ್ನೇ

ನೋಡಿದಳು ಅವಳ ಮುಖಭಂಗಿಯು ಅವಳ ಮನೋದಾರ್ಢ್ಯವನ್ನು ಸ್ಪಷ್ಟವಾಗಿ ಸೂಚಿಸುತ್ತಿತ್ತು ಅವಳ ಕಣ್ಣುಗಳ ತೀಕ್ಷ್ಣದೃಷ್ಟಿಯು ತಾಯ್ನಾಡಿನ ಸ್ವಾತಂತ್ರ್ಯಕ್ಕಾಗಿ ಎಲ್ಲವನ್ನೂ ಸಹಿಸಲು ಸಿದ್ಧಳಾಗಿದ್ದ ಅವಳ ಧೈರ್ಯ ಸ್ಥೈರ್ಯಗಳನ್ನು ಹೊರಸೂಸುತ್ತಿತ್ತು. ಇವಳಿಂದ ತನ್ನ ಗುಪ್ತ ಕಾರ್ಯದ ಗುಟ್ಟನ್ನು ಹೊರಗೆಡಹುವುದು ಸುಲಭವಲ್ಲವೆಂದು ಅವನಿಗೆ ಮನಗಂಡಿತು

ದೀರ್ಘಕಾಲದ ವಿಚಾರಣೆಯ ಸಿದ್ಧತೆಯನ್ನು ಮಾಡಿ ಅವಳನ್ನು ಪ್ರಶ್ನಿಸಲು ತೊಡಗಿದನು

"ಹೆಸರು?"

"ಒಲಿನಾ ಕೊಸ್ಟ್ಯುಕ್"

"ನೀನು ಗ್ಯುರಿಲ್ಲಾ (ಗಮಿನಿ ಕಾವಾ)ದವರೊಡನಿದ್ದಿಯಾ?"

ಈ ಪ್ರಶ್ನೆಯಿಂದ ಆಫೀಸರನು ಎಣಿಸಿದಂತೆ ಅವಳು ಬೆಚ್ಚಿಬೀಳಲಿಲ್ಲ ಅವನನ್ನೇ ನೋಡುತ್ತಿದ್ದ ತನ್ನ ದೃಷ್ಟಿಯನ್ನು ಕೂಡ ಬದಲಿಸಲಿಲ್ಲ. ಸ್ಥಿರ ಸ್ವರದಿಂದ ಉತ್ತರವಿತ್ತಳು.

"ಹೌದು ನಾನು ಈ ಗ್ಯುರಿಲ್ಲಾಗಳೊಡನೆ ಇದ್ದ"

ಈ ಉತ್ತರಕ್ಕೆ ಆಫೀಸರನು ತಯಾರಿರಲಿಲ್ಲ, ಕೂಗಿ ಕಾಲು ಹಿಡಿದು ತನಗೆ ಗ್ಯುರಿಲ್ಲಾಗಳ ವಿಷಯವೇ ಗೊತ್ತಿಲ್ಲವೆಂದು ಅವಳು ಹೇಳುವಳು ಎಂತ ಎಣಿಸಿದ್ದನಾತ ಅವಳ ಬದಲಾಗಿ ಇವನೇ ಬೆಚ್ಚಿಬೀಳುವಂತಾಯಿತು

ಮುಖದ ಕಠೋರತೆಯನ್ನು ಪುನಃ ಪಡೆಯುವ ವರೆಗೆ ಎದುರಿಗಿದ್ದ ಕಾಗದದ ಮೇಲೆ ವ್ಯಂಗಚಿತ್ರಗಳನ್ನು ಬಿಡಿಸುತ್ತಲಿದ್ದು ಕೆಲಹೊತ್ತಿನ ಮೇಲೆ ವಿಚಾರಣೆಗೆ ಪುನಃ ತೊಡಗಿದನು.

"ನೀನು ಊರಿಗೆ ಯಾಕೆ ಮರಳಿ ಬಂದೆ? ನಿನ್ನನ್ನು ಅವರೇಕೆ ಕಳಿಸಿದರು?"

"ನನ್ನನ್ನು ಯಾರೂ ಕಳಿಸಿಲ್ಲ ನಾನೇ ಬಂದೆ"

"ಓಹೋ ನೀನೇ ಬಂದೆಯಾ, ಯಾಕಮ್ಮಾ ನೀನು ಬಂದುದ್ದು?"
ಸ್ವಲ್ಪ ತಿರಸ್ಕಾರದ ದನಿಯಲ್ಲಿ ಆಫೀಸರನು ಈ ಪ್ರಶ್ನೆ ಕೇಳಿದನು.

ಈ ಸಾರೆ ಅವಳು ಉತ್ತರ ಕೊಡಲಿಲ್ಲ ತನ್ನ ತೀಕ್ಷ್ಣ ದೃಷ್ಟಿಯಿಂದ

ನೇರಾಗಿ ಅವನನ್ನೇ ನೋಡುತ್ತ ನಿಂತಳು

" ಏನು? "

ಮತ್ತೂ ನಿರುತ್ತರ.

" ಅದು ಹೇಗೆ ? ನೀನು ಗ್ಯೆರಿಲ್ಲಾಗಳೊಡನೆ ಇದ್ದೆ. ಥಕ್ಕನೆ ಅವರನ್ನು ಬಿಟ್ಟು ಮನೆಗೆ ಬಂದೆ ತಾನಾಗಿ ಬಂದೆನೆನ್ನುವೆ. ಗ್ಯೆರಿಲ್ಲಾಗಳಲ್ಲಿ ಶಿಸ್ತು ಏನೂ ಇಲ್ಲವೇ?" ಯಾಕೆ ಅವರು ನಿನ್ನನ್ನು ಕಳಿಸಿದರೆಂದು ಬೇಗನೇ ಹೇಳುವುದು ಒಳಿತು

" ನಾನಾಗಿಯೇ ಬಂದೆ ಅಲ್ಲಿ ನಿಲ್ಲುವುದು ನನಗೆ ಸಾಧ್ಯವಾಗಲಿಲ್ಲ "

" ಸಾಧ್ಯವಾಗಲಿಲ್ಲ! ಅದ್ಯಾಕೆ?" ಆಫೀಸರನ ಮನಸ್ಸಿನಲ್ಲಿ ಆಸೆಯ ಅಂಕುರವು ಹುಟ್ಟಿತು. "ಗ್ಯೆರಿಲ್ಲಾಗಳ ಸ್ಥಿತಿ ಹದಗೆಟ್ಟಿತ್ತೆ? ನಿಮ್ಮ ನಾಯಕನು ಗುಂಡಿನೇಟಿಗೆ ಬಲಿಯಾದನಲ್ಲಾ. ಆಮೇಲೆ ನಿನ್ನ ದಳ ಮುರಿಯಿತೇ ? "

"ದಳದ ಸುದ್ದಿ ನನಗೇನೂ ತಿಳಿಯದು. ನಾನು ಮನೆಗೆ ಬಂದೆ, ಇಷ್ಟೆ. "

" ಒಮ್ಮೆಗೆಲೆ ಹಾಗೆ ಬರಲು ಕಾರಣ?"

ಅವಳ ತುಟಿಗಳೇನೋ ಅಲ್ಲಾಡಿದುವು. ಆದರೆ ಅವುಗಳಿಂದ ಶಬ್ದ ಹೊರಡಲಿಲ್ಲ.

"ಗ್ಯೆರಿಲ್ಲಾಗಳ ಕೆಲಸದಲ್ಲಿ ಏನೂ ಅರ್ಥವಿಲ್ಲವೆಂಬ ಅರಿವಾಯಿತೇ ನಿನಗೆ ? ಅಥವಾ ಅದು ಬರೀ ದರೋಡೆಖೋರತನ ಎಂತಲೋ? "

ನಕಾರಾರ್ಥವಾಗಿ ತಲೆಯನ್ನು ಅಲ್ಲಾಡಿಸಿದಳು.

" ಹಾಗಿದ್ದರೆ, ಅವರೊಡನೆ ಇರಲು ಸಾಧ್ಯವಾಗಲಿಲ್ಲವೆನ್ನುವೆ ಯಾಕೆ ? "

ತುಸು ಹೊತ್ತು ಮೌನವಾಗಿ ನಿಂತಳು ಪ್ರಯತ್ನದಿಂದ ಕೊನೆಗೆ ಮಾತು ಹೊರಟಿತು. " ನಾನು ಮನೆಗೆ ಹಡೆಯಲು ಬಂದೆ "

" ಅದೇನದು, ಹಡೆಯಲು ಅಂದರೆ ? "

" ಹೊಟ್ಟೆಯಲ್ಲಿದ್ದ ಮಗುವಿಗೆ ಜನ್ಮಕೊಡಲು " ತನ್ನ ಮನೋ

ದಾರ್ಢ್ಯವನ್ನು ಮರಳಿ ಪಡೆದು ಅವಳು ಉತ್ತರವಿತ್ತಳು.

" ಓಹೋ ಈಗ ಸರಿಯಾಯಿತು " ಆಫೀಸರನು ಹೀಗೆ ಹೇಳುವಾಗ ಕರ್ಕಶವಾಗಿ ನಕ್ಕನು ಆ ನಗುವಿನ ಧ್ವನಿ ಕೇಳಿ ಅವಳ ಮೈ ನಡುಗಿತು

ಚಳಿ ಆಗುತ್ತದೆಯೇ ನಿನಗೆ ? ಆಹಾ, ತೆಗೆ ಮೈಮೇಲಿನ ಶಾಲನ್ನು "

ಶಾಲನ್ನು ತೆಗೆದಳು.

" ಅಂಗಿ ತೆಗೆ "

ಅದನ್ನೂ ತೆಗೆದಳು ಆಫೀಸರನು ಕೆಲಹೊತ್ತು ಅವಳನ್ನೇ ನೋಡಿದನು ಅವಳ ಮಾತು ನಿಜವಿತ್ತು ಅವಳಿಗೆ ಈಗ ಒಂಬತ್ತನೇ ತಿಂಗಳೆಂಬುದರಲ್ಲಿ ಸಂಶಯವಿರಲಿಲ್ಲ

ಒಲಿಸಾಳು ದೀರ್ಘಶ್ವಾಸ ಬಿಡುತ್ತಿದ್ದಳು ಅವಳಿಗೆ ನಿಲ್ಲಲು ಬಹಳ ಕಷ್ಟವಾಗುತ್ತದೆಂಬದನ್ನು ಆಫೀಸರನು ಅರಿತನು ಅವಳಿಗೆ ತ್ರಾಸವಾಗ ಬೇಕೆಂದೇ ಪ್ರಶ್ನೆಗಳನ್ನು ನಿದಾನವಾಗಿ ಕೇಳತೊಡಗಿದನು.

ತನ್ನ ವಿಷಯದಲ್ಲಿ ಕೇಳಿದ ಎಲ್ಲ ಪ್ರಶ್ನೆಗಳಿಗೆ ಅವಳು ಹಿಂಜರಿಯದೆ ಉತ್ತರವಿತ್ತಳು. ಅವಳಿಗೆ ಲಗ್ನವಾಗಿತ್ತು ಗಂಡನು ಯುದ್ಧದಲ್ಲಿ ಮಡಿದನು ಬೊಲ್ಶೆವಿಕ್ ಕ್ರಾಂತಿಯ ಮೊದಲು ಅವಳು ಒಬ್ಬ ಜಮೀನುದಾರನಲ್ಲಿ ಕೆಲಸ ಮಾಡುತ್ತಿದ್ದಳು ಕ್ರಾಂತಿಯ ನಂತರ ಸಾಂಘಿಕ ಕೃಷಿ ಕ್ಷೇತ್ರದಲ್ಲಿ (Collective Farm)ದಲ್ಲಿ ದುಡಿಯುತ್ತಿದ್ದಳು ಗಂಡನು ದಂಡಿಗೆ ಹೋದಂದಿನಿಂದ ಅವಳು ಗ್ಯುರಿಲ್ಲಾ ದಳವನ್ನು ಸೇರಿದ್ದಳು ತಾನು ಗರ್ಭಿಣಿ ಎಂಬುದನ್ನು ಯಾರಿಗೂ ತಿಳಿಸಿದ್ದಿಲ್ಲ. ಈಗ ಅವಳಿಗೆ ತಿಂಗಳು ತುಂಬಿದ್ದವು. ಗಲಾಟೆ ಇಲ್ಲದೆ ಸಮಾಧಾನದಲ್ಲಿ ಮಗುವನ್ನು ಹಡೆಯಬೇಕೆಂಬುದೆ ಈಗ ಅವಳ ಹಿರಿಯಾಸೆಯಾಗಿತ್ತು

'' ಗಲಾಟೆ ಇಲ್ಲದೆ ಸಮಾಧಾನದಲ್ಲಿ ಮಗುವನ್ನು ಹಡೆಯಬೇಕು. '' ಅವಳ ಶಬ್ದಗಳನ್ನೇ ಅವನು ನಕಲಿಯ ಸ್ವರದಲ್ಲಿ ಉಚ್ಚರಿಸಿದನು. " ನೀನು ಕಳೆದ ವಾರ ಒಂದು ಸೇತುವೆಯನ್ನು ಹಾರಿಸಿದೆಯಲ್ಲವೇ ? "

"ಹೌದು."

"ಯಾರು ನಿನಗೆ ಸಹಾಯ ಮಾಡಿದರು ?"

"ಯಾರೂ ಇಲ್ಲ. ನಾನೊಬ್ಬಳೇ ಆ ಕೆಲಸ ಮಾಡಿದೆ."

"ಸುಳ್ಳು ಹೇಳುತ್ತಿರುವೆ ನಮಗೆ ಎಲ್ಲಾ ತಿಳಿದಿದೆ ನಿಜ ಹೇಳು."

"ಯಾರೂ ಇಲ್ಲ. ನಾನೇ ಮಾಡಿದೆ."

"ಸರಿ. ಗ್ಯುರಿಲ್ಲಾಗಳು ಎಲ್ಲಿದ್ದಾರೇಗ? "

ನಿರುತ್ತರ. ಅವನು ತಿಳಿದನು. ಅದು ಕಲ್ಪನಾತೀತವಾದ ಮನೋದಾರ್ಢ್ಯ ಕಷ್ಟಸಹಿಷ್ಣುತೆಯನ್ನು ತೋರಿಸುವ ಮೌನ ಅವನ ಈ ಮೊದಲಿನ ಅನುಭವದ ಪುನರಾವೃತ್ತಿ ನಿಶ್ಚಲ ನಿರುತ್ತರ, ಉದ್ದುದ್ದ ಅಂತ್ಯವಿಲ್ಲದ ವಿಚಾರಣೆ, ನಾನಾತರದ ಚಿತ್ರಹಿಂಸೆ, ಎಲ್ಲವೂ ನಿರರ್ಥಕ. ಅಂಜುಬುರುಕರು ಹೆದರಿ ಮೊದಲ ಪ್ರಶ್ನೆಗೇನೇ ಎಲ್ಲವನ್ನೂ ಹೇಳಿಬಿಡುತ್ತಿದ್ದರು ಆದರೆ ಮೊದಲಿನಿಂದ ಮೌನ ತಾಳಿದವರಲ್ಲಿ ಕೊನೆಯುವರೆಗೂ ಮೌನವೇ ಜೀವ ಸಹಿತ ಸುಟ್ಟರೂ ಅವರ ಬಾಯಿಯಿಂದ ಒಂದಕ್ಷರವೂ ಹೊರಡುತ್ತಿದ್ದಿಲ್ಲ ಸುರುವಿನ ಪ್ರಶ್ನೆಗಳಿಗೆ ಅವಳು ನೇರವಾಗಿ ಕೊಟ್ಟ ಉತ್ತರಗಳಿಂದ ಅವನು ಮೋಸ ಹೋಗಿದ್ದನು. ತನ್ನ ವಿಷಯವಾಗಿ ಅವಳು ಏನು ಬೇಕಾದರೂ ಹೇಳಲು ಸಿದ್ಧವಿದ್ದಳು ಆದರೆ ಇತರರ ವಿಷಯ, ತನ್ನ ಸಂಗಾತಿಗಳಾದ ಗ್ಯುರಿಲ್ಲರ ವಿಷಯ ನಿಶ್ಶಬ್ದ !

"ಊರಿಗೆ ಬರುವ ಮೊದಲು ನೀನೆಲ್ಲಿದ್ದೆ ?"

ಪುನಃ ಮೌನ

ಆಫೀಸರನಿಗೆ ಬೇಸರ ಹತ್ತಿತು ತನ್ನ ಅಧಿಕಾರ, ದರ್ಪ, ಶಕ್ತಿ, ಸಾಮರ್ಥ್ಯ ಎಲ್ಲವೂ ಯಃಕಶ್ಚಿತ ಹಳ್ಳಿಯ ಹೆಂಗಸಿನ ಮುಂದೆ ನಿರರ್ಥಕವಾಯಿತು ಇವಳ ವಿಚಾರಣೆಯನ್ನು ಕೆಳನೌಕರನಿಗೆ ಒಪ್ಪಿಸಿ ಪುಸ್ಯಾಳ ಕಡೆ ಹೋಗೋಣವೆನಿಸಿತು, ಅವನಿಗೊಮ್ಮೆ ಆದರೆ ಕೆಳನೌಕರರ ಸಾಮರ್ಥ್ಯದಲ್ಲಿ ಅವನಿಗೆ ವಿಶ್ವಾಸವಿರಲಿಲ್ಲ ಅಲ್ಲದೆ ಅವರ್‍ಯಾರಿಗೂ ತನ್ನಂತೆ ರಷ್ಯನ ಭಾಷೆ ಬರುತ್ತಿರಲಿಲ್ಲ. ಭಾಷಾಂತರಕಾರನ ಭಾಷಾ ಜ್ಞಾನವೂ ಅಷ್ಟಕ್ಕಷ್ಟೇ ಇತ್ತು. ಒಳನಾಡು ಸೇರಿದ್ದ ಗ್ಯುರಿಲ್ಲಾ ತಂಡವು ಜರ್ಮನರನ್ನು ಒಂದು ನಿಮಿಷವೂ ನೆಮ್ಮದಿಯಿಂದಿರಗೊಡುತ್ತಿರಲಿಲ್ಲ. ಅವರಿಗೆ ಬರುವ ದವಸ ಧಾನ್ಯಗಳನ್ನು ದೋಚಿಕೊಂಡು ಹೋಗುವುದು, ಮದ್ದು ಗುಂಡುಗಳ ಸಂಗ

ಹಕ್ಕೆ ಬೆಂಕಿ ಹಚ್ಚುವದು, ಕೆಲವರು ಮಾತ್ರವೇ ಇದ್ದರೆ ಎಲ್ಲಿಂದಲೋ ಫಕ್ಕನೆ ಅವರ ಮೇಲೆ ಬಿದ್ದು ಅವರನ್ನು ಒಬ್ಬರೂ ಉಳಿಯದಂತೆ ನಾಶಮಾಡುವದು, ಕುಡಿಯುವ ನೀರಿನ ಬಾವಿಗಳಿಗೆ ವಿಷ ಹಾಕುವದು ಇವೇ ಮೊದಲಾದ ಗಮಾನಿಕಾವಾದ ಪ್ರಯೋಗಗಳನ್ನು ಅವರು ಸತತ ನಡೆಸಿದ್ದರು ಎಷ್ಟೇ ಹೆಣಗಾಡಿದರೂ ಅವರ ಪೈಕಿ ಒಬ್ಬನನ್ನು ಹಿಡಿಯುವದು ಹಾಗಿರಲಿ, ಅವರ ಠಾಣ್ಯಾದ ಪತ್ತೆ ಹಚ್ಚುವದು ಕೂಡಾ ಸಾಧ್ಯವಾಗಿರಲಿಲ್ಲ ಆ ಗ್ಯುರಿಲ್ಲಾ ತಂಡದ ವಿಷಯದಲ್ಲಿ ತುಸುವಾದರೂ ಸುದ್ದಿ ದೊರಕಿಸಬೇಕೆಂದು ಆಫೀಸರನು ತುಂಬಾ ಆತುರನಿದ್ದನು ಹಾಗಾಗಿ ಮನೆಗೆ ಹೋಗಿ ಪುಸ್ಪ್ಯಾಳನ್ನು ಆಲಿಂಗಿಸುವ ಆಸೆಯನ್ನು ಬಿಗಿಹಿಡಿದು ಬೇಸರದ ದನಿಯಲ್ಲಿ ವಿಚಾರಣೆಗೆ ಪುನಃ ತೊಡಗಿದನು

"ಶರಿ, ಈಗ ಏನು ಹೇಳುವೆ ? ನಿಮ್ಮ ನಾಯಕನಿಗೆ ಮುಂಗುರುಳು ಅಂತಾರೆ ಅಲ್ಲವೇ ? ಆ ಹೆಸರು ಹ್ಯಾಗೆ ಬಂತು ? ಅವನ ನಿಜವಾದ ಹೆಸರು ಯಾವದು ?''

ಮೌನ. ಅವಳಿಗೆ ಅತೀ ಆಯಾಸವಾಗಿತ್ತು ನಿಲ್ಲಲಿಕ್ಕಾಗದೆ ಅವಳ ಕಾಲುಗಳು ನಡುಗುತ್ತಿದ್ದವು ಇದನ್ನು ಆಫೀಸರನು ನೋಡಿದನು ಇನ್ನೊಂದು ಪ್ರಯತ್ನವೆಂದು ಕೇಳಿದ ಪ್ರಶ್ನೆಗಳನ್ನೇ ಇನ್ನೊಮ್ಮೆ ಕೇಳಿದನು ಅವೂ ನಿರರ್ಥಕ

ಸಹನೆಯು ಮೇರೆ ಮೀರಿತು ಸಿಟ್ಟಿನಿಂದ ''ಏನು ಮಾತಾಡುವೆಯೋ, ಇಲ್ಲವೋ, ಎಂತ ಒದರಿದನು ಮತ್ತೂ ನಿರುತ್ತರ.

ಅವನಿಗೂ ದಣುವಾಗಿತ್ತು. ನಿರಾಶೆ ಉದ್ವೇಗಗಳಿಂದ ಅದು ಇನ್ನೂ ಅಧಿಕವಾಯಿತು. ಪುಸ್ಪ್ಯಾಳಿದ್ದೆಡೆಗೆ ಹೋಗುವ ಆಸೆ ಇನ್ನೂ ಬಲವತ್ತರವಾಯಿತು. ಪುಸ್ಪ್ಯಾಳು ಈಗಲಾದರೂ ಎದ್ದಿರಬಹುದಲ್ಲವೇ ? ಅಥವಾ ಚಳಿಯೆಂದು ಇನ್ನೂ ಮಲಗಿರುವಳೋ ?

## ೨

ಪುಸ್ಪ್ಯಾಳು ಎದ್ದಿದ್ದಳು ಉಡುಪು, ಅಲಂಕಾರಗಳಲ್ಲಿ ಬಹಳ ಸಮಯ

ಕಳೆದಳು. ಕನ್ನಡಿಯಲ್ಲಿ ತನ್ನ ರೂಪಲಾವಣ್ಯಗಳನ್ನು ನೋಡಿ ತಾನೇ ಮೆಚ್ಚಿದಳು ಆದರೆ ಏನು ಮಾಡಿದರೂ ಹೊತ್ತು ಹೋಗಲಿಲ್ಲ. ಗ್ರಾಮ ಫೋನ ಇಟ್ಟಳು. ಕೇಳಿ, ಕೇಳಿ ಅದೇ ಹಾಡುಗಳು ಬೇಸರಿಕೆ ಬಂದಿತ್ತು. ಯಾರೊಡನಾದರೂ ಮಾತಾಡಬೇಕೆಂದೆನಿಸಿತು ಆದರೆ ಮಾತಾಡುವದು ಯಾರೊಡನೆ ?

ಅಡಿಗೆ ಕೋಣೆಗೆ ಹೋಗಿ ಸ್ವಲ್ಪ ನೀರು ಕುಡಿದಳು ಫೆಡೋಸ್ಯಾ ಕತ್ರಿವಚುಕ (ಅದು ಮುದುಕಿಯ ಹೆಸರು) ಬಟಾಟೆ ಹೆಚ್ಚುತ್ತಿದ್ದಳು. ಪುಸ್ಯಾ ತುಸು ಹೊತ್ತು ಅದನ್ನು ನೋಡುತ್ತ ನಿಂತಳು ಕೊನೆಗೆ ಹೇಗಾದರೂ ಏನಾದರೂ ಮಾತು ಆರಂಭಿಸುವ ಉದ್ದೇಶದಿಂದ

"ಎಷ್ಟು ಚಿಕ್ಕದು ಈ ಬಟಾಟೆ" ಎಂದಳು

ಫೆಡೋಸ್ಯಳು ಉತ್ತರವನ್ನೆ ಕೊಡಲಿಲ್ಲ

"ಇಲ್ಲಿಯ ಬಟಾಟೆ ಇಷ್ಟೇ ಚಿಕ್ಕವೇನು? "

ಅದಕ್ಕೂ ಉತ್ತರವಿಲ್ಲ.

"ನನ್ನೊಡನೆ ಮಾತು ಕೂಡಾ ಆಡುವುದಿಲ್ಲವೇಕೆ?"

ಫೆಡೋಸ್ಯಳು ತನ್ನ ಕತ್ತನ್ನೆತ್ತಿ ಒಮ್ಮೆ ನೋಡಿದಳು. ತಿರಸ್ಕಾರದ ಒಣ ದೃಷ್ಟಿ ಅದು. ಪುನಃ ಬಗ್ಗಿ ತನ್ನ ಕೆಲಸಕ್ಕೆ ತೊಡಗಿದಳು

"ನನ್ನನ್ನು ಆ ರೀತಿ ಏಕೆ ನೋಡುವೆ ? ನಾನು ಮನುಷ್ಯಳಲ್ಲವೇನು ? ಎರಡು ಮಾತು ಆಡೋಣವೆಂದರೆ ಇಡೀ ದಿನದಲ್ಲಿ ಒಬ್ಬರೂ ಇಲ್ಲ ಈ ಏಕಾಂಗಿತನವು ಒಬ್ಬನ ಜೀವ ತೆಗೆಯಲಿಕ್ಕೆ ಸಾಕು.

ಒಂದು ಬಟಾಟೆ ಕೆಳಗೆ ನೀರಿನ ಕೊಡದಲ್ಲಿ ಬಿತ್ತು ಅದರಿಂದ ನೀರಿನ ಹನಿಗಳು ಹಾರಿ ಪುಸ್ಯಾಳ ಉಡುಪಿನ ಮೇಲೆ ಬಿದ್ದುವು

"ನಾನು ನಿನಗೊಂದೂ ಅನ್ಯಾಯ ಮಾಡಿಲ್ಲ. ಮಾಡಿದ್ದೇನೆಂದು ನಿನಗೆ ಅನಿಸುವುದೇ "

ಫೆಡೋಸ್ಯಳು ಪುನಃ ಮುಖ ಮೇಲೆತ್ತಿ ನೋಡಿದಳು. ಆದರೆ ಮಾತಾಡಲಿಲ್ಲ

"ನಾನು ಯಾವಾಗಲೂ ಒಬ್ಬಳೇ ಇರಬೇಕು. ಕರ್ಟನು ಮನೆಗೆ

ಬಂದಾಗಲೂ ಒಂದು ನಿಮಿಷಕ್ಕಿಂತ ಹೆಚ್ಚು ನಿಲ್ಲುವುದಿಲ್ಲ. ಎರಡು ಮಾತು ಆಡೋಣವೆಂದರೂ ಒಬ್ಬರೂ ಇಲ್ಲ ಹೊರಗೆ ಹೋಗೋಣವೆಂದರೆ ಹೊರಗೆ ಸಹಿಸಲಸಾಧ್ಯವಾದ ಚಳಿ, ಹಿಮ. ದಿನವಿಡೀ ಒಂದು ಗ್ರಾಮಫೋನು. ಅದರ ಹಾಡುಗಳೆಲ್ಲಾ ಬಾಯಿಪಾಠವಾಗಿವೆ. ಫೆಡೋಸ್ಯಾ, ನಿನಗೆ ಗ್ರಾಮಫೋನಿನ ಹಾಡುಗಳು ರುಚಿಸುವುವೇ?"

ಈ ಪ್ರಶ್ನೆಗೂ ಫೆಡೋಸ್ಯಾ ಉತ್ತರ ಕೊಡಲಿಲ್ಲ. ಪುಸ್ಯಾಳು ಸಿಟ್ಟಿನಿಂದ ಮುಷ್ಟಿ ಬಿಗಿದು "ನನಗೇಕೆ ಉತ್ತರ ಕೊಡುವುದಿಲ್ಲ ? ನನಗೆ ಏನು ಪ್ಲೇಗ ರೋಗ ಸೋಂಕಿರುವುದೇ?" ಎಂದು ಚೀರಿದಳು.

ಫೆಡೋಸ್ಯಾಳು ಮುಖವೆತ್ತಿ ನೋಡಿದಳು

"ನಿನಗೆ ಪ್ಲೇಗ ರೋಗಕ್ಕಿಂತ ಕೊಳಕಾದ ರೋಗ ತಗಲಿದೆ ಭಯಂಕರ ಕೊಳಕು ನೀನು ಪ್ಲೇಗ ತಗಲಿದವರ ಮರಣಕ್ಕಿಂತಲೂ ಭಯಂಕರವಾದ ಮರಣಕ್ಕೆ ತುತ್ತಾಗುವೆ"

ಕಟ್ಟಕಡೆಗೆ ಫೆಡೋಸ್ಯಾಳ ಬಾಯಿಯಿಂದ ಶಬ್ದಗಳು ಹೊರಬಿದ್ದುವು. ಆದರೆ, ಎಂಥ ಕಠೋರ ಶಬ್ದಗಳು! ಪುಸ್ಯಾಳಿಗೆ ಈ ಶಬ್ದಗಳನ್ನು ಕೇಳಿ ಸಿಡಿಲು ಬಡಿದಂತಾಯಿತು. ಫೆಡೋಸ್ಯಾಳನ್ನು ಉಗುರುಗಳಿಂದ ಪರಚಿ ಹಲ್ಲುಗಳಿಂದ ಕಚ್ಚಿ ಬೂಟುಗಳಿಂದ ಒದೆಯಬೇಕೆಂದು ಅನಿಸಿತು. ಆದರೆ, ಅದರಲ್ಲಿ ಯಾವುದನ್ನೂ ಮಾಡಲು ಧೈರ್ಯ, ನೈತಿಕ ಧೈರ್ಯ ಬರಲಿಲ್ಲ.

"ನನ್ನಿಂದೇನಾಗಬೇಕು ನಿನಗೆ ? ನಾನು ಏನು ಮಾಡಲಾಗುತ್ತಿತ್ತು? ಉಪವಾಸ ಬಿದ್ದು ಸಾಯಬೇಕಿತ್ತೇ? ಅಥವಾ ಇನ್ನೂ ಕಾಯಬೇಕಿತ್ತೇ? ಯಾವುದಕ್ಕಾಗಿ ಕಾಯಲಿ ? ಜರ್ಮನರು ಇಲ್ಲಿ ಶಾಶ್ವತವಾಗಿ ತಳ ಊರಿರುವರು ನನಗೆ ಎಲ್ಲಾದರೂ ನೆಲೆ ಬೇಡವೇ? ನೆರ್ಯೋಜಾ (ಅವಳ ಗಂಡ) ಎಂದೋ ಸತ್ತಿರಬೇಕು. ಕರ್ಟನು ಕೆಟ್ಟವನಲ್ಲ. ನೀನು ಸುಮ್ಮನೆ ಸಿಟ್ಟಾಗಬೇಡ. ನಾನು ಇಲ್ಲಿ ಹೆಚ್ಚು ದಿನ ನಿಲ್ಲಲಾರೆ ಜೀವಕ್ಕೇನೇ ಬೇಸರಿಕೆ ಬಂದಿದೆ ಕರ್ಟನು ನನ್ನನ್ನು ಜರ್ಮನಿಗೆ ಕರಕೊಂಡು ಹೋಗುವವನಿದ್ದಾನೆ. ಅಲ್ಲಿ ಮಜಾ ಮಾಡಬಹುದು. ಇಲ್ಲಿಯ ಜೀವನದಂತಲ್ಲ, ಅಲ್ಲಿ ಇಲ್ಲಿ ಏನಿದೆ? ರೇಶ್ಮೆ ಗೌನು ಬೇಕೆಂದರೆ ಒಂದಕ್ಕಿಂತ ಹೆಚ್ಚು ಸಿಗುವುದೇ

ಕಠಿಣ ಇದ್ದದ್ದೊಂದು ಎಲ್ಲ್ಯಾದರೂ ಕೊಳೆಯಾಗದಂತೆ ಜಾಗ್ರತೆ ವಹಿಸ ಬೇಕು ಒಂದು ಕೆಚ್ಚಿಗೆ ಬೇಕೆಂದರೆ ಇಲ್ಲ

ಫೆಡೋಸ್ಯಾಳು ಈ ಹುಚ್ಚು ಮಾತುಗಳಿಗೆ ನಕ್ಕಳು “ ನಿನಗೆ ತಿಳಿಯುವುದೆಂದರೆ ಇದೊಂದೇ, ನಿನ್ನ ಉಡುಪು, ರೇಶ್ಮೆ ಗೌನು ಇದರಲ್ಲೇ ನಿನ್ನ ಜನ್ಮದ ಅಂತ್ಯ ನಿನ್ನ ಅಕ್ಕನನ್ನು ನೋಡು. ಎಷ್ಟು ಮರ್ಯಾದಸ್ಥ ಸ್ತ್ರೀ ಅವಳ ಮನಸ್ಸು, ನಡೆ ನುಡಿ ಎಷ್ಟು ಸುಸಂಸ್ಕೃತವಾದದ್ದು. ನಿನಗಾದರೆ ರೇಶ್ಮೆ ಗೌನೊಂದೇ ಗೊತ್ತು, ಜಗತ್ತಿನಲ್ಲಿ ಕರ್ಟನು ನಿನ್ನನ್ನು ಜರ್ಮನಿಗೆ ಕರೆದೊಯ್ಯುವನೇ ? ಹುಚ್ಚಿ ಬರೇ! ಬೇರೆ ಸ್ತ್ರೀಯರನ್ನು ತೊರೆದಂತೆ ನಿನ್ನನ್ನೂ ತೊರೆಯುವನು ಈಗ ಬೇಕಾದಷ್ಟು ಅವನನ್ನು ಅಪ್ಪಿ ಹಿಡಿ. ಬೇಸರಿಕೆ ಬರುವಷ್ಟು ಅವನೊಡನೆ ಈ ತೆಳ್ಳನ್ನ ಹಾಸಿಗೆಯಲ್ಲಿ ಮಲಗು, ಇದು ಹೆಚ್ಚು ದಿನ ನಡೆಯಲಾರದು. ಕರ್ಟನು ಇಲ್ಲಿಂದ ಪಲಾಯನ ಮಾಡುವ ದಿನ ದೂರವಿಲ್ಲ ಅವನು ಇಲ್ಲಿಂದ ಕಾಲು ತೆಗೆಯುವ ಮೊದಲೇ ನಿನ್ನನ್ನು ಚರಂಡಿಯಲ್ಲಿ ನೂಕುವನು ನೆನಪಿನಲ್ಲಿಡು ಆಗ ನನ್ನ ಮಾತು ನಿಜವೆನಿಸುವದು ನಿನಗೆ

ಪುಸ್ಯಾಳಿಗೆ ಈ ಮಾತುಗಳನ್ನು ಕೇಳಿ ಬಾರಕೋಲಿನಿಂದ ಹೊಡೆದಂತಾಯಿತು ಮೈಯ ರೋಮಗಳೆಲ್ಲಾ ನೆಟ್ಟಗಾದವು ಬಾಯಿಂದ ಮಾತು ಹೊರಡದಾಯಿತು. ಸಿಟ್ಟಿನಿಂದ ತಲ್ಲಣಿಸುವ ಸ್ವರದಲ್ಲಿ “ ಹೇಳು ಬೇಕಾದ್ದನ್ನು ಹೇಳು, ನೀರಿಗೆ ಹೋದವಳು ಎಲ್ಲಿಗೆಲ್ಲಾ ಹೋಗುವೆಯೆಂದು ಕರ್ಟನು ಬಂದೊಡನೆ ಅವನಿಗೆ ಹೇಳುವೆ”. ಇಷ್ಟು ಹೇಳಿ ಭಾವನೆಗಳ ಅತಿರೇಕದಿಂದ ನಿಲ್ಲಲಾರದೆ ಬೆಂಚಿನ ಮೇಲೆ ಬಿದ್ದುಬಿಟ್ಟಳು.

ಫೆಡೋಸ್ಯಾಳು ಈ ಮಾತು ಕೇಳಿ ಫಕ್ಕನ ಎದ್ದಳು ಪುಸ್ಯಾಳ ಮಾತುಗಳಿಂದ ಅವಳ ಮೈಯಲ್ಲಿ ರುದ್ರಸಂಚಾರವಾದಂತಾಯಿತ ಪುಸ್ಯಾಳಿದ್ದಲ್ಲಿಗೆ ಓಡಿದಳು ಅವಳ ರುದ್ರ ಮೂರ್ತಿಯನ್ನು ಕಂಡು ಪುಸ್ಯಾಳು ಬೆಂಚಿನಡಿಯಲ್ಲಿ ಅಡಗಿದಳು.

“ ನಾನೆಲ್ಲಿಗೆ ಹೋಗುವೆನೆಂದು ನಿನಗೆ ಹ್ಯಾಗೆ ಗೊತ್ತು ? ಹ್ಯಾಗೆ ?” ರುದ್ರವಾಣಿಯಲ್ಲಿ ಫೆಡೋಸ್ಯಾ ಕೇಳಿದಳು.

"ಬೇಕಾದುದೆಲ್ಲ ನನಗೆ ತಿಳಿದಿದೆ" ಎಂದಳು ಪುಸ್ಯಾ

ಈ ದೇಶದ್ರೋಹಿ ಪುಸ್ಯಾಳನ್ನು ಕತ್ತು ಹಿಸುಕಿ ಕೊಲ್ಲಬೇಕೆನಿಸಿತು, ಫೆಡೋಸ್ಯಾಳಿಗೆ ಆದರೆ, ಆ ಸ್ವಜನ ಘಾತಕಿ ಹೆಂಗಸಿನ ದೇಹವನ್ನು ಸ್ಪರ್ಶಿಸು ಸುವುದು ಕೂಡಾ ಹೇಸಿಗೆ ಸೊನ್ನಿಯಂಥ ವೀರ ರಶ್ಯನ್ನನ ಮಾತೆ ಎಂದಿಗೂ ಅಂತಹ ಕೆಲಸವನ್ನು ಮಾಡಲಾರಳು. ಹಾಗಾಗಿ ಅವಳ ಮುಂದೆ ಥೂ ಎಂದು ಉಗಿದು ಅಡಿಗೆ ಮನೆಗೆ ತೆರಳಿದಳು ಪುಸ್ಯಾಳು ತನ್ನ ಕೋಣೆಗೆ ಓಡಿಹೋಗಿ ತನ್ನ ಮನಸ್ಸಿನ ಅಸ್ವಸ್ಥತೆಯನ್ನು ಮರೆಯಲು ಗ್ರಾಮುಫೋನ್ ಹಚ್ಚಿದಳು.

ಫೆಡೋಸ್ಯಾಳು ಒಳಗೆ ಹೋಗಿ ಪುನಃ ಬಟಾಟೆ ಹೆಚ್ಚಲು ತೊಡಗಿದಳು ಸಿಟ್ಟಿನ ಉದ್ವೇಗವು ಕಡಿಮೆಯಾದಂತೆ ಒಂದು ರೀತಿಯ ಭಯವು ಅವಳನ್ನು ಆವರಿಸಿತು ತಾನು ನೀರಿಗೆ ಹೋದಾಗಲೆಲ್ಲ ಎಲ್ಲಿಗೆ ಹೋಗುತ್ತಿರುವೆನೆಂಬುದು ಪುಸ್ಯಾಳಿಗೆ ಗೊತ್ತಿದ್ದಿತೆಂದು ಅವಳು ಅರಿತಿರಲಿಲ್ಲ ಈ ದಿನ ಇಷ್ಟೆಲ್ಲ ನಡೆದ ಮೇಲೆ ಅವಳು ತನ್ನ ಜರ್ಮನ್ ಆಫೀಸರನಿಗೆ ಅದನ್ನು ಎಂದೂ ಹೇಳದಿರಲಿಕ್ಕಿಲ್ಲ

ಇದರ ಪರಿಣಾಮವೇನಾಗುವದೊ ಎಂದು ಫೆಡೋಸ್ಯಾಳು ಅಂಜಿದಳು. ಜರ್ಮನನು ಸುಮ್ಮನಿರಲಾರನು. ಊರ ಸಮೀಪ ನಡೆದ ಕಾಳಗದಲ್ಲಿ ಮೃತರಾದವರ ಅಂತ್ಯವಿಧಿ ಮಾಡಬಾರದೆಂಬ ಜರ್ಮನರ ಸುಗ್ರೀವಾಜ್ಞೆಯನ್ನು ಕಠಿಣವಾಗಿ ಪಾಲಿಸಲಾಗುತ್ತಿತ್ತು ಜರ್ಮನ ವಿಜಯದ ಕುರುಹು! ಊರಿನ ಜನರಲ್ಲಿ ಸದಾ ಭೀತಿಯನ್ನು ಹುಟ್ಟಿಸಲು ಮೃತರಾದವರು ಅಲ್ಲೇ ಕೊರಕಲಿನಲ್ಲಿ ಹಿಮದಿಂದ ಮರಗಟ್ಟಿ ರಣಹದ್ದುಗಳಿಗೆ ತಿಂಡಿಯಾಗಿ ಬೀಳಬೇಕಾಗಿತ್ತು ಪ್ರಾರಂಭದಲ್ಲಿ ಗ್ರಾಮಸ್ಥರು ಅವರನ್ನು ಹುಗಿಯುವ ಯತ್ನವನ್ನೇನೋ ಮಾಡಿದರು ಆದರೆ ಜರ್ಮನರ ಸರ್ಪಕಾವಲು ಬಲವಾಗಿತ್ತು ತರುಣ ಪಾಶ್ಕ್ಯಕನು ಹಾರೆ ಹಿಡಿದು ಒಂದು ರಾತ್ರಿ ಒಬ್ಬನ ಮೃತದೇಹದ ಹತ್ತಿರದ ವರೆಗೆ ಹೋಗಿದ್ದನು. ಹೋದವನು ಮಾತ್ರ ಹಿಂದೆ ಬರಲಿಲ್ಲ. ಜರ್ಮನರ ಗುಂಡಿಗೆ ಬಲಿಯಾಗಿ ಇತರ ಮೃತ ಸೈನಿಕರೊಡನೆ ತಾನೂ ಅಲ್ಲಿ ಮಲಗಬೇಕಾಯಿತು

ಆದರೆ ಅಲ್ಲಿ ಮಲಗಿದವರ ಪೈಕಿ ಈ ಊರಿನ ಯುವಕರು ಯಾರೂ ಇರಲಿಲ್ಲ ಆ ಊರಿನಿಂದಾಗಿ ಹಾದು ಹೋಗಲಿದ್ದ ಸೈನ್ಯದಲ್ಲಿ ಊರವರ ಪೈಕಿ ಅವಳ ಮಗ ಪಾಷ್ಯಾ ಒಬ್ಬನೇ ಇದ್ದನು ಎಷ್ಟು ಆನಂದ, ಉತ್ಸಾಹ ಯುಕ್ತನಾಗಿ ಅವನು ಪ ಸಯೊಳಗೆ ಬಂದಿದ್ದನು! ನಗುತ್ತಾ ಬಂದು ತಾಯಿ ಯನ್ನು ಆಲಿಂಗಿಸಿದ್ದನು ಆದರೆ ಒಂದೇ ಕ್ಷಣ, ಚಹಾ ಮಾಡಲು ಒಲೆ ಹೊತ್ತಿಸುವಷ್ಟರಲ್ಲಿ ಜರ್ಮನರು ಊರನ್ನು ಮುತ್ತಿದರು ಸಾಧ್ಯಾನಗಿ ಅವನ ಜೊತೆಗಿದ್ದ ಎಲ್ಲ ರಶ್ಯನ್ ಸೈನಿಕರೂ ಹೊಕಿಬದಿಯ ಕೂರಕಲಿನಲ್ಲಿ ಕೊನೆಯ ವರಗೂ ಕಾದುತ್ತಾ ಎಲ್ಲರೂ ಅಲ್ಲೇ ತಮ್ಮ ದೇಹಗಳನ್ನಿಟ್ಟರು

ಅವಳು ಅಂದೇ ಅವನ ಶರೀರವನ್ನು ಗುರುತಿಸಿದ್ದಳು ಅವಳು ಅಲ್ಲಿಗೆ ಹೋಗುವ ಮೊದಲೇ ಅವನ ಪ್ರಾಣಪಕ್ಷಿಯು ಹಾರಿಹೋಗಿತ್ತು. ಹೊರ ಹೊಮ್ಮಿದ ರಕ್ತದ ಬಿಸಿಯು ಇನ್ನೂ ಆರಿರಲಿಲ್ಲ ಅದರ ಮೊದಲೇ ಅವನ ಉಡುಪನ್ನೆಲ್ಲಾ ಜರ್ಮನ ಸೈನಿಕರು ಕೊಳ್ಳೆ ಹೊಡೆದಿದ್ದರು

ಅಂದಿನಿಂದ ಈ ಒಂದು ತಿಂಗಳಲ್ಲಿ ಪ್ರತಿದಿನವೂ ನೀರಿಗೆ ಹೋದಾಗ ಅವಳು ತನ್ನ ಮಗನ ಮೃತ ಕಳೇಬರವನ್ನು ನೋಡಿ ಬರುತ್ತಿದ್ದಳು ರಶ್ಯಾ ದೇಶದ ಕಠಿಣ ಚಳಿಗಾಲವಾದ್ದರಿಂದ ದೇಹವು ಹಿಮಗಟ್ಟಿ ಮರದ ಕೊರಡಿ ನಂತಾಗಿದ್ದರೂ ಕೊಳೆತಿರಲಿಲ್ಲ ಅವನ ದೇಹವನ್ನು ದಿನಾಲು ನೋಡು ವುದೇ ಅವಳ ಮನಸ್ಸಿಗೆ ಒಂದು ರೀತಿಯ ಸಮಾಧಾನವನ್ನು ಕೊಡುತ್ತಿತ್ತು. ಆ ಸಮಾಧಾನವೂ ಇನ್ನು ತನಗೆ ಇಲ್ಲದಂತಾಗುವುದೇ ?

ಆ ಆಫೀಸರನಿಗೆ ತಿಳಿದರೆ, ಅವನ ದೇಹವನ್ನು ತುಂಡು ತುಂಡು ಮಾಡಿ ನಾಲ್ಕು ಕಡೆಗೂ ಚೆಲ್ಲುವನೋ ಏನೊ ? ಈ ವಿಚಾರ ಮನಸ್ಸಿಗೆ ಬಂದೊಡನೆ ಅವಳು ಬಹಳ ಭಯಭೀತಳಾದಳು ತಾಯಿಯ ಕರುಳು ! ಇಲ್ಲವಾದರೆ ಪ್ರಾಣವು ಹೋದಮೇಲೆ ಮೃತ ಕಳೇಬರಕ್ಕೆ ಏನು ಮಾಡಿದರೂ ನೋವೆಲ್ಲಿಯದು ? ಆದರೆ, ತನ್ನ ಮಗನನ್ನು ತನ್ನಿಂದ ದೂರ ಕೊಂಡು ಹೋಗಿ ಚಿತ್ರಹಿಂಸೆಗೆ ಗುರಿಮಾಡುತ್ತಾರೆಂಬ ಭಯಂಕರ ಭಾವನೆಯು ಅವಳ ನೊಂದ ಹೃದಯಕ್ಕೆ ಇನ್ನಷ್ಟು ಅಧಿಕ ವೇದನೆಯನ್ನುಂಟುಮಾಡಿತು

ವಾಸ್ಯಾನನ್ನು ಈ ಭಯಾನಕ ಆಪತ್ತಿನಿಂದ ರಕ್ಷಿಸಲಿಕ್ಕೇಬೇಕೆಂದು ಅವಳಿಗೆ ತೋರಿತು. ಆದರೆ ರಕ್ಷಿಸುವದೆಂದರೆ ಹೇಗೆ ತಾನೇ ಸಾಧ್ಯ?

ಸಣ್ಣವನಿದ್ದಾಗ ಎತ್ತಿ ಆಡಿಸಿದ್ದಳೆಂದು ಈಗ ಅವನನ್ನು ಎತ್ತುವುದು ವೃಧ್ಧಾಪ್ಯದಿಂದ ಶಿಥಿಲವಾದ ದೇಹಕ್ಕೆ ಶಕ್ಯವಾದಿತೇ? ಯಾಕೆ ಶಕ್ಯವಾಗ ಲಾರದು? ನಿಸ್ಸೀಮ ಪ್ರೇಮಕ್ಕೆ ದೇಹಾತೀತವಾದ ದಿವ್ಯಶಕ್ತಿ ಇದೆಯಲ್ಲವೇ ಮಾತೃಪ್ರೇಮದ ದೃಢಸಂಕಲ್ಪದಿಂದ ಅವನನ್ನು ಎತ್ತಲು ಹೋದರೆ ಎತ್ತುವ ಸಾಮರ್ಥ್ಯ ತಾನಾಗಿ ಬರುವುದು. ಸರಿ, ಆಗಲೇ ಹೋಗಿ ಪುಸ್ಕ್ಯಾಳು ಜರ್ಮನ್ ಆಫೀಸರನಿಗೆ ತಿಳಿಸುವ ಮೊದಲೇ ತನ್ನ ಮುದ್ದು ವಾಸ್ಯಾನನ್ನು ಎತ್ತಿ ಬೇರೆ ಕಡೆಗೆ ಒಯ್ಯುವುದೆಂದು ನಿರ್ಧಾರ ಮಾಡಿದಳು ಅವನು ಮಲ ಗಿದ್ದ ಕೊರಕಲದೆಡೆಗೆ ಹೋಗಲು ಹೊರಟಳು ಆದರೆ ಅವನನ್ನು ಎತ್ತಿ ಕೊಂಡು ಹೋಗುವುದು ಎಲ್ಲಿಗೆ? ಇದಕ್ಕೆ ಉತ್ತರ ಅವಳಿಗೆಲ್ಲೂ ಸಿಗಲಿಲ್ಲ. ಆ ನೀಚ ಜರ್ಮನರ ಕಣ್ಣಿಗೆ ಕಾಣದಂತೆ, ಅವರ ಕೊಳಕು ಬೂಟುಗಳ ತುಳಿತಕ್ಕೆ ಸಿಕ್ಕದಂತೆ ಅವನನ್ನು ಅಡಗಿಸಲು ಸ್ಥಳವಾದರೂ ಎಲ್ಲಿದೆ? ತನ್ನ ಅಸಹಾಯತೆಯ ನಿರಾಶೆಯು ಅವಳನ್ನು ಆವರಿಸಿತು ಎಲ್ಲವನ್ನೂ ಅವಳು ಆಗ ಮರೆತಳು ಒಲೆಯ ಮೇಲಿಟ್ಟಿದ್ದ ತರಕಾರಿ ಅಲ್ಲೇ ಸುಟ್ಟು ಬೂದಿ ಯಾಯಿತು ಕೈಯಲ್ಲಿದ್ದ ಕತ್ತಿಯು ಕೆಳಗೆ ಕಾಲಿನ ಮೇಲೆ ಬಿದ್ದು ಬೆರಳಿಗೆ ಗಾಯ ಮಾಡಿತು. ಅದರ ನೋವಿಗೆ ಅವಳು ಎಚ್ಚತ್ತಳು.

ಫೆಡೋಸ್ಯಾಳು ಈ ವಿಚಾರಗಳಲ್ಲಿ ಮಗ್ನಳಾಗಿದ್ದಾಗ ಅತ್ತ ತನ್ನ ಕೋಣೆಯಲ್ಲಿ ಪುಸ್ಕ್ಯಾಳು ಗ್ರಾಮಫೋನಿನಲ್ಲಿ ಒಂದರಹಿಂದೊಂದು ಗಾನ ದೋಸೆಗಳನ್ನು ಇಟ್ಟು ತಿರುಗಿಸುತ್ತಾ ಹೊತ್ತು ಕಳೆಯಲು ಪ್ರಯತ್ನಿಸುತ್ತಿ ದ್ದಳು ಆದರೆ ಯಾವ ಹಾಡಿನಿಂದಲೂ ಮನಸ್ಸಿನ ಬೇಸರಿಕೆ ಹೋಗಲಿಲ್ಲ ಕೊನೆಗೆ ಯಾವುದರಿಂದಲೂ ತೃಪ್ತಳಾಗದೆ ಗ್ರಾಮಫೋನನ್ನು ಮುಚ್ಚಿಟ್ಟು ಕೂತಲ್ಲಿಂದ ಎದ್ದಳು ಕರ್ಟನು ಯಾರಿಂದಲೋ ಕೊಳ್ಳೆಹೊಡೆದು ತಂದು ತನಗೆ ಕೊಟ್ಟಿದ್ದ ರೋಮದ ಅಂಗಿಯನ್ನು ತೊಟ್ಟಳು ರಶ್ಯದೇಶದ ಕಠಿಣ ಶೀತಬಾಧೆಯನ್ನು ತಡೆಯುವಷ್ಟು ಅದು ದಟ್ಟವಾಗಿತ್ತು. ಹಾಗೂ ನುಣು ಪಾಗಿ ಸುಂದರವಾಗಿದ್ದುದರಿಂದ ಪುಸ್ಕ್ಯಾಳಿಗೆ ಚೆನ್ನಾಗಿ ಒಪ್ಪುತ್ತಿತ್ತು ಇದನ್ನು

ಧರಿಸಿ ಕನ್ನಡಿಯಲ್ಲೊಮ್ಮೆ ನೋಡಿದಳು. ತನ್ನ ಸೌಂದರ್ಯವನ್ನು ತಾನೇ ಮೆಚ್ಚಿ ಮನೆಯಿಂದ ಹೊರಬಿದ್ದಳು

ರಸ್ತೆಯಲ್ಲಿ ಯಾರೂ ಇರಲಿಲ್ಲ ತನ್ನ ಬಿಡಾರದ ಮುಂದೆ ಪಹರೆ ಮಾಡುತ್ತಿರುವ ಸೈನಿಕನ ಹೊರತು ಬೇರೆ ಯಾವ ಮನುಷ್ಯಪ್ರಾಣಿಯೂ ಅವಳ ಕಣ್ಣಿಗೆ ಕಾಣಿಸಲಿಲ್ಲ ಸ್ವಲ್ಪ ಮುಂದೆ ನಡೆದು ಊರ ನಡುವಿನ ಚೌಕವನ್ನು ದಾಟಿದಳು ಅಲ್ಲೇ ಒಂದು ಫಾಶಿ ಖಂಬವಿದ್ದು, ಅದರಲ್ಲಿ ಒಬ್ಬ ಯುವಕನ ಶವವು ನೇತಾಡುತ್ತಿತ್ತು. ಕರ್ಟನ ಅಧಿಕಾರದ ಸಂಕೇತ ಈ ಮೃತದೇಹವನ್ನು ಕೆಳಗಿಳಿಸಲು ಹಾಗೂ ಅದಕ್ಕೆ ಅಂತ್ಯ ವಿಧಿಗೈಯಲು ಕೂಡದೆಂದು ಜರ್ಮನರು ನಿರ್ಬಂಧ ಹಾಕಿದ್ದರು ಈ ದೃಶ್ಯವನ್ನು ಪುಸ್ಯಾಳು ಎಷ್ಟೋ ಸಾರೆ ನೋಡಿದ್ದಳು. ಹಿಮದಿಂದ ಮರಗಟ್ಟಿ ಹೋಗಿದ್ದರಿಂದ ಅದು ಮನುಷ್ಯದೇಹವೆಂತ ಗುರುತಿಸಲುಕೂಡಾ ಅಸಾಧ್ಯವಾಗಿ ನೋಡುವಾಗ ಮರದ ಕೊರಡಿನಂತೆಯೇ ಕಾಣುತ್ತಿತ್ತು ಅಲ್ಲಿಂದ ಅವಳು ಅದರ ಪಕ್ಕದಲ್ಲಿನ ರಸ್ತೆ ಹಿಡಿದು ಹೋದಳು ಅದೂ ನಿರ್ಜನವಾಗಿತ್ತು ಒಂದೆರಡು ಮನೆಗಳಿಂದ ಮಾತ್ರ ಹೊಗೆಯೇಳುತ್ತಿತ್ತು. ಅವು ಜರ್ಮನ ಆಫೀಸರರಿದ್ದ ಮನೆಗಳು. ಬೇರೆ ಮನೆಗಳಲ್ಲಿ ಯಾರೂ ಅಡಿಗೆ ಮಾಡುತ್ತಿರಲಿಲ್ಲ. ಅಡಿಗೆ ಮಾಡಲು ಅಲ್ಲಿ ಏನೂ ಇರಲಿಲ್ಲ

ಒಂದು ಮನೆಯ ಬಾಗಿಲು ತೆರೆದು ಯಾರೋ ಹೊರಗೆ ಇಣಿಕಿ ನೋಡಿದರು ಆದರೆ ಪುಸ್ಯಾಳನ್ನು ಕಂಡೊಡನೆ ಬೇಗನೆ ಬಾಗಿಲು ಇಕ್ಕಿದರು. ಇಂತಹ ಅನುಭವವು ಅವಳಿಗೆ ಮೊದಲಿನದಲ್ಲ. ಅವಳನ್ನು ಕಂಡರೆ ಚಿಕ್ಕ ಮಕ್ಕಳು ಕೂಡಾ ಓಡಿ ಹೋಗುತ್ತಿದ್ದರು ಕುಷ್ಟರೋಗಿಯನ್ನು ದೂರ ಮಾಡಿದಂತೆ ಊರಿನ ಜನರು ಅವಳನ್ನು ದೂರೀಕರಿಸಿದ್ದರು

ಮೂರ್ಖರು! ವಸ್ತುಸ್ಥಿತಿಯನ್ನರಿಯದೆ ಬರೀ ಕಾಲ್ಪನಿಕ ಭವಿತವ್ಯಕ್ಕೆ ಮರುಳಾಗಿ ತಮ್ಮ ಗೋರಿಯನ್ನು ತಾವೇ ಅಗಿಯುತ್ತಿದ್ದರವರು. ರಶ್ಯವು ಗೆಲ್ಲುವುದು ಎಂದೆಂದಿಗೂ ಅಶಕ್ಯವೆಂಬುದರಲ್ಲಿ ಸಂಶಯಕ್ಕೇನೇ ಎಡೆ ಇರಲಿಲ್ಲ ಈ ಹುಚ್ಚರಿಗೆ ಇಷ್ಟು ಸುಲಭ ವಿಷಯವು ಕೂಡಾ ತಿಳಿಯಬಾರದೆ? ಜರ್ಮನರ ಆಕ್ರಮಣವನ್ನು ಒಪ್ಪಿಕೊಂಡು ಅವರ ಆಜ್ಞಾಧಾರಕರಾಗಿ

ನೆಮ್ಮದಿಯಿಂದ ಇರುವುದನ್ನು ಬಿಟ್ಟು ಎಂದೂ ಬರಲಾರದ ರಶ್ಯದ ವಿಜಯದ ದಾರಿ ನೋಡಿ ನೋಡಿ ಉಪವಾಸ ಬಿದ್ದು ಸಾಯುವುದೇಕೆ? ತಾನಾದರೂ, ಎಷ್ಟು ಸುಖದಲ್ಲಿದ್ದೇನೆ! ತನ್ನ ಭವಿತವ್ಯವನ್ನು ರೂಪಿಸುವ ಹಕ್ಕು ಎಲ್ಲರಿಗೂ ಇದ್ದೇ ಇದೆ. ಅದರ ಸರಿಯಾದ ಉಪಯೋಗ ತಾನು ಮಾಡಿಕೊಂಡಿದ್ದೇನೆ ಈ ಮೂರ್ಖರು ಮಾಡಿಕೊಳ್ಳದಿದ್ದರೆ ಯಾರೇನು ಮಾಡಬಲ್ಲರು?

ಅಂದು ಸಹಿಸಲಸಾಧ್ಯವಾದಷ್ಟು ಕಠಿಣ ಚಳಿ ಬಿದ್ದಿತ್ತು ರವಿಯು ನೆತ್ತಿಗೇರಿದರೂ ಚಳಿಯ ತೀಕ್ಷ್ಣತೆಯು ಕಡಿಮೆಯಾಗಿರಲಿಲ್ಲ ರವಿಕಿರಣಗಳು ಹಿಮವನ್ನೇ ಹೊರಸೂಸುತ್ತವೊ ಎಂಬಂತೆ ಭಾಸವಾಗುತ್ತಿತ್ತು ಪುಸ್ಯಾಳು ಚಳಿಗೆ ಅಂಜುತ್ತಿದ್ದಳು ಜರ್ಮನಿಯಲ್ಲಿ ಇಷ್ಟು ಚಳಿ ಇಲ್ಲವಂತೆ ಕರ್ಟನು ತನ್ನನ್ನು ಜರ್ಮನಿಗೆ ಕರೆದೊಯ್ಯುವವನಿದ್ದಾನೆ ಆದರೆ ಈ ಯುದ್ಧ ಮುಗಿದು ಆ ಸುದಿನ ಎಂದು ಬರುವುದೋ? ಸುಮ್ಮನೆ ಸಾಯುವದಕ್ಕಿಂತ ಜರ್ಮನರ ವಿಜಯವನ್ನು ಒಪ್ಪಿಕೊಂಡು ಯುದ್ಧ ನಿಲ್ಲಿಸಿ ಬಿಡುವಷ್ಟು ಬುದ್ಧಿ ಬರಬಾರದೆ, ಈ ರಶ್ಯನರಿಗೆ.

ತನ್ನ ರೋಮದ ಕೋಟನ್ನು ಒಳಗೆಳೆಯುತ್ತ ಪುಸ್ಯಾಳು ಕರ್ಟನ ಆಫೀಸಿನೆಡೆಗೆ ಬಂದಳು ಅವಳೆಂದು ತಿಳಿದೊಡನೆ ಹೊರಗಿದ್ದ ಪಹರೆಯವನು ತಡೆಯದೆ ಒಳಗೆ ಬಿಟ್ಟನು

ಈ ಹೊತ್ತಿನಲ್ಲಿ ಅವಳು ಬಂದದ್ದನ್ನು ನೋಡಿ ಕರ್ಟನಿಗೆ ತುಸು ಆಶ್ಚರ್ಯವಾಯಿತು "ಏನಾಯಿತು" ಎಂದು ಸ್ವಲ್ಪ ಗಾಬರಿಯಿಂದ ಕೇಳಿದನು.

"ಏನೂ ಇಲ್ಲ ನಿನ್ನ ಸಹವಾಸದ ಆಸೆಯಾಯಿತು" ಎಂದು ಹೇಳಿ ಪುಸ್ಯಾಳು ಕೋಣೆಯ ಸುತ್ತಲೂ ನೋಡಿದಳು. ಕರ್ಟನ ಮುಂದೆ ಯೌವನವನ್ನು ದಾಟಿದ ನರೆತ ಕೂದಲಿನ ಒಬ್ಬ ಹಳ್ಳಿಗ ಸ್ತ್ರೀಯು ನಿಂತಿದ್ದಳು. ತುಂಬಿದ ಬಸುರಿ!

"ಬೇಗನೇ ಮುಗಿಯುವುದೊ ಕೆಲಸ?" ಪುಸ್ಯಾಳು ಅಸ್ವಸ್ಥತೆಯಿಂದ ಕೇಳಿದಳು.

" ನಾನು ಮೊದಲೇ ಹೇಳಿಲ್ಲವೇ ? ಕೆಲಸ ತುಂಬಾ ಇದೆಯೆಂದು " ಎಂದು ಕರ್ಟನು ಗಟ್ಟಿಯಾಗಿ ಒದರಿದನು. ಆ ಮೇಲೆ ಕುರ್ಚಿಯಿಂದೆದ್ದು ಅವಳನ್ನು ಕಿಟಕಿಯ ಬಳಿ ಕರೆದೊಯ್ದು " ಇಲ್ಲಿ ಬರಬೇಗವೆಂದು ಎಷ್ಟು ಸಾರೆ ಹೇಳಿದ್ದೇನೆ, ಯಾವ ರೀತಿಯ ವರ್ತನ ನಿನ್ನದಿದು, ಕೆಲಸಗಳ ರಾಶಿ ಬಿದ್ದಿದೆ ಇಲ್ಲಿ, ಗೊತ್ತಾಗುವುದಿಲ್ಲವೆ ? ಇದು ಮುಗಿದೊಡನೆ ನಾನು ನಿನ್ನ ಬಳಿ ಬಂದೇ ಬರುವೆನು "

ಬೆದರಿಸಲ್ಪಟ್ಟ ಮಗುವಿನಂತೆ ಅವಳ ಮುಖಭಾವವಾಯಿತು. " ನಾನು ಎಷ್ಟರವರೆಗೆ ಒಬ್ಬಂಟಿಗಳಾಗಿರಲಿ ? ಒಂಟಿತನದ ಭಯವಾಗುತ್ತಿದೆ ನನಗೆ ಊಟದ ಹೊತ್ತಿಗಾದರೂ ಒಮ್ಮೆ ಮನೆಗೆ ಬಾ. ಒಟ್ಟಿಗೆ ಊಟವಾದರೂ ಮಾಡೋಣ ನನಗೆ ಕಣ್ಣೀರು ಬರುತ್ತಿದೆ. . .ನೀನು ಮನೆಯಲ್ಲಿರುವುದೇ ಇಲ್ಲ, ಈ ಮುದುಕಿಯೊಡನೆ ಮಾತಾಡುವುದರಲ್ಲಿ ನಿನಗೇನು ಆನಂದವಾಗುವುದೂ ? ಆ ಕೆಲಸ ಬೇರೆ ಯಾರಿಗೂ ಒಪ್ಪಿಸಬಾರದೆ ?

" ಬೇರೆಯವರಿಂದ ಅದು ಆಗದ ಕೆಲಸ, ಅವಳು ಸಾಮಾನ್ಯ ಹೆಂಗಸಲ್ಲ, ಗ್ಯುರಿಲ್ಲಾ, ಗೊತ್ತೇ ? "

ಪುಸ್ಸ್ಯಾಳು ಅಪನಂಬಿಕೆಯ ಹುಸಿನಗುವನ್ನೊಂದು ನಕ್ಕಳು

" ಗ್ಯುರಿಲ್ಲಾ ! ಕರ್ಟ, ಏನು ಹೇಳುತ್ತಿರುವೆ ? ಅವಳು ತುಂಬಿದ ಬಸುರಿ ಕಾಣುವುದಿಲ್ಲವೇ ನಿನಗೆ ? "

" ನೋಡು, ಅದೇ ನಾನು ಹೇಳಿದ್ದು. ಈ ಎಲ್ಲಾ ಗಹನ ವಿಚಾರ ನಿನಗೆ ತಿಳಿಯಲಾರದು ಈಗ ತೀವ್ರ ಮನೆಗೆ ಓಡು. ನಾನು ಬೇಗನೇ ಬರುವೆನು "

ಪುಸ್ಸ್ಯಾಳು ಅವನ ಗಲ್ಲವನ್ನು ಸವರುತ್ತಾ ಹೇಳಿದಳು, " ನಾನು ಇಲ್ಲೇ ಕುಳಿತು ಕೇಳುವೆ, ನಿನಗೆ ಏನೂ ತೊಂದರೆ ಮಾಡುವುದಿಲ್ಲ, ಆಗಬಹುದೇ?"

" ಕೇಳಬೇಕೆಂದಿದ್ದರೆ ಕೇಳು, ಆದರೆ ಮನೆಯಲ್ಲಿ ಒಬ್ಬಳೇ ಕುಳಿತಿರುವದಕ್ಕಿಂತ ಇದು ಹೆಚ್ಚಿಗೆ ಬೇಸರಿಕೆಯನ್ನು ತರುವುದು" ಎಂದು ಹೇಳಿ ಒಂದು ಕುರ್ಚಿ ಎಳೆದು ಅವಳನ್ನು ಕುಳ್ಳಿರಿಸಿದನು

ಪುಸ್ಯಾಳು ಕುಳಿತು ತನ್ನ ರೋಮದ ಅಂಗಿಯನ್ನು ತೆಗೆದಳು, ಅಪ ನಂಬಿಕೆಯ ಹುಸಿನಗು ಅವಳ ತುಟಿಗಳನ್ನು ಇನ್ನೂ ಬಿಟ್ಟಿರಲಿಲ್ಲ ಇವಳು ಗ್ಯುರಿಲ್ಲಾ! ಹಾಸ್ಯಾಸ್ಪದ ಕಲ್ಪನೆ ಇದು, ಕರ್ಟನು ಗ್ಯುರಿಲ್ಲಾಗಳಿಗೆ ಅಂಜು ತ್ತಿದ್ದನು. ತನಗೆ ಯಾವುದರ ಭಯವೂ ಇಲ್ಲವೆಂದು ಕೊಚ್ಚಿಕೊಳ್ಳುತ್ತಿ ದ್ದರೂ ಗ್ಯುರಿಲ್ಲಾಗಳಿಗೆ ಹೆದರುತ್ತಿದ್ದನೆಂಬುದನ್ನು ಅವಳು ಕಂಡುಕೊಂಡಿ ದ್ದಳು. ಆದರೆ ಈ ಮುದಿ ಹೆಂಗಸಿಗೆ ಅಂಜುವುದೆಂದರೆ!

ಪುಸ್ಯಾಳ ಗ್ಯುರಿಲ್ಲಾಗಳ ಕಲ್ಪನೆಯೇ ಬೇರೆಯಾಗಿತ್ತು ಗ್ಯುರಿಲ್ಲಾ ಗಳು ಕೂದಲು ಜಟಿಯಾಗಿ ಬೆಳೆದ, ಹಾಗು ಕೊಡಲಿ ಕುಡುಗೋಲುಗಳಿಂದ ಸಜ್ಜರಾಗಿ ಕಾಡಿನಲ್ಲಿ ಅಡಗಿರುವ ಜನರೆಂದು ಅವಳು ತಿಳಿದಿದ್ದಳು ಆದರೆ, ಇವಳು ಬರೀ ಹಳ್ಳಿಯ ಹೆಂಗಸು, ಮುದುಕಿ, ಅದಲ್ಲದೆ ಗರ್ಭಿಣಿ

ಕರ್ಟನು ಪ್ರಶ್ನೆಗಳನ್ನು ಕೇಳುತ್ತಾ ಇದ್ದನು ಇದೆಂತಹ ವಿಚಾರಣೆ! ಬೇಸರದ ಧ್ವನಿ, ಕೇಳಿದ ಪ್ರಶ್ನೆಗಳದ್ದೇ ಪುನರುಚ್ಚಾರಣೆ. ಎಲ್ಲದಕ್ಕೂ ಒಂದೇ ಉತ್ತರ, "ನನಗರಿಯದು" ಈ ರೀತಿಯ ವಿಚಾರಣೆಯು ಬೇಸರ ತರುವದಷ್ಟೇ ಅಲ್ಲ, ಕೇವಲ ಅರ್ಥವಿಲ್ಲದ ಮೂರ್ಖತನವೆಂದು ಪುಸ್ಯಾಳಿಗೆ ತೋರಿತು

'ಒಲೆನಾಳಿಗೆ ಪ್ರಾಣ ಹಾರಿ ಹೋಗುವಷ್ಟು ದಣುವಾಗಿದ್ದಿತು. ತುಂಬಿದ ಬಸುರಿತನದ ಸಹಜ ಅಶಕ್ತತೆ, ಅಲ್ಲದೆ ರಾತ್ರೆ ಇಡೀ ಅರೆಕ್ಷಣ ಕೂಡ ನಿದ್ದೆ ಇದ್ದಿಲ್ಲ. ಅದರ ಮೇಲೆ ಮುಂಜಾನೆಯಿಂದ ಈ ಆಫೀಸರನ ಮೇಜಿನ ಮುಂದೆ ನಿಂತ ಶ್ರಮ, ಮೈಯೊಳಗಿನ ನರಗಳೆಲ್ಲಾ ಯಾರೊ ಎಳೆಯುವಂತೆ ಎಲ್ಲಾ ಅವಯುವಗಳು ಅತಿಯಾಗಿ ನೋಯತೊಡಗಿದ್ದುವು. ಕಾಲುಗಳು ಬಾತಿದ್ದು, ಈ ಹೊರೆಯನ್ನು ಇನ್ನು ಹೊರಲಾರೆವೆಂದು ಸೂಚಿ ಸುವಂತೆ ಒಂದೇ ಸವನೆ ನಡುಗುತ್ತಿದ್ದುವು. ಆಗಾಗ ತಲೆ ತಿರುಗಿ ಕತ್ತಲು ಕವಿದಂತಾಗಿ ಏನೂ ಕಾಣಿಸುತ್ತಿರಲಿಲ್ಲ ಹಡೆಯುವ ಹೊತ್ತು ಬಂತೆಂದು ಅವಳಿಗೆ ಅನಿಸಿತು. ಆ ಕ್ಷಣದಲ್ಲಿ ಪುಸ್ಯಾಳನ್ನು ಗುರುತಿಸಿದಳು. ಎಂತಹ ಅಪಶಕುನ! ಮಗುವಿನ ಜನ್ಮಗಳಿಗೆಯಲ್ಲಿ ಈ ನರಾಧಮಳ ದರ್ಶನವೇ! ತಾನು ಮಾಡಿದ ಮಹದಪರಾಧಕ್ಕಾಗಿ ಎಳ್ಳಷ್ಟೂ ನಾಚದೆ ಹೇಗೆ ತನ್ನ

ವೈಭವವನ್ನು ಪ್ರದರ್ಶಿಸುತ್ತಾ ತನ್ನ ದೇಶಬಾಂಧವರಿಗಾಗುತ್ತಿರುವ ಚಿತ್ರ ಹಿಂಸೆಯನ್ನು ಕಂಡು ಆನಂದಿಸುವಂತೆ ಕುಳಿತಿರುವಳು! ಛೀ, ತನ್ನ ಮಗು ಮೊದಲಾಗಿ ಕಣ್ಣು ತೆರೆಯುವುದು ಈ ದೇಶದ್ರೋಹಿಯ ಮುಂದೆಯೇ. ಒಲೆನಾಳಿಗೆ ಪುಸ್ಯಾಳ ಕಣ್ಣೆದುರಿನಿಂದ ಓಡಿ ಹೋಗೋಣವೆನಿಸಿತು, ಆದರೆ ಅದೆಲ್ಲಿ ಸಾಧ್ಯ! ಹಡೆಯುವ ವೇಳೆಯನ್ನಾದರೂ ಮುಂದೂಡಲೆ? ಆದರೆ ನಿಸರ್ಗದ ವೇಳಾಪತ್ರಿಕೆಯಲ್ಲಿ ಬದಲಾವಣೆ ಮಾಡಲು ಮನಷ್ಯಮಾತ್ರರಿಗೆಲ್ಲಿ ಅಧಿಕಾರವಿದೆ?

ಒಲೆನಾ ಮೂರ್ಛೆ ಬಂದಂತಾಗಿ ಬಿದ್ದುಬಿಟ್ಟಳು. ಬಿದ್ದಲ್ಲಿ "ನೀನು ಈಗ ತಾಯಿ" ಎಂಬ ಶಬ್ದಗಳಷ್ಟೇ ಕೇಳಿಸಿದುವು

"ನೀನು ಈಗ ತಾಯಿ" ಈ ಮಾತನ್ನು ಹೇಳಿದವನಾರು? ಮೇಜಿನ್ನ ಹಿಂದೆ ಕೂತು ಪ್ರಶ್ನೆಗಳನ್ನು ಕೇಳುತ್ತಲಿದ್ದ ಜರ್ಮನಿನ ಆಫೀಸರನೇ ಅಥವಾ ಕಾಡಿನಲ್ಲಿ ಅಡಗಿದ್ದ ಗ್ಯರಿಲ್ಲಾಗಳ ಮುಂದಾಳಾದ "ಮುಂಗುರುಳೀ"? ಈ ಪ್ರಸವವೇದನೆಯ ಕಾಲದಲ್ಲಿಯೂ ಕೂಡ ಅವಳಿಗೆ ತನ್ನ ಗ್ಯರಿಲ್ಲಾ ತಂಡದ ನೆನಸಾಯಿತು ಆ ತಂಡದಲ್ಲಿ ಅವಳ ಹೊರತು ಇತರರೆಲ್ಲರೂ ಚಿಕ್ಕವರು, ಹುಡುಗರು. ಇವಳೇ ಅವರೆಲ್ಲರಿಗೆ ತಾಯಿ. ಅವರೆಲ್ಲರಿಗೆ ಅಡಿಗೆ ಮಾಡುವುದು, ಅವರ ಅರಿವೆ ತೊಳೆಯುವುದು, ಅಸ್ವಸ್ಥದಲ್ಲಿ ಬಿದ್ದರೆ ಆರೈಕೆ ಮಾಡುವುದು, ಇದನ್ನೆಲ್ಲಾ ಇವಳೇ ಮಾಡುತ್ತಿದ್ದಳು. ಅವರು ಅವಳನ್ನು ತಾಯಿಯೆಂದೇ ಕರೆಯುತ್ತಿದ್ದರು. ಅವರಿಗೆ ಅವಳಲ್ಲದೆ ಬೇರೆ ತಾಯಿ ಇರಲಿಲ್ಲ.

"ನೀನು ಈಗ ತಾಯಿ"

ಈ ಮಾತು ಈಗಾಗಲೇ ಆಗಿ ಹೋದ ತನ್ನ ಪ್ರಸವಕ್ಕೆ ಸಂಬಂಧಿಸಿದ ದೆಂಬುದನ್ನು ಅವಳು ಮರೆತಳು. ಅವಳ ಮಟ್ಟಿಗೆ ಅವು ಗ್ಯರಿಲ್ಲಾ ಹುಡುಗರು ಕೊಟ್ಟ ಕರ್ತವ್ಯದ ಕರೆಯಾಗಿದ್ದಿತು ಈಗ ಅವರ ಜೀವ ಅವಳ ಕೈಯಲ್ಲಿತ್ತು. ಅವರು ಇರುವ ಸ್ಥಾನ ಯಾವುದೆಂದು ಒಂದು ಮಾತು ಹೇಳಿದರೆ ಸಾಕು, ಅವಳ ಸಂಪೂರ್ಣ ಬಿಡುಗಡೆ, ಆದರೆ ಅವರ ಸಂಪೂರ್ಣ ನಾಶ ಮಕ್ಕಳನ್ನು ರಕ್ಷಿಸುವ ಹೊಣೆಗಾರಿಕೆಯು ತಾಯಿಯ ಮೇಲಿದೆ ಎಂಬುದನ್ನು ಅವಳಿಗೆ ಎಚ್ಚರಿಸಿ ತಿಳಿಸಿದುವು ಈ ಶಬ್ದಗಳು. "ನೀನು ಈಗ

ತಾಯಿ ”

ಪ್ರಸವ ಆದೊಡನೆ ಕರ್ಟನ ಪ್ರಶ್ನೆಗಳ ಸುರಿಮಳೆಗೆ ಪುನಃ ಪ್ರಾರಂಭ ವಾಯಿತು.

“ಗ್ಯುರಿಲ್ಲಾಗಳ ಗುಪ್ತಸ್ಥಾನವೆಲ್ಲಿ ? ”

“ ನನಗರಿಯದು ”

ಕರ್ಟನು ಸಿಟ್ಟಿಗೆದ್ದು ಮುಷ್ಟಿಯಿಂದ ಮೇಜಿಗೆ ಬಡಿದನು ನಾಲ್ಕು ತಾಸುಗಳ ಸತತ ವಿಚಾರಣೆ ನಡಿಸಿಯೂ ಸಿಕ್ಕಿದ ಉತ್ತರ ಅದೊಂದೇ —

“ ನನಗರಿಯದು ”

“ ಹಾನ್ಸ್ ” ಒಬ್ಬ ಸೈನಿಕನ ಹೆಸರೆತ್ತಿ ಕರೆದನು

ಹಾನ್ಸನು ಒಳಗೆ ಬಂದೊಡನೆ “ ಇವಳನ್ನು ಹೊರಗೆ ತಗೊಂಡು ಹೋಗು ” ಎಂತ ಹೇಳಿ ಒಲೆನಾಳನ್ನುದ್ದೇಶಿಸಿ “ ತುಸು ಹೊತ್ತು ಹೊರಗೆ ಚಳಿಯಲ್ಲಿ ನಡುಗುತ್ತಾ ಕುಳಿತುಕೊ ಅಂದರೆ ಸ್ವಲ್ಪ ಬುದ್ಧಿ ಬರುವುದು ಸರಿಯಾದ ವಿಚಾರ ಮನಸ್ಸಿಗೆ ಬರುವುದು ವಿಚಾರ ಬಂದೊಡನೆ ಪಹರೆ ಯುವನನ್ನು ಕರೆ ಅವನು ನನಗೆ ತಿಳಿಸುವನು. ” ಎಂದು ಹೇಳಿ ತನ್ನ ಮೇಜಿನ ಕದವನ್ನಿಕ್ಕಿ “ ಪುಸ್ಯಾ, ಬಾ, ಒಟ್ಟಿಗೆ ಊಟ ಮಾಡೋಣ ” ಎಂದು ಪುಸ್ಯಾಳ ಕೈಹಿಡಿದು ಹೊರಗೆ ಹೋದನು.

ಸುತ್ತಲೂ ಬಿದ್ದ ಹಿಮವು ಶೀತಬಾಧೆಯನ್ನು ತಪ್ಪಿಸಲು ನಿಸರ್ಗವು ಧರಿಸಿದ ಬಿಳಿ ಮುಸುಕಿನಂತೆ ತೋರುತ್ತಿತ್ತು ರವಿಯು ನೆತ್ತಿಗೇರಿದ್ದನು ಅವನ ಕಿರಣಗಳಿಂದ ಹಿಮದ ಶ್ವೇತವರ್ಣವು ಒಂದು ರೀತಿಯ ವಿಶೇಷ ಕಾಂತಿಯನ್ನು ತಳೆದಿತ್ತು

ಕರ್ಟನು ದೂರಕ್ಕೆ ಬೆರಳು ತೋರಿಸಿ ಅದೇನೆಂದು ಕೇಳಿದನು ಅವನು ಬೆರಳು ತೋರಿಸಿದ ಕಡೆ ದಿಗಂತದಲ್ಲಿ ಆಕಾಶದ ನೀಲಿಯು ಭೂಮಿಯ ಬಿಳಿ ಯನ್ನು ಕೂಡುವಲ್ಲಿ ಪ್ರಕಾಶಮಾನವಾದ ಕಾಮನಬಿಲ್ಲೊಂದು ಕಾಣುತ್ತಿತ್ತು ದೇದೀಪ್ಯಮಾನವಾದ ವಿವಿಧ ವರ್ಣದ ಆ ಪಟ್ಟಿಯು ಮೇಲ ಮೇಲಕ್ಕೆ ಹೋಗಿ ಅಂತರಿಕ್ಷದ ಅನಂತದಲ್ಲಿ ವಿಲೀನ ಹೊಂದುತ್ತಲಿತ್ತು. ನೀಲ, ನೇರಳೆ, ಹಳದಿ, ಹಸುರು, ಗುಲಾಬಿ ವರ್ಣಗಳಿಂದ ಕೂಡಿದ ಸ್ವಚ್ಛ ಸ್ಫಟಿಕ

ದಂತೆ ಪ್ರಕಾಶಮಾನವಾದ ಈ ದೃಶ್ಯವನ್ನು ನೋಡಿ ಕರ್ಟನು ಆಶ್ಚರ್ಯಗೊಂಡು, "ಶೀತಕಾಲದಲ್ಲಿ ಕಾಮನ ಬಿಲ್ಲು! ಇಲ್ಲಿ ಈ ಕಾಲದಲ್ಲಿ ಅದು ಯಾವಾಗಲೂ ಕಾಣುವುದೇ ?" ಎಂದು ಕುತೂಹಲದಿಂದ ಕೇಳಿದನು.

"ನನಗನಿಸುವುದಿಲ್ಲ, ನಾನೇನು ಈ ತನಕ ನೋಡಿಲ್ಲ" ಎಂದಳು, ಈ ಸೌಂದರ್ಯದ ಸವಿಯನ್ನರಿಯದ ಪುಸ್ಯಾ

ಕರ್ಟನ ಕಣ್ಣುಗಳು ಭೂಸ್ವರ್ಗಗಳನ್ನು ಜೋಡಿಸುವ ಈ ಪ್ರಕಾಶ ಸ್ತಂಭದಿಂದ ಕದಲಲಿಲ್ಲ.

"ಬೇಗ ಬಾ, ಚಳಿಯಿಂದ ನನ್ನ ಕಾಲು ಮರಗಟ್ಟಿವೆ" ಎಂದು ಪುಸ್ಯಾ ಅವಸರ ಮಾಡಿದಳು

"ಕಾಮನ ಬಿಲ್ಲು ಶುಭ ಶಕುನವೆನ್ನುತ್ತಾರೆ" ಕರ್ಟನು ಹೇಳಿದನು.

"ಶುಭವೊ ಅಶುಭವೊ, ಕಾಮನಬಿಲ್ಲು ಅಂದರೆ ಕಾಮನಬಿಲ್ಲು" ಎಂದು ಹೇಳಿ ಪುಸ್ಯಾ ಬೇಗ ಹೋಗೋಣವೆಂದು ಕರ್ಟನ ಕೈಹಿಡಿದೆಳೆದಳು.

ಕೆಲವೇ ನಿಮಿಷಗಳಲ್ಲಿ ಆ ಪ್ರಕಾಶಸ್ತಂಭವು ಇನ್ನಷ್ಟು ಮೇಲಕ್ಕೆ ಹೋಗಿ ಸುಂದರ ಧನುಷ್ಯಾಕೃತಿಯನ್ನು ತಾಳಿತು ದಿಗಂತದ ಒಂದು ತುದಿಯಿಂದ ಇನ್ನೊಂದು ತುದಿಯ ವರೆಗೆ ತೂಗ ಹಾಕಿದ್ದ ವಿಜಯಶ್ರೀಯ ಕಮಾನಿನಂತೆ ಶೋಭಿಸುತ್ತಿತ್ತು ಅದರ ಕೆಂಪು, ನೀಲಿ, ಹಸರು ಇತ್ಯಾದಿ ವರ್ಣಗಳು ಸುವರ್ಣಮಯ ಸೂರ್ಯ ಪ್ರಕಾಶದಿಂದ ದೇದೀಪ್ಯಮಾನವಾಗಿ ತೋರುತ್ತಿದ್ದವು ಆಕಾಶವು ಭೂಮಿಯನ್ನು ಆಚ್ಛಾದಿಸಿದ ಗಾಜಿನ ದೊಡ್ಡ ಗೋಪುರದಂತೆ ಭಾಸವಾಗುತ್ತಿತ್ತು. ಚೌಕದಲ್ಲಿದ್ದ ಸೈನಿಕರು ಸಹ ತಲೆಯೆತ್ತಿ ಈ ಸಾಮಾನ್ಯ ದೃಶ್ಯದ ಕಡೆಗೆ ಎವೆ ಇಕ್ಕದೆ ನೋಡುತ್ತಿದ್ದರು

ಅವರು ಮನೆಗೆ ಮುಟ್ಟಿದಾಗ ಮುದುಕಿ ಫೆಡೋಸ್ಯಾಳು ಕೂಡಾ ಬಾಗಿಲು ಎದುರಿನಲ್ಲಿ ನಿಂತು ತನ್ನ ಕಣ್ಣುಗಳಿಗೆ ಸೌಂದರ್ಯದ ಔತಣವನ್ನು ಉಣ್ಣಿಸುತ್ತಲಿದ್ದಳು.

"ಕಾಮನ ಬಿಲ್ಲು ಶುಭಶಕುನವೆನ್ನುತ್ತಾರೆ" ಎಂದನು ಕರ್ಟ.

"ಹಾಗನ್ನುತ್ತಾರೆ, ನಿಜ" ಎಂದಳು ಫೆಡೋಸ್ಯಾ.

೪

ಕತ್ತಲ ಕವಿಯಿತು. ಕರ್ಟನು ಮೋರೆ ಮೇಲೆ ಮಾಡಿ ಗೊರಕೆ ಹೊಡೆಯುತ್ತಿದ್ದನು. ಪುಸ್ಯಾಳು ಅವನ ಕೈ, ಮೈಗಳ ನಡುವೆ ಬೆಕ್ಕಿನಂತೆ ಮುದುಡಿಕೊಂಡು ನಿದ್ದೆ ಹೋಗಿದ್ದಳು. ಅಡಿಗೆ ಮನೆಯಲ್ಲಿ ಚಾಪೆಯ ಮೇಲೆ ಕಾಲು ಚಾಚಿರುವ ಫೆಡೋಸ್ಯಾಳಿಗೆ ಮಾತ್ರ ನಿದ್ದೆ ಹತ್ತಲಿಲ್ಲ. ಅಂದಿನ ಘಟನೆಗಳೇ ಮನಸ್ಸಿನಲ್ಲಿ ತಾಂಡವವಾಡುತ್ತಿದ್ದುವು.

ಅಂದು ಸಾಯಂಕಾಲವಡೀ ಪುಸ್ಯಾಳು ಓರೆಗಣ್ಣಿನಿಂದ ತನ್ನನ್ನು ನೋಡಿ ವಿಲಕ್ಷಣವಾಗಿ ನಗುತ್ತಿದ್ದಳು. ಫೆಡೋಸ್ಯಾಳ ಗುಟ್ಟನ್ನು ತಾನು ತಿಳಿದಿದ್ದರಿಂದ ಅವಳ ಜೀವ ತನ್ನ ಕೈಯಲ್ಲಿದೆಯೆಂಬ ವಿಚಾರವು ಅವಳಿಗೆ ಅತ್ಯಾನಂದವನ್ನುಂಟು ಮಾಡಿತ್ತು. ತನ್ನ ಈ ಶಕ್ತಿಯನ್ನು ಆಗಾಗ ಫೆಡೋಸ್ಯಾಳ ನೆನಪಿಗೆ ತಂದು ಅವಳ ಜೀವವನ್ನು ಕಸಿವಿಸಿ ಮಾಡಬೇಕೆಂದೋ ಏನೋ ಅವಳು ಅದನ್ನು ಕರ್ಟನಿಗೆ ಆ ವರೆಗೆ ಹೇಳಿರಲಿಲ್ಲ. ಕೊಲ್ಲುವ ಮೊದಲು ಇಲಿಯನ್ನು ಅರೆಜೀವ ಮಾಡಿ ಆಡಿಸುವ ಬೆಕ್ಕಿನಂತೆ ಪುಸ್ಯಾಳು ಆ ಮುದುಕಿ ಫೆಡೋಸ್ಯಾಳ ವಿಷಯದಲ್ಲಿ ವರ್ತಿಸುತ್ತಿದ್ದಳು.

ಅಂದು ಹುಣ್ಣಿಮೆಯ ರಾತ್ರಿ ಸ್ವಚ್ಛವಾಗಿ ಬಿದ್ದ ಬೆಳದಿಂಗಳು ನೆಲದ ಮೇಲೆಲ್ಲಾ ದಪ್ಪವಾಗಿ ಬಿದ್ದಿದ್ದ ಹಿಮಕ್ಕೆ ನೀಲಿ ಬೆರೆತ ಹಾಲಿನ ಬಣ್ಣವನ್ನು ಕೊಟ್ಟಿತ್ತು. ತನ್ನ ಮಗನ ಮೃತದೇಹವನ್ನು ಊಳುವುದು ಹೇಗೆಂಬ ವಿಚಾರಗಳಲ್ಲೇ ಮಗ್ನಳಾದ ಫೆಡೋಸ್ಯಾಳ ಮನಸ್ಸು ಥಟ್ಟನೆ ನಿಶ್ಚಯದ ದೃಢತೆಯನ್ನು ಹೊಂದಿತು. ತನ್ನ ಮುದ್ದು ವಾಸ್ಯಾನು ಸತ್ತು ಎಷ್ಟೋ ದಿನಗಳಾಗಿದ್ದುವು. ಪ್ರಾಣ ಹೋಗುವ ಮೊದಲೇ ಆ ಹೊಲಸು ಜರ್ಮನರು ಅವನ ಮೇಲೆ ಕೈ ಮಾಡಿ ಮೈಯಲ್ಲಿದ್ದುದನ್ನೆಲ್ಲ ಕಸಗೊಂಡು ಚಳಿಯಲ್ಲಿ ಸಾಯಲು ಬಿಟ್ಟಿದ್ದರು. ಗ್ರಾಮದ ಪ್ರಥಮ ಗಾಯಕನೆಂದು ಹೆಸರಾಂತ ಅವನ ಸ್ವರವನ್ನು ಯಾರೂ ಇನ್ನು ಕೇಳುವ ಹಾಗಿರಲಿಲ್ಲ. ಕಂಡವರನ್ನು ಆನಂದಿಸುವ ಅವನ ನಗುಮೊಗವನ್ನು ಯಾರೂ ಇನ್ನು ಮುಂದೆ ಕಾಣುವಂತಿರಲಿಲ್ಲ. ನೀಚ ಜರ್ಮನರು ಅವನ ದೇಹಕ್ಕೆ ಬೇಕಾದ್ದನ್ನು ಮಾಡಲಿ.

ಆದರೆ ಜನರ ಹೃದಯಗಳಿಂದ ಅವನ ಹೆಸರನ್ನು ಅಳಿಸುವುದು ಆ ನರಾಧಮನಿಗೆ ಎಂದಿಗೂ ಸಾಧ್ಯವಿರಲಿಲ್ಲ ತನ್ನ ಮಧುರ ಗಾನಗಳಿಂದ ತಮ್ಮನ್ನು ಆನಂದಿಸುತ್ತಿದ್ದ ವಾಸ್ಯಾನನ್ನು ಜನತೆ ಎಂದಾದರೂ ಮರೆಯುವುದೆ? ತನ್ನ ಊರಿಗಾಗಿ, ನಾಡಿಗಾಗಿ, ಮಂದಿಯ ಸ್ವಾತಂತ್ರ್ಯ ರಕ್ಷಣೆಗಾಗಿ ಮಡಿದ ವಾಸ್ಯಾನು ಜನರ ನೆನಪಿನಲ್ಲಿ ಸದಾ ಉಳಿಯುವನು ಸತ್ತನಂತರವೂ ಜರ್ಮನರು ಅವನ ದೇಹಕ್ಕೆ ಮಾಡಿದ ಅಪರಾಧಕ್ಕಾಗಿ ನಾಡಿನ ಜನರು ಎಷ್ಟು ಮಾತ್ರಕ್ಕೂ ಜರ್ಮನರನ್ನು ಕ್ಷಮಿಸಲಿಕ್ಕಿಲ್ಲ ತನ್ನ ಮಾತೃಹೃದಯದ ಬೇಗುದಿಯಲ್ಲಿ ನಾಡಜನರೆಲ್ಲರೂ ಭಾಗಿಗಳಾಗುವರು ಭೂಮಿಗೆ ಬಿದ್ದ ಅವನ ರಕ್ತದ ಪ್ರತಿ ಒಂದು ಕಣಕ್ಕೂ ಶವಸಂಸ್ಕಾರವಿಲ್ಲದೆ ಅವನು ಮಲಗಿದ ಪ್ರತಿ ಒಂದು ಕಣಕ್ಕೂ ಅವನ ದೇಹಕ್ಕೆ ತಾಗಿದ ಜರ್ಮನ ಬೂಟಿನ ಪ್ರತಿ ಒಂದು ತುಳಿತಕ್ಕೂ ಯೋಗ್ಯ ಪ್ರತೀಕಾರ, ಇಮ್ಮಡಿಯಾಗಿ, ನಾಲ್ಮಡಿಯಾಗಿ, ನೂರ್ಮಡಿಯಾಗಿ, ರಶ್ಯನ ಜನತೆ ಮಾಡದಿರಲಾರದು ಇನ್ನು ಬೇಕಾದರೆ ಪುಸ್ಯಾ ತನ್ನ ಪ್ರಣಯಾಗಾರನಿಗೆ ಹೇಳಲಿ ಓರೆಗಣ್ಣಿನಿಂದ ತನ್ನನ್ನು ಬೇಕಾದಷ್ಟು ನೋಡಲಿ ಫೆಡೋಸ್ಯಾ ಈಗ ಹೆದರುವದಿಲ್ಲ. ಸಣ್ಣಮೋರೆ ಮಾಡಿ ತನ್ನ ಮಗನ ದೇಹವನ್ನೊಂದು ಉಳಿಸೆಂದು ಕಾಲಿಗೆ ಬಿದ್ದು ಕಣ್ಣೀರು ಸುರಿಸುವುದಿಲ್ಲ

ಫೆಡೊಸ್ಯಾಳ ನೈಯಲ್ಲಿ ನವೋತ್ಸಾಹದ ಸಂಚಾರವಾದಂತಾಯಿತು. ಹೊರಗಡೆ ಪಹರೆ ಮಾಡುತ್ತಿದ್ದ ಸಿಪಾಯಿಯು ಕವಾಯತಿನ ಸಮ ಹೆಜ್ಜೆ ಹಾಕಿ ಅತ್ತಿಂದಿತ್ತ ಇತ್ತಿಂದತ್ತ ನಡೆಯುತ್ತಿದ್ದನು ಅವನ ಕಾಲ ಸಪ್ಪಳ ಕೇಳಿ ಫೆಡೋಸ್ಯಾ ನಕ್ಕಳು ಪಹರೆ ಮಾಡ, ಸಿಪಾಯಿ. ಚೆನ್ನಾಗಿ ಪಹರೆ ಮಾಡು ಇಟ್ಟುಕೊಂಡವಳ ಜೊತೆಯಲ್ಲಿ ಮಲಗಿರುವ ನಿನ್ನ ಆಫೀಸರನನ್ನು ಸರಿಯಾಗಿ ರಕ್ಷಣೆ ಮಾಡು . ,ಇನ್ನು ಹತ್ತು ಬಾರಿ ಹೆಜ್ಜೆ ಸಪ್ಪಳ ಮಾಡಿದರೂ ಅವನನ್ನು ರಕ್ಷಿಸಲು ಸಾಧ್ಯವಾಗದ ದಿನ ಬೇಗನೇ ಬರುವದು. ಕಾಲಿಗೆ ಬೂಟನ್ನು ಸಿಕ್ಕಿಸಲು ಕೂಡಾ ಸಮಯವಿಲ್ಲದೆ ಬರಿ ಕಾಲಿಂದಲೇ ಈ ಹಿಮ ಬಿದ್ದ ಭೂಮಿಯಲ್ಲಿ ನಿನ್ನ ಆಫೀಸರನು ಪಲಾಯನಗೈಯಬೇಕಾಗುವುದು, ಅಂದು ನಿನ್ನ ಆಫೀಸರನ ಆಕೆಯು ಫೆಡೋಸ್ಯಾಳೇ ಪುಣ್ಯವತಿಯೆಂದು

ಹೇಳುವ ರಾತ್ರಿ ಬಂದೇ ಬರುವದು. ಫಾಶಿ ಖಂಬದ ಮೇಲೆ ಒಂದು ತಿಂಗಳಿಂದ ತೂಗಾಡುತ್ತಿರುವ ಲೆವೊನ್ಯ್ಯಾನನಿಗಿಂತ ಪುಸ್ಯಾಳ ಸ್ಥಿತಿಯು ಭಯಂಕರವಾಗುವದು.

ಒಂದು ವಿಚಾರ ಮಾತ್ರ ಅವಳನ್ನು ಕಾಡ ಹತ್ತಿತು. ತಾನು ತನ್ನ ಮಗನ ದೇಹವಿದ್ದೆಡೆಗೆ ಹೋಗುವದನ್ನು ಪುಸ್ಯಾಳಿಗೆ ತಿಳಿಸಿದವರ್ಯಾರು? ತಮ್ಮೊಳಗೇನೇ ಒಬ್ಬ ವೈರಿ ಇದ್ದಿರಬೇಕು. ಒಲೆನಾಳು ಸದ್ದಿಲ್ಲದೆ ಬಂದಿದ್ದಳು. ಬಂದವಳು ಮನೆಯ ಹೊರಗೆ ಕಾಲಿಡಲಿಲ್ಲ. ಆದರೂ ಎರಡೇ ದಿವಸಗಳಲ್ಲಿ ಅವಳನ್ನು ಹೊರಗೆಳೆದುಕೊಂಡು ಹೋದರು. ಒಲೆನಾಳು ಊರಿಗೆ ಮರಳಿದ್ದು ಅರುಹಿದವರ್ಯಾರು? ಯಾರಿಗೂ ತಿಳಿಯದಂತೆ ಎಲ್ಲವನ್ನೂ ತಿಳಿದು ವೈರಿಗೆ ತಿಳಿಸುವ ಪಂಚಮದಳ ಇಲ್ಲೂ ಇದೆಯಂತಾಯಿತು. ಯಾರಾಗಿರಬಹುದು ದು, ಈ ಸ್ವಜನ ದ್ರೋಹಿ? ಬಹಳ ವಿಚಾರ ಮಾಡಿದಳು. ಯಾರ ವಿಷಯದಲ್ಲೂ ಸಂಶಯ ಕೂಡಾ ಬರಲಿಲ್ಲ. ಸ್ವಜನರೊಳಗೆ ಅಡಗಿ ಕೂತಿದ್ದ ಈ ವಿಷಸರ್ಪವನ್ನು ಹುಡುಕಿ ಹೊರಗೆಡಹುವದು ಅತ್ಯಂತ ಜಟಿಲ ಪ್ರಶ್ನೆಯಾಗಿತ್ತು.

ತುಸು ದೂರದಲ್ಲಿ ದಾರಿಯ ಕಡೆಯಿಂದ ಮನುಷ್ಯರ ಸ್ವರ ಕೇಳಿಸಿತು. ಮಾತುಗಳ ಜೊತೆಯಲ್ಲಿ ಅಳುವ ಆರ್ತ ಸ್ವರವೂ ಕೇಳಿಸುತ್ತಿತ್ತು. ಫೆಡೋಸ್ಯಾ ಆ ಕಡೆ ನೋಡಿದಳು. ಶುಭ್ರವಾದ ಬೆಳದಿಂಗಳಲ್ಲಿ ಒಬ್ಬ ಬತ್ತಲೆಯಾದ ಸ್ತ್ರೀಯು ಓಡುತ್ತಿದ್ದಳು. ಮುಂದಕ್ಕೆ ಬಾಗಿ ಕಾಲುಗಳನ್ನು ಬಹಳ ಪ್ರಯಾಸದಿಂದ ಎತ್ತಿ ಸಣ್ಣ ಸಣ್ಣ ಹೆಜ್ಜೆಗಳನ್ನಿಡುತ್ತಾ ಅತೀ ಕಷ್ಟದಿಂದ ಅವಳು ಮುಂದೆ ಸಾಗಿದ್ದಳು. ಅವಳ ಹಿಂದೆ ಒಬ್ಬ ಸಿಪಾಯಿ. ಅವಳು ಎಲ್ಲ್ಯಾದರೂ ನಿಧಾನಿಸಿದರೆ, ತನ್ನ ಕೋವಿಗೆ ಸಿಕ್ಕಿಸಿದ ಬೆಯೊನೆಟಿನಿಂದ ಅವಳ ಬೆನ್ನಿಗೆ ಕುತ್ತುತ್ತಿದ್ದನು. ಅವಳು ಐವತ್ತು ಗಜ ಓಡಿದ ಮೇಲೆ ಅವಳನ್ನು ಹಿಂತಿರುಗಿ ಪುನಃ ಅಷ್ಟೇ ಉದ್ದಕ್ಕೆ ಓಡಿಸುತ್ತಿದ್ದನು. ಅವಳ ನೋವು ಸಂಕಷ್ಟಗಳನ್ನು ನೋಡಿ ಆ ನರಾಧಮನೂ ಅವನ ಸಂಗಾತಿಗಳಾದ ಬೇರೆ ಇಬ್ಬರು ಸಿಪಾಯಿಗಳೂ ಗಹಗಹಿಸಿ ನಗುತ್ತಿದ್ದರು.

ಈ ಹೆಂಗಸು ಯಾರೆಂದು ಫೆಡೋಸ್ಯಾ ನೋಡಿದಳು. ಓಲೇನಾ! ಜರ್ಮನರ ಚಿತ್ರ ಹಿಂಸೆ ಇದೊಂದು ಮಾದರಿ. ಅವಳ ಮೈ ಜುಮ್ಮೆಂದಿತು. ದೀರ್ಘ

ಕಾಲದ ಹಿಂದೆ, ಎಳೆಯರಿರುವಾಗ ಅವಳೂ ತಾನೂ ಜಮೀನುದಾರನ ಜೀತದಾಳುಗಳಾಗಿ ದುಡಿದ ದಿನಗಳ ನೆನಪು ಫೆಡೋಸ್ಯಾಳಿಗೆ ಈಗ ಬಂತು. ಜಮೀನುದಾರನ ಕಾರಭಾರಿಯ ಚಾಟಿಯ ಜಗಿತಕ್ಕೂ ಅದಕ್ಕಿಂತಲೂ ಹೆಚ್ಚಾಗಿ ಅವನ ಕಾಮುಕ ವರ್ತನೆಗೂ ಅಂಜಿ ಅಂಜಿ ದೀನ ದರಿದ್ರ ಹುಡುಗಿಯರ ದುರವಸ್ಥೆಗಾಗಿ ಕಣ್ಣೀರಿಡುತ್ತಾ ಇಬ್ಬರೂ ದಿನಗಳನ್ನು ಕಳೆದಿದ್ದರು.

ಕ್ರಾಂತಿಯ ಅನಂತರ ಅವರಿಬ್ಬರೂ ಸಾಂಘಿಕ ಕೃಷಿ ಕ್ಷೇತ್ರದಲ್ಲಿ ದುಡಿಯುತ್ತಿದ್ದರು. ತಮ್ಮ ದುಡಿಮೆಯ ಫಲವನ್ನು ತಾವೇ ಉಣ್ಣುವ ಯಾವದೇ ತರದ ಬಲಾತ್ಕಾರ ದಬ್ಬಾಳಿಕೆ ಇಲ್ಲದ, ಸುಖ ಜೀವನದ ದಿನಗಳವು. ತಾವು ಬೆಳೆಸಿ ತಾವೇ ತಿನ್ನಲಿರುವ ಗೋದಿಯ ಸುವರ್ಣ ವರ್ಣದ ತೆನೆಗಳನ್ನು ಕೊಯ್ಯುವಾಗ ಹಾಗೂ ತಾವು ಮೆಯಿಸಿದ ದನಗಳ ಹಾಲಿನ ಕೆನೆಯನ್ನು ತಾವೇ ತಿನ್ನುವಾಗ ಪಟ್ಟ ಆನಂದ ಉತ್ಸಾಹಗಳೆಷ್ಟು!

ಆದರೆ ಈ ರಾತ್ರಿ ಅದೇ ಒಲೆನಾ ಮಗುವನ್ನು ಹಡೆದ ದಿನವೇ ಸಿಪಾಯಿಗಳ ಬೆಯೊನೆಟದಿಂದಬೆನ್ನಿಗೆ ಕುತ್ತಲ್ಪಟ್ಟು ಅಸಾಧ್ಯ ಚಳಿಯಲ್ಲಿ ಮೈಮೇಲೆ ಅರಿವೆಯ ಒಂದು ಚಿಂದಿಯೂ ಇಲ್ಲದೆ ಹಿಂದ ಮುಂದೆ ಐವತ್ತುಗಜ ಜರ್ಮನ ಸಿಪಾಯಿಗಳ ಹೇಯ ಪರಿಹಾಸ್ಯವನ್ನು ಕೇಳುತ್ತಾ ಓಡುವದನ್ನು ನೋಡಿ ಫೆಡೋಸ್ಯಾಳ ನೆತ್ತರು ಬಿಸಿಯಾಗಿ ಕುದಿಯ ಹತ್ತಿತು ಹಾಗೆ ಓಡುತ್ತಿರುವುದು ಓಲೇನಾಳಲ್ಲ, ತಾನು, ಫೆಡೋಸ್ಯಾ ತಾನು ಮಾತ್ರವೇ ಅಲ್ಲ, ತಮ್ಮ ಊರಿನ ಜನತೆ ಅಲ್ಲಿ ಹಿಮದ ಮೇಲೆ ಬಿದ್ದದ್ದು ಒಲೇನಾಳ ಗಾಯಗಳ ನೆತ್ತರಲ್ಲ. ಜರ್ಮನ ಆಕ್ರಮಣದ ನೊಗ ಹಾಗೂ ಅವರ ಬೂಟಿನ ತುಳಿತಕ್ಕೆ ಬಲಿಯಾದ ರಶ್ಯನ್ ಜನತೆಯ ಹೃದಯದ ರಕ್ತ

ಜನತೆಯಲ್ಲಿ ಹೆದರಿಕೆ ಹುಟ್ಟಿಸಲು ಈ ನೀಚ ಜರ್ಮನರು ತಮ್ಮ ಕ್ರೂರತನದ ಪ್ರದರ್ಶನವನ್ನು ಮಾಡುತ್ತಿದ್ದರು ಆದರೆ, ಅದರ ಪರಿಣಾಮ ಅವರು ಎಣಿಸಿದ್ದಕ್ಕಿಂತ ಬೇರೆಯೇ ಆಗುತ್ತಲಿತ್ತು ನಾಡಿನಲ್ಲಿ ಕೆಲವರು ಸೋವಿಯೆಟ ಆಡಳಿತದ ಕುರಿತು ಅತೃಪ್ತಿಪಟ್ಟಿದ್ದರು. ಆದರೆ ಜರ್ಮನರ ಒಂದು ದಿವಸದ ಅನುಭವದಿಂದ ಇಂತಹ ಅಸಮಾಧಾನದಿಂದ ಕೂಡ ರಶ್ಯದ ರಾಜ್ಯ ಪದ್ಧತಿಯ ಸುಲಕ್ಷಣಗಳು ಕಾಣಹತ್ತಿದುವು. ಅವರ ಪಾಶವೀ ಕೃತ್ಯ

ಗಳಿಂದ ಜರ್ಮನರು ಹೊದಲ್ಲೆಲ್ಲ ಅವರ ವಿಷಯದಲ್ಲಿ ಬಲವಾದ ತಿರಸ್ಕಾರ, ದ್ವೇಷಗಳು ಎಲ್ಲಾ ತರದ ಜನರಲ್ಲಿಯೂ ಹರಡಿದ್ದುವು ಇದೊಂದು ಯೋಗ್ಯ ಪರಿಣಾಮವೇ ಆಗಿತ್ತು.

ಮನೆಯ ಗೋಡೆಗಳ ಹಿಂದಿನಿಂದ ಊರಿನ ಜನರು ಒಲೆನಾಳಿಗಾಗು ತ್ತಿದ್ದ ಚಿತ್ರ ಹಿಂಸೆಯನ್ನು ನೋಡುತ್ತಿದ್ದರು ನೋಡುತ್ತಿದ್ದರಷ್ಟೇ ಅಲ್ಲ ಅವಳಿಗಾಗು ವ ಯಾತನೆಯನ್ನು ತಾವೂ ಮನಸ್ಸಿನಲ್ಲಿ ಅನುಭವಿಸ ತ್ತಿದ್ದರು. ಈ ದೃಶ್ಯ, ಅನುಭವಗಳ ಪ್ರತ್ಯಕ್ಷ ಫಲವಾಗಿ ಅವರ ಹೃದಯಾಂತರಾಳದಲ್ಲಿ ದೇಶಪ್ರೇಮ ಹಾಗೂ ವೈರ ದ್ವೇಶದ ಸಮ್ಮಿಳಿತ ಜ್ವಾಲೆಯು ಹೊಗೆಯೇಳ ತೊಡಗಿತ್ತು. ಅದರ ಬೆಂಕಿಯಲ್ಲಿ ಇಂದಲ್ಲ ನಾಳೆ ಈ ಜರ್ಮನರು ಸುಟ್ಟು ಬೂದಿಯಾಗುವರೆಂಬುದರಲ್ಲಿ ತಿಲಮಾತ್ರವೂ ಸಂದೇಹವಿರಲಿಲ್ಲ.

ತಮ್ಮ ಪಾಪಕೃತ್ಯಗಳಿಂದ ತಾವೇ ತಂದುಕೊಂಡಿರುವ ಮುಂದಿನ ಭಯಾನಕ ಭವಿತವ್ಯವನ್ನರಿಯದ ಕರ್ಟವರ್ನರಂತಹ ಆಫೀಸರರು ಜನತೆಯ ನರಕಯಾತನೆಯ ಮೇಲೆ ತಮ್ಮ ಆನಂದ-ಮಹಲನ್ನು ರಚಿಸಿದ್ದರು ದೊರೆ ತಿದ್ದ ಅಲ್ಪ ಅಧಿಕಾರದಿಂದ ಮದಾಂಧರಾದ ಸೈನಿಕರು ಕೈಯಲ್ಲಿ ಸಿಕ್ಕಿದ್ದ ಒಲೆನಾಳಂತಹ ಅಸಹಾಯ ವ್ಯಕ್ತಿಗಳನ್ನು ಚಿತ್ರಹಿಂಸೆಯ ಪರಮಾವಧಿಗೆ ಗುರಿ ಮಾಡಿದ್ದರು. ಅವರ ಪೈಶಾಚಿಕ ಪೀಡೆಯನ್ನು ಪಿಟ್ಟೆನ್ನದೆ ಕೇವಲ ಮನೋಧಾರ್ಢ್ಯದಿಂದ ಒಲೇನಾಳು ಕೆಲವು ತಾಸು ಸಹಿಸಿದ್ದಳು. ಕೊನೆಕೊನೆಗೆ ಅವಳ ದೇಹದ ಬಲವು ಕುಂದಿತು ಬಿದ್ದವಳಿಗೆ ಪುನಃ ಏಳುವುದಾಗಲಿಲ್ಲ.

"ಏನು, ಹುಡುಗ ಪ್ರಣಯಿಯೊಟ್ಟಿಗೆ ಆಟವಾಡುವೆಯೆಂದು ತಿಳಿ ದೆಯೋ ?" ಎಂಬಿತ್ಯಾದಿ ಅಶ್ಲೀಲ ಮಾತುಗಳನ್ನು ಹಿಂದಿನಿಂದ ಅಟ್ಟುತ್ತಿದ್ದ ಸಿಪಾಯಿಯು ಹೇಳ ತೊಡಗಿದನು.

"ಅವಳ ಹೊಟ್ಟೆಗೆ ಒಂದು ಸಾರೆ ಕುತ್ತು. ಆಗ ಗುಟ್ಟನ್ನೆಲ್ಲಾ ಕಾರಿ ಬಿಡುವಳು" ಎಂತ ಇನ್ನೊಬ್ಬನಂದನು

"ನಿಜ, ಆಫೀಸರನು ಬರುವ ಮೊದಲೆ ಎಲ್ಲವನ್ನೂ ಹೇಳಿ ಬಿಡುವಳು" ಎಂದು ಹೇಳ ನಗುತ್ತಾ ಮೊದಲನೆ ಯ ಸಿಪಾಯಿಯು ಹೊಟ್ಟೆಗೆ ಬೆಯೊನೆಟಿ ನಿಂದ ಕುತ್ತಿದನು. ಎಲ್ಲರೂ ಗಹಗಹಿಸಿ ನಕ್ಕು ಏನೇನೊ ಹೊಲಸು ಮಾತು

ಗಳನ್ನಾಡಹತ್ತಿದರು. ಅವರ ಭಾಷೆ ಒಲೇನಾಳಿಗೆ ತಿಳಿಯದ್ದಿದುದ್ದು ಒಳಿತೇ ಆಗಿತ್ತು. ಯಾಕದರೆ ಅವರ ಅಶ್ಲೀಲ ಮಾತುಗಳ ಅಸಹ್ಯತೆಯು ನಿರ್ಜೀವ ಪಾಷಾಣವನ್ನು ಕೂಡ ನಾಚಿಸುವಂತಹದಿತ್ತು

ಹೆಚ್ಚು ರಾತ್ರಿಯಾದಂತೆ ಶೀತಬಾಧೆಯೂ ಜಾಸ್ತಿಯಾಗಹತ್ತಿತು. ಅವಳ ಬೆನ್ನು ಹತ್ತಿದ ಸಿಪಾಯಿಗಳಿಗೆ ಅವಳ ಮೇಲೀನ ಸಿಟ್ಟು ಇನ್ನಷ್ಟು ಹೆಚ್ಚಾಯಿತು. ಯಾಕಂದರೆ, ಅವಳಲ್ಲದಿದ್ದರೆ ಅವರು ಈ ರೀತಿ ಚಳಿಯಲ್ಲಿ ಹೊರಗೆ ಬೀಳಬೇಕಾಗಿರಲಿಲ್ಲ. ಹೊಲಸು ಬೈಗಳ ಸುರಿಮಳೆಯೂ ಬೆಯೊನೆಟ್ಟಿನ ಚುಚ್ಚುವಿಕೆಯೂ ಹೆಚ್ಚೆಚ್ಚಾಗುತ್ತಾ ಹೋಯಿತು ಆದರೆ ಪರಿಣಾಮ ಮೊದಲಿನದೇ. ಒಲೇನಾಳ ನಡಿಗೆ ನಿದಾನವಾಯಿತು. ನಡೆಯಲಾರದೆ ಬೀಳುವುದು ಬಹಳವಾಯಿತು ಬಿದ್ದಲ್ಲಿಂದ ಏಳುವುದು ವಿಳಂಬವಾಯಿತು. ಆಷ್ಟಾದರೂ ಅವಳ ಬಾಯಿಂದ ಒಂದಕ್ಷರವೂ ಹೊರಡಲಿಲ್ಲ, ಕಣ್ಣಿನಿಂದ ಒಂದು ಹನಿಯೂ ಉದುರಲಿಲ್ಲ

ಏನೋ ಸರಸರ ಶಬ್ದವಾಯಿತ ಈ ವರೆಗೆ ತಮ್ಮ ಅಮಂಗಲ ಮಾತುಗಳಲ್ಲದೆ ಬೇರೆ ಯಾವ ಧ್ವನಿಯೂ ಕೇಳಿಸದ ನಿಶಬ್ದ ವಾತಾವರಣದಲ್ಲಿ ಈ ಸಣ್ಣ ಸದ್ದು ಕೂಡಾ ಅವರಲ್ಲಿ ಅಂಜಿಕೆಯನ್ನು ಹುಟ್ಟಿಸಿತು. ಯಾಕಂದರೆ ಗ್ಯಾರಿಲ್ಲಾಗಳು ನಡರಾತ್ರಿಯಲ್ಲೇ ಅಕಸ್ಮಾತ್ತಾಗಿ ಜರ್ಮನ್ ಸೈನಿಕರ ಮೇಲೆ ಬಿದ್ದು ಅವರನ್ನು ಯಮಸದನಕ್ಕೆ ಅಟ್ಟುತ್ತಿದ್ದರು ಮಧ್ಯ ರಾತ್ರಿಯಾದೊಡನೆ ಜರ್ಮನ್ ಸೈನಿಕರಿಗೆ ಚಳಿಯ ನಡುಕಕ್ಕಿಂತ ಅಂಜಿಕೆಯ ನಡುಕವೇ ಅಧಿಕವಾಗುತ್ತಿತ್ತು. ಹೊರಗೆ ಹೋಗುವ ಧೈರ್ಯ ಯಾರಿಗೂ ಇರುತ್ತಿದ್ದಿಲ್ಲ. ಈ ಸರ ಸರ ಶಬ್ದ ಕೇಳಿ ಅವರ ಮನಃಚಕ್ಷುವಿನ ಮುಂದೆ ಗ್ಯಾರಿಲ್ಲಾ ತಂಡವೇ ಕಾಣಿಸಿತು. ಜೀವದಾಸೆಯು ಆಫೀಸರನ ಆಜ್ಞೆಯನ್ನೂ ಹಿಂದೂಡಿತು. ಒಲೇನಾಳನ್ನು ತಮ್ಮ ಆಫೀಸಿನ ಬಳಿ ಇದ್ದ ಗುಡಿಸಲಿಗೆ ಕೊಂಡುಹೋಗಿ ಬಿಟ್ಟು ತಾವು ಪಲಾಯನ ಸೂತ್ರ ಕೈಕೊಂಡರು

ಒಲೇನಾಳ ಪ್ರತ್ಯಕ್ಷ ಚಿತ್ರಹಿಂಸೆ ಕೊನೆಗಂಡಂತೆ ತೋರಿತು. ಆದರೆ ಮಾನವ ಸಹನೆಯನ್ನು ಮೀರಿದ ಅವಳ ನರಕಯಾತನೆ ಮಾತ್ರ ಕೊನೆಗಾಣಲಿಲ್ಲ. ಬೆಯೊನೆಟ್ಟನಿಂದ ಕುತ್ತಿದ ಗಾಯಗಳು ಮೆಣಸು ಅರೆದಂತೆ ಉರಿಯು

ತೊಡಗಿದುವು. ತೀಕ್ಷ್ಣವಾದ ಹಿಮವು ಅವಳ ಬತ್ತಲೆ ಮೈಯನ್ನೆಲ್ಲಾ ಚುಚ್ಚುತ್ತಿತ್ತು ಕಪಾಲಗಳು ವೇದನೆಯಿಂದ ನಡುಗುತ್ತಿದ್ದುವು. ಹೃದಯದಲ್ಲಿ ಖಡ್ಗದಿಂದ ಇರಿದಂತೆ ನೋಯುತ್ತಿತ್ತು ಬಾಣಂತಿತನದ ನೋವು ಹೊಟ್ಟೆಯನ್ನು ಕಾಡುತ್ತಿತ್ತು ಚಳಿಯ ಕಾಟವನ್ನು ಕಡಿಮೆ ಮಾಡಲು ಮೈಯನ್ನು ಬಲವಾಗಿ ಉಜ್ಜಲು ಪ್ರಯತ್ನಿಸಿದಳು. ಆದರೆ ಗಟ್ಟಿಯಾಗಿ ಉಜ್ಜುವಷ್ಟು ತ್ರಾಣವಿರಲಿಲ್ಲ ನಿಲ್ಲಲಾರದೆ ಮಲಗಿದಲ್ಲೇ ಅತ್ತಿತ್ತ ಹರಿದಾಡುತ್ತಾ ಒಂದು ಅರಿವೆಯ ತುಂಡಾಗಲಿ ಹುಲ್ಲಿನ ನಾಲ್ಕು ಕಡ್ಡಿಗಳಾಗಲಿ ಸಿಗುವುವೊ ನೋಡಿದಳು ಆದರೆ ಆ ಗುಡಿಸಲಿನಲ್ಲಿ ತಣ್ಣಗಿನ ಮಣ್ಣಿನ ನೆಲವಲ್ಲದೆ ಬೇರೇನೂ ಇರಲಿಲ್ಲ. ನಿದ್ದೆ ಮಾಡಲು ಪ್ರಯತ್ನಿಸಿದಳು, ಆದರೆ ಇಂತಹ ಸ್ಥಿತಿಯಲ್ಲಿ ನಿದ್ದೆ ಬರುವುದೆಂತು ?

ಥಕ್ಕನೆ ಒಂದು ಸಪ್ಪಳ ಕೇಳಿಸಿತು. ಒಲೀನಾ ಕಿವಿಗೊಟ್ಟು ಕೇಳಿದಳು. ಕಾಲಿನ ಸಪ್ಪಳ, ಆದರೆ ಪಹರೆಯವನ ಭಾರವಾದ ಹೆಜ್ಜೆಯ ಸಪ್ಪಳವಲ್ಲ. ಯಾರೊ ಹಿಮದ ಮೇಲೆ ಹಗುರವಾಗಿ ಹೆಜ್ಜೆಯನ್ನಿಡುತ್ತಿದ್ದರು. ಒಂದೆರಡು ಹೆಜ್ಜೆ ನಡೆದ ಸಪ್ಪಳ, ಆಮೇಲೆ ಮೌನ, ಪುನಃ ಹಗುರಾದ ಸಪ್ಪಳ, ಪುನಃ ಮೌನ. ಜಾಗರೂಕತೆಯಿಂದ, ಯಾರಿಗೂ ತಿಳಿಯದಂತೆ ಬರುತ್ತಿದ್ದಿರಬೇಕು. ಅದು ಯಾರಾಗಿರಬಹುದು ? ಅಥವಾ ಯಾರೊ ಬರುತ್ತಾರೆಂಬ ಭ್ರಮೆಯಾಯಿತೆ ತನಗೆ ! ಛೆ, ಭ್ರಮೆಯಲ್ಲ ಸಪ್ಪಳವು ಸಣ್ಣದಾದರೂ ಕಾಲ ಹೆಜ್ಜೆಯದೆಂಬುದರಲ್ಲಿ ಏನೂ ಅನುಮಾನವಿರಲಿಲ್ಲ ಒಲೀನಾಳು ಕಿವಿಗೊಟ್ಟು ಕೇಳಿದಳು. ಹೆಜ್ಜೆಗಳು ನಿದಾನವಾಗುತ್ತಾ ಬಂದು ಗುಡಿಸಲಿನ ಹಿಂದುಗಡೆ ಇದ್ದ ಗೋಡೆಯ ಬಳಿ ನಿಂತುಹೋದುವು.

ಒಲೀನಾಳಿಗೆ ಆಶ್ಚರ್ಯವಾಯಿತು. ಯಾಕೆಂದರೆ ಕತ್ತಲಾದ ಬಳಿಕ ಹೊರಗೆ ಬಂದವರು ಗುಂಡಿನೇಟಿಗೆ ಗುರಿಯಾಗುವರೆಂದು ಜರ್ಮನರು ಜಾಹೀರು ಮಾಡಿದ್ದರು. ಈ ಸುಗ್ರೀವಾಜ್ಞೆಯನ್ನು ಮೀರಿ ಹೊರಗೆ ಬಂದವರ್‍ಯಾರು, ಶತ್ರುವೊ ಮಿತ್ರನೋ ಏನೊ ಗೊತ್ತಾಗಲಿಲ್ಲ. ಒಲೀನಾ ಮಲಗಿದವಳು ಬಹಳ ಪ್ರಯಾಸದಿಂದ ಎದ್ದು ಕುಳಿತಳು. ಗೋಡೆಯ ಬಿರುಕಿನಿಂದ ಒಂದು ವ್ಯಕ್ತಿ ಒಲೀನಾಳ ಕಡೆಗೆ ನೋಡುತ್ತಿತ್ತು.

"ಮಾಮಿ" ಮಗುವಿನ ಸಣ್ಣ ಸ್ವರವೊಂದು ಕೇಳಿಸಿತು ಒಲೇನಾ ಉತ್ತರ ಕೊಡಲು ಪ್ರಯತ್ನಿಸಿದಳು ಆದರೆ ಧ್ವನಿ ತೆಗೆಯುವಷ್ಟು ಕೂಡಾ ಶಕ್ತಿ ಇರಲಿಲ್ಲ ಬರೀ ಹೂತ್ಕಾರವನ್ನಷ್ಟೆ ಮಾಡಿದಳು

"ಮಾಮಿ ಒಲೇನಾ !"

ನೆರೆಕರೆಯ ಮಗುವೊಂದು ಅವಳನ್ನು ಕರೆಯುತ್ತಿತ್ತು ಆದರೆ ಹೂತ್ಕಾರವಲ್ಲದೆ ಬೇರೆ ಉತ್ತರ ಕೊಡಲು ಅವಳಿಂದಾಗಲಿಲ್ಲ

" ಮಾಮಿ ಒಲೇನಾ, ನಿನಗಾಗಿ ರೊಟ್ಟಿಯನ್ನು ತಂದಿರುವೆ"

ರೊಟ್ಟಿ ! ಎರಡು ದಿನಗಳಿಂದ ಅವಳು ಅನ್ನ, ನೀರನ್ನು ಮುಟ್ಟಿರಲಿಲ್ಲ. ಕರ್ಟನು ವಿಚಾರಣೆ ಮಾಡುವಾಗ ಹಾಗೂ ಸಿಪಾಯಿಗಳಿಂದ ಓಡಿಸಲ್ಪಡುವಾಗ ಅವಳಿಗೆ ಹಸಿವೆಗಿಂತ ಬಾಯಾರಿಕೆಯ ಬಾಧೆಯು ಹೆಚ್ಚಾಗಿತ್ತು ಸಿಪಾಯಿಗಳು ಓಡ್ಯಾಡಿಸುವಾಗ, ಅವಳು ತುಸು ಹಿಮವನ್ನು ಹುಕ್ಕಿ ಬಾಯಲ್ಲಿ ಹಾಕಿಕೊಂಡಿದ್ದಳು. ಅದರಿಂದ ಕ್ಷುಧಾಶಾಂತಿಯಾಗಿ ಸ್ವಲ್ಪ ಸಹನಶಕ್ತಿ ಬಂದಿತ್ತು. ಇದನ್ನು ನೋಡಿದ ಸಿಪಾಯಿಗಳು ಅವೇಲೆ ಹಿಮವನ್ನುಹೆಕ್ಕಲು ಕೂಡಾ ಬಿಡಲಿಲ್ಲ. ಆದರೆ ನಡೆಯಲಾರದೆ ಎಡವಿಬಿದ್ದಲ್ಲಿ ನಾಲಗೆಯಿಂದ ಹಿಮವನ್ನು ನೆಕ್ಕಿ ನೀರಡಿಕೆಯನ್ನು ಆರಿಸಿಕೊಂಡಿದ್ದಳು ಆದರೆ ಗುಡಿಸಲಿನಲ್ಲಿ ಮಲಗಿದ ಮೇಲೆ ಅವಳಿಗೆ ಹಸಿವು ತೀಕ್ಷ್ಣವಾಗಿ ಹೊಟ್ಟೆಯಲ್ಲಿ ಶೂಲಿಯೆದ್ದಿತು.

ಈ ಪರಿಸ್ಥಿತಿಯಲ್ಲಿ "ರೊಟ್ಟಿ" ಈ ಶಬ್ದಗಳು ಅವಳಿಗೆ ಹೊಸ ಜೀವನವನ್ನು ಕೊಟ್ಟವು. "ನಾನು ಬರುತ್ತೇನೆ." ಎಂದು ಆ ಮಗುವಿಗೆ ಹೇಳಿ ಏಳಲಾರದಿದ್ದರೂ ಕೈಯ ಮೊಣಗಂಟನ್ನು ಊರಿ ಹರಿದಾಡುತ್ತಾ ಗೋಡೆಯ ಬಳಿ ಹೋಗಲು ತೊಡಗಿದಳು.

ಒಂದೆರಡು ಹೆಜ್ಜೆ ಮುಂದೆ ಹೋಗಿದ್ದಳೊ ಇಲ್ಲವೊ ಅಷ್ಟರಲ್ಲಿ ಫಕ್ಕನೆ ಒಂದು ಗುಂಡಿನೇಟಿನ ಶಬ್ದ, ಅದರ ಬೆನ್ನಿಗೆ ಒಂದು ಆರ್ತನಾದ ಕೇಳಿಸಿದುವು. ಒಲೇನಾಳು ಅಲ್ಲೇ ಬಿದ್ದುಬಿಟ್ಟಳು. ಆರ್ತನಾದ ಹೊರಟ ಸ್ಥಳದಲ್ಲಿ ಸೈನಿಕರ ಬೂಟಿನ ಸಪ್ಪಳವೂ ಜರ್ಮನ್ ಮಾತಿನಲ್ಲಿ ಬೈಯುವುದೂ ಕೇಳಿಬಂತು. ಒಲೇನಾಳ ದೇಹದಲ್ಲಿ ಶಕ್ತಿ ಇನ್ನೇನೂ ಉಳಿದಿರಲಿಲ್ಲ. ಈವರೆಗಿನ

ಎಲ್ಲ ಘಟನೆಗಳಿಂದ ಕುಂಠಿತವಾದ ಅವಳ ಶಕ್ತಿಯು ಈ ಆಕಸ್ಮಿಕ ಘೋರ ಘಟನೆಯಿಂದ ಪೂರ್ಣ ನಷ್ಟ ಹೊಂದಿ, ಅವಳು ಮೂರ್ಛೆ ಹೋದಳು.

ಗೋಡೆಯ ಹೊರ ಬದಿ ಇದ್ದ ಮನೆಯಿಂದ ಮೂವರು ನಡೆದುದನ್ನೆಲ್ಲಾ ನೋಡುತ್ತಿದ್ದರು ಚಿಕ್ಕ ಜೀನಾಳು ಒಂದೇ ಸವನೆ ಅಳಹತ್ತಿದಳು "ಅಮ್ಮಾ, ಮಿಶ್ಕಾ, ಅಮ್ಮಾ, ಮಿಶ್ಕಾ"

ತಾಯಿಯು ಅವಳ ಕೈಯನ್ನು ಒತ್ತಿ ಹೇಳಿದಳು "ಸುಮ್ಮಗೆ ಕೂಡು" ಜೀನಾ ಸುಮ್ಮನೆ ಕೂಡಲಿಲ್ಲ "ಅಮ್ಮಾ, ಮಿಶ್ಕಾ! ಮಿಶ್ಕಾನಿಗೆ ಏನು ಮಾಡಿದರಮ್ಮಾ?'' ಎಂಗು ಪುನಃ ಅಳಹತ್ತಿದಳು

''ಕೇಳಲಿಲ್ಲವೇ? ನಮ್ಮ ಮಿಶ್ಕಾನನ್ನುಕೊಂದುಬಿಟ್ಟರು!" ಎಂದಳು, ತಾಯಿ ಬೇಸರದ ದನಿಯಲ್ಲಿ

ಎಂಟು ವರ್ಷದ ಶಾಶಾನು ಕಿಟಕಿಯಿಂದ ಹಿಂತಿರುಗಿದನು "ಅಮ್ಮಾ, ಮಾಮಿ ಒಲೇನಾಳಿಗೆ ನಾನು ರೊಟ್ಟಿ ಕೊಂಡು ಹೋಗಿ ಕೊಡಲೇ?"

"ಬೇಡ ನೀನೆಲ್ಲೂ ಹೋಗಬೇಡ. ಬೆಳಗಿನ ವರೆಗೆ ಅವರು ಕಾಯುತ್ತಾ ಇರುವರು'' ಒಂದು ಕ್ಷಣದ ಮೇಲೆ ಅಂದಳು, "ರೊಟ್ಟಿಯೂ ಮುಗಿದಿದೆ. ಇದ್ದ ಒಂದೇ ತುಂಡನ್ನು ಮಿಶ್ಕಾ ಒಯ್ದಿದ್ದನು"

ಮಿಶ್ಕಾನು ಗುಡಿಸಲಿನ ಬಳಿ ಗೋಡೆಗೆ ತಾಗಿ ಬಿದ್ದಿದ್ದನು ಗುಂಡು ಅವನ ಬೆನ್ನಿಗೆ ಹೆಗಲ ಕೆಳಗೆ ತಗಲಿ ಮುಂದಿನಿಂದ ಹೊರಗೆ ಬಂದಿತ್ತು. ಒಮ್ಮೆ ಚೀರುವಷ್ಟರಲ್ಲೇ ಜೀವವು ಹೋಗಿರಬೇಕು ಒಬ್ಬ ಉದ್ದನ್ನ ಸಿಪಾಯಿ ಬಂದು ಅವನ ದೇಹವನ್ನು ತುಳಿದನು. ಕೈಯಿಂದ ಒಂದು ರೊಟ್ಟಿಯ ತುಂಡು ಕೆಳಗೆ ಬಿತ್ತು

''ಒಹೋ, ಅವಳಿಗೆ ರೊಟ್ಟಿ ತಂದಿದ್ದ, ಈ ಚುನ್ನಿಮರಿ" ಎಂದು ಹೇಳಿ ಆ ಎಳೇ ಮೃತ ದೇಹಕ್ಕೆ ಇನ್ನೊಮ್ಮೆ ತುಳಿದನು. ''ಮೆಲ್ಲನೆ ಎಷ್ಟು ಜಾಗರೂಕತೆಯಿಂದ ಸಾಗಿದ್ದನು; ಒಂದು ಕ್ಷಣ ತಡಮಾಡಿದ್ದರೆ ಅವನು ಅವಳಿಗೆ ರೊಟ್ಟಿ ಕೊಟ್ಟುಬಿಡುತ್ತಿದ್ದನು"

''ನಿನಗೆ ಮನುಷ್ಯನೆಂದು ಗುರುತು ಹತ್ತಿತ್ತೇನೊ?" ಇನ್ನೊಬ್ಬ ಕೇಳಿದನು.

"ಇಲ್ಲೊ, ಯಾವುದೊ ಪ್ರಾಣಿ ಎಂತ ದೂರದಿಂದ ತಿಳಿಯಿತು. ಏನೇ ಇರಲಿ ಎಂತ ಗುರಿ ಇಟ್ಟು ಹೊಡೆದೆ" ಎಂದ ಮೊದಲನೆಯವ. "ನೀನು ಒಳ್ಳೇ ಶಿಕಾರಿಯಪ್ಪ ಆಫೀಸರನು ನಾಳೆ ನಿನಗೆ ರೊಟ್ಟಿಯೊಂದಿಗೆ ಬೆಣ್ಣೆ, ಜಾಮು (jam) ಕೊಡುವನು." ಇನ್ನೊಬ್ಬನೆಂದನು. "ಅದಿರಲಿ, ಈಗ ಶವವನ್ನೇನು ಮಾಡೋಣ, ಇಲ್ಲೇ ಇರಲೇ?"

"ಇಲ್ಲೇಕೆ? ಚರಂಡಿಯಲ್ಲಿ ಒಗೆದುಬಿಡೋಣ."

ಇಬ್ಬರೂ ಕೂಡಿ ಹುಡುಗನನ್ನು ಚರಂಡಿಯಲ್ಲಿ ಒಗೆದರು.

"ಮಲಗಲಿ, ಅವನು ಈ ಚರಂಡಿಯಲ್ಲಿ. ಎಲ್ಲಿಂದ ಬಂದಿದ್ದನೊ?"

"ಅದೆಲ್ಲ ಆಫೀಸರನು ನಾಳೆ ಕಂಡುಹಿಡಿಯುವನು"

"ಅದೇನೂ ಸಾಧ್ಯವಾಗುವಂತೆ ತೋರುವುದಿಲ್ಲ ಇವರಲ್ಲಿ ಒಬ್ಬನೂ ಬಾಯಿ ಬಿಡುವಂತಿಲ್ಲ, ನೋಡು"

"ಯೋಚನೆ ಮಾಡಬೇಡ. ಆಫೀಸರನು ಎಲ್ಲರ ಬಾಯಿ ಬಿಡಿಸುತ್ತಾನೆ"

"ಬಿಡಿಸಿದರೆ ಒಳ್ಳೇದು. ಇಲ್ಲಿ ನಮ್ಮ ಸ್ಥಿತಿ ಈಗ ಭಯಂಕರವಾಗಿದೆ"

"ಭಯಂಕರ, ನಿಜ. ಒಮ್ಮೆ ಮನೆಗೆ ಹೋಗೋಣವೆನಿಸುತ್ತದೆ ನನ್ನ ವೈಕೆಲನಿಗೆ ಈಗ ಹತ್ತು ವರ್ಷ. ಎರಡು ವರ್ಷವಾಯಿತು, ಅವನ ಮೋರೆ ನೋಡಲಿಲ್ಲ." ಇನ್ನೊಬ್ಬನು ಸಹಾನುಭೂತಿಯಿಂದ ತಲೆ ಅಲ್ಲಾಡಿಸಿದನು

"ಮರಳಿ ಬಂದಾಗ ಒಂದು ಸೈಕಲ್ ಕೊಳ್ಳುವೆನೆಂದು ನಾನು ಮನೆ ಬಿಟ್ಟು ಬರುವಾಗ ಮಾತು ಕೊಟ್ಟಿದ್ದೆ. ಇಲ್ಲಿಂದ ಕಳಿಸೋಣವೆಂದರೆ, ಸಾಧ್ಯವಾದೀತೆಂದು ಏನೂ ತೋರುವುದಿಲ್ಲ."

"ಫೀಲ್ಡ್ ವೆಬೆಲ್ (ಚಿಕ್ಕ ಆಫೀಸರ)ನು ಎರಡು ಕಳಿಸಿದ್ದಾನೆ, ಊರಿಗೆ." ಇನ್ನೊಬ್ಬನೆಂದ.

"ಫೀಲ್ಡ್ ವೆಬೆಲ್..... ಅವನು ಫೀಲ್ಡ್ ವೆಬೆಲ್. ಆದರೆ ಬರೇ ಸಿಪಾಯಿಗೆ ಸೈಕಲು ಊರಿಗೆ ಕಳಿಸಲು ಬಿಡುವವರ್ಯಾರು?"

ಮಾತಾಡುತ್ತಾ ಅವರು ಆಫೀಸಿನ ಹತ್ತಿರಕ್ಕೆ ಬಂದರು. ಆಫೀಸಿನಲ್ಲಿ ದೀಪವನ್ನೂ ಉರಿಯುತ್ತಿತ್ತು.

" ಹೊತ್ತು ಎಷ್ಟಾಯಿತು ? ನಮ್ಮ ಬಿಡುವಿನ ಸಮಯವಾಗಲಿಲ್ಲವೇ ?" ಒಬ್ಬನು ಇನ್ನೊಬ್ಬನಿಗಂದನು.

" ಇಲ್ಲ. ಇನ್ನೂ ಅರ್ಧ ತಾಸಿದೆ."

" ಎಂತಹ ಭಯಂಕರ ಚಳಿಯಪ್ಪಾ. ಈ ರಶಿಯನ್ ಮಂದಿ ಹೇಗೆ ಬದುಕುತ್ತಾರಪ್ಪಾ, ಈ ಹಿಮದಲ್ಲಿ ? "

" ರಶಿಯನರೆಂದರೆ ಕಾಡುಮೃಗಗಳು, ಅವರಿಗೆ ಚಳಿ, ಸೆಕೆ ಒಂದೇ"

" ನೀನು ಇಂದ್ರಚಾಪ ನೋಡಿದೆಯಾ ? "

" ನೋಡಿದೆ. "

" ಅದು ಯಾವುದರ ಶಕುನ ? "

" ಯಾರು ಬಲ್ಲರು ? "

" ಅಲ್ಲೊ, ಇಂದ್ರಚಾಪ ಶುಭ ಶಕುನವಂತೆ."

" ಯಾರಿಗೆ ಶುಭ ಶಕುನವೊ. ನಮಗಂತೂ ಇಲ್ಲಿ ಬಂದಂದಿನಿಂದ ಅಪ ಶಕುನ ತಪ್ಪಿದ್ದಿಲ್ಲ."

" ಆ ಕಡೆ ಏನು ನೋಡುತ್ತಿರುವೆ ? "

" ಏನೊ ಬಂದಂತಾಯಿತು "

" ಏನೂ ಇಲ್ಲ, " ಕಿವಿಗೊಟ್ಟು, " ಈ ಭಯಂಕರ ಚಳಿಯಲ್ಲಿ ಪಹರಿ ಮಾಡಿದ್ದರ ಮಾನಸಿಕ ಪರಿಣಾಮ ನೋಡು, ಅದು. ಯಾರೊ ಬಂದಂತೆ ಭಾಸವಾಗುವುದು. ನೋಡಿದರೆ ಯಾರೂ ಇಲ್ಲ. "

" ಇರಬಹುದು. ಆದರೆ, ಆ ಗ್ಯುರಿಲ್ಲಾಗಳಿದ್ದಾರಲ್ಲ. ಅವರು ಎಂದು ಎಲ್ಲಿಂದ ಬಂದಾರು, ಏನೂ ಹೇಳ ಬರುವುದಿಲ್ಲ

" ನಾವು ಆಫೀಸಿಗಿಂತ ಹೆಚ್ಚು ದೂರ ಹೋಗುವುದು ಬೇಡ, ಕಣೊ, ಸುಮ್ಮಗೆ ಹೇಳದೆ ಕೇಳದೆ ಆ ಗ್ಯುರಿಲ್ಲಾ ಗುಂಡಿನ ಬಾಯಿಗೆ ಬೀಳುವು ದೇಕೆ ? "

ಅಂತೂ ಈ ಸಂಭಾಷಣೆಯ ಫಲವಾಗಿ ಆ ಇಬ್ಬರೂ ಯೋಧರು ಆಫೀ ಸಿನ ಹತ್ತಿರವೆ ತಿರುಗಾಡ ಹತ್ತಿದರು

ಆಫೀಸಿನ ಬಾಗಿಲು ತೆರೆದು ಫೀಲ್ಡ್‌ವೆಬೆಲ್‌ನು ಹೊರಗೆ ಬಂದನು.

" ಯಾರು ಗುಂಡು ಹಾರಿಸಿದರು ? "- ಫೀಲ್ಡ್ ವೆಬೆಲನು ಕೇಳಿದನು.

" ನಾನು. ಒಬ್ಬ ಹುಡುಗ ಕೈದಿಗೆ ರೊಟ್ಟಿ ಕೊಡಲು ಬಂದನು. ನಾನು ಸರಿಯಾಗಿ ಗುರಿಯಿಟ್ಟು ಹೊಡೆದೆನು " ಎಂದನು ಉದ್ದನ್ನ ಸಿಪಾಯಿ.

" ಹುಡುಗನೇನಾದ ? " ಫೀಲ್ಡ್ ವೆಬೆಲನ ಕೌತಕದಿಂದ ಕೇಳಿದನು.

" ನನ್ನ ಗುಂಡು ಅಂದ ಬಳಿಕ ಕೇಳಬೇಕೆ ? " ಎಂದು ತನ್ನ ಸಾಮರ್ಥ್ಯದ ಕುರಿತು ತನಗಿದ್ದ ಅಭಿಮಾನದಿಂದ ಹೇಳಿದನು ಉದ್ದನ್ನ ಸಿಪಾಯಿ

" ಎಲ್ಲಿದೆ ಪ್ರೇತ ? "

" ಚರಂಡಿಯಲ್ಲಿ ಒಗೆದೆವು. "

" ಎಲ್ಲಿ ತೋರಿಸಿರಿ "

ಗಿಡ್ಡ ಸಿಪಾಯಿ ಚರಂಡಿಯಲ್ಲಿ ಒಂದೆಡೆ ಬೆರಳು ಮಾಡಿ ತೋರಿಸಿದನು.

" ಇಲ್ಲಿ ಏನೂ ಇಲ್ಲ " ಅಲ್ಲೆಲ್ಲ ನೋಡಿ ಫೀಲ್ಡ್ ವೆಬೆಲನು ಒದರಿದನು.

" ಏನೂ ಇಲ್ಲ ! " ಆಶ್ಚರ್ಯದಿಂದ ಗಿಡ್ಡ ಸಿಪಾಯಿಯು ನುಡಿದನು. ಅವನೂ ಉದ್ದನ್ನ ಸಿಪಾಯಿಯೂ ಚರಂಡಿಯಲ್ಲಿ ಹಾರಿ ಹುಡುಕಾಡ ಹತ್ತಿದರು.

ಫೀಲ್ಡ್ ವೆಬೆಲನು ಸಂಶಯದೃಷ್ಟಿಯನ್ನು ಬೀರಿದನು

" ನಾನು ಸುಳ್ಳು ಹೇಳುವುದಿಲ್ಲ, ಫೀಲ್ಡ್ ವೆಬೆಲರೇ. ಇಲ್ಲೇ ನಾವು ಪ್ರೇತವನ್ನು ಒಗೆದದ್ದು ನೋಡಿರಿ. ಪುರಾವೆ ಕೂಡಾ ಇದೆ " ಎಂದು ಹಿಮದ ಮೇಲೆ ಸ್ಪಷ್ಟವಾಗಿ ಕಾಣುತ್ತಿದ್ದ ರಕ್ತದ ಬಿಂದುಗಳನ್ನು ತೋರಿಸಿದನು.

ಫೀಲ್ಡ್ ವೆಬೆಲನು ನಕಾರಾರ್ಥ ತಲೆಯನ್ನಲ್ಲಾಡಿಸಿದನು.

" ಸತ್ತವನು ಎದ್ದು ಪಹರೆ ಮಾಡುವ ನಿಮಗೂ ಕಾಣಿಸಿಕೊಳ್ಳದೆ ಹೆಜ್ಜೆಯ ಗುರುತು ಕೂಡಾ ಉಳಿಯದೆ ಹಾಗೇ ಏನು ಅದೃಶ್ಯನಾದನೆ ? ಏನು ಕತೆ ಹೇಳುತ್ತೀರಿ ಇದು! "

" ಕತೆ ಅಲ್ಲ ಫೀಲ್ಡ್ ವೆಬೆಲರೇ, ಅಲ್ಲೇ ಗುಡಿಸಲಿನ ಹಿಂದೆ ಅವನಿಗೆ ಗುಂಡು ನಾಟಿತ್ತು. ಅಲ್ಲಿಂದ ನಾವು ಮೃತ ದೇಹವನ್ನು ಇಲ್ಲಿಯತನಕ ಎಳೆದು ತಂದು ಇಲ್ಲೇ ಚರಂಡಿಯಲ್ಲಿ ಒಗೆದಿದ್ದೆವು. ನೋಡಿರಿ, ಎಳೆದು

ತಂದ ಕುರುಹು ಕೂಡಾ ಹಿಮದಲ್ಲಿ ಕಾಣುತ್ತಿದೆ " ಫೀಲ್ಡ್‌ವೆಬೆಲನು ಗುಡಿಸಲಿನ ಹಿಂದೆ ಹೋಗಿ ನೋಡಿದನು. ಹಿಮದ ಮೇಲೆ ದಪ್ಪಗಾಗಿ ದೊಡ್ಡ ಪ್ರಮಾಣದಲ್ಲಿ ರಕ್ತ ಬಿದ್ದಿತ್ತು. ಅದರ ಬಳಿ ಒಂದು ಸೆಜ್ಜೆಯ ಕಪ್ಪು ರೊಟ್ಟಿಯ ತುಂಡು ಕೂಡಾ ಇತ್ತು.

ಸಿಪಾಯಿಗಳು ಹೇಳಿದ್ದು ಕತೆಯಲ್ಲ; ನಿಜವಾಗಿ ನಡೆದದ್ದೇ ಎಂದು ಫೀಲ್ಡ್‌ವೆಬೆಲನಿಗೆ ಖಾತ್ರಿಯಾಯಿತು

" ಬನ್ನಿರಿ ನಿಮ್ಮಿಬ್ಬರನ್ನೂ ದಸ್ತಗಿರಿ ಮಾಡಿದ್ದೇನೆ ! "

" ದಸ್ತಗಿರಿ ! " ಇಬ್ಬರೂ ವಿಸ್ಮಯಗೊಂಡು ಉದ್ಗಾರ ತೆಗೆದರು

" ಕೇಳಿಸುವುದಿಲ್ಲವೇ ? ಬೆಪ್ಪರಂತೆ ಕಣ್ಣು ಬಿಟ್ಟು ಏನು ನೋಡುತ್ತೀರಿ ? ಚೆನ್ನಾಗಿ ಪಹರೆ ಮಾಡಿದ್ದೀರಿ. ನಿಮ್ಮ ಕಣ್ಣು ಮುಂದೆಯೇ ಅಪರಾಧಿಯೊಬ್ಬನ ಮೃತ ದೇಹವನ್ನು ಕದ್ದು ಒಯ್ದಿದ್ದಾರೆ. ನಿಮಗದರ ಪತ್ತೆಯೇ ಇಲ್ಲ. ನಿಮ್ಮಂತಹ ಕಾವಲುಗಾರರಿದ್ದರೆ, ಒಂದೊಂದಾಗಿ ನಮ್ಮ ಕತ್ತುಗೆಗಳನ್ನೇ ಕೊಯ್ದರೂ ಕೇಳುವವರಿಲ್ಲ. ಹುಂ, ನಡೆಯಿರಿ ಈಗ "

ಏನೂ ಮಾತಾಡದೆ ತಲೆ ಕೆಳಗೆ ಹಾಕಿ ಇಬ್ಬರೂ ಫೀಲ್ಡ್‌ವೆಬೆಲನ ಹಿಂದೆ ನಡೆದರು. ಕೊಠಡಿಯನ್ನು ಸೇರಿದ ಮೇಲೆ ಉದ್ದ ಸಿಪಾಯಿ ಇನ್ನೊಬ್ಬನಿಗೆ ಅಂದನು, " ಅಲ್ಲಿ ಯಾರೂ ಇರಲಿಲ್ಲ, ಇರಲು ಸಾಧ್ಯವೂ ಇರಲಿಲ್ಲ."

ಗಿಡ್ಡ ಸಿಪಾಯಿಯು ಮಾತಾಡಲಿಲ್ಲ. ಈ ಘಟನೆಯ ಚಮತ್ಕಾರವನ್ನು ಯೋಚಿಸುವಾಗಲೇ ಅವನ ಕೂದಲು ಭೀತಿಯಿಂದ ನೇರವಾಗುತ್ತಿತ್ತು. ಮೈ ಜುಮ್ಮೆನ್ನುತ್ತಿತ್ತು. ಯಾಕೆಂದರೆ ತುಸುವಾದರೂ ಸದ್ದಾಗಿರಲಿಲ್ಲ. ಅಷ್ಟು ಸ್ವಚ್ಛ ಬೆಳದಿಂಗಳಲ್ಲಿ ಒಂದು ಸಣ್ಣ ನೆರಳು ಕೂಡಾ ಅವರು ಕಂಡಿರಲಿಲ್ಲ. ಆದರೂ ಮೃತದೇಹವು ಇದ್ದಲ್ಲಿಂದ ಮಾಯವಾಗಿತ್ತು. ಮರುದಿನ ಆಫೀಸರನ ಮುಂದೆ ಈ ಪ್ರಕರಣ ಇಡುತ್ತೇನೆಂದು ಫೀಲ್ಡ್‌ವೆಬೆಲನು ಹೇಳಿ ಹೋಗಿದ್ದನು. ಆಗ ಏನಾಗುವುದೊ ತಮ್ಮ ಗತಿ ದೇವರೇ ಬಲ್ಲ.

* * * *

ಗಾಲ್ಯಾ (ಮಿಶ್ಕಾನ ತಾಯಿ) ನಿಟ್ಟುಸಿರು ಬಿಡುತ್ತಾ ಮನೆಯ ಜಗಲಿಯ ಮೇಲೆ ಒರಗಿದ್ದಳು. ಮುನ್ನೂರು ಗಜಕ್ಕಿಂತಲೂ ದೂರ ಹೊಟ್ಟೆಯ ಮೇಲೆ

ಚರಂಡಿಯಲ್ಲಿ ಹರಿದಾಡುವುದು ಅವಳಂತ ನಡು ಹರೆಯದ ಹೆಂಗಸಿಗೆ ಸುಲಭವಾಗಿರಲಿಲ್ಲ. ಆದರೆ ಅವಳು ಏನು ಬಂದರೂ ಸರಿಯೆ, ತನ್ನ ಮಗನನ್ನು ಯಜಮಾನರಿಲ್ಲದ ನಾಯಿಯಂತೆ ಚರಂಡಿಯಲ್ಲೇ ಬಿಡಲಾರೆನೆಂದು ಭೀಷ್ಮಪ್ರತಿಜ್ಞೆ ಮಾಡಿದ್ದಳು. ಮಗನು ಬಿದ್ದಲ್ಲಿಗೆ ಹೋಗುವುದಕ್ಕಿಂಲೂ ಅವನನ್ನು ಬೆನ್ನಮೇಲೆ ಕಟ್ಟಿ ಕಾವಲುಗಾರರಿಗೆ ತಿಳಿಯದಂತೆ ಚರಂಡಿಯಿಂದ ಮೇಲಕ್ಕೆ ಬರುವುದೆಂದರೆ ಜೀವ ಕೈಯಲ್ಲಿ ಹಿಡಿದು ಮಾಡುವ ಸಾಹಸ ಕೃತ್ಯವಾಗಿತ್ತು. ಅದನ್ನು ಒಬ್ಬೊಂಟಿಗಳೇ ಯಶಸ್ವಿಯಾಗಿ ಸಾಗಿಸಿದಳು ಚಿಕ್ಕ ಮಿಶಾನು ಮನೆಯಲ್ಲಿ ಮೇಜಿನ ಮೇಲೆ ಮಲಗಿದ್ದನು ಗಾಲ್ಯಾಳ ಬೇರೆ ಮಕ್ಕಳು ಅವನ ಸುತ್ತಲೂ ನಿಂತಿದ್ದರು ಬಾಚಿದ ಅವನ ತಲೆಗೂದಲು ಗಾಳಿಗೆ ಅಸ್ತವ್ಯಸ್ತವಾಗಿತ್ತು ಒಲೇನಾಳನ್ನು ಕರೆಯಲು ತೆರೆದ ಬಾಯಿ ಆಗಲೇ ಗುಂಡಿನೇಟು ಬಿದ್ದದ್ದರಿಂದ ಪುನಃ ಮುಚ್ಚಿರಲಿಲ್ಲ ಅಂಗಿಯಲ್ಲಿ ಒಂದೆಡೆ ದೊಡ್ಡ ಕೆಂಪು ಚುಕ್ಕೆ ಕಾಣುತ್ತಿತ್ತು

" ಅದೇನಮ್ಮಾ? " ಜೀನಾ ಕೇಳಿದಳು

" ಮುಟ್ಟಬೇಡ ಜೀನಾ, ಅದು ಅವನಿಗೆ ಗುಂಡು ತಾಗಿದ ಜಾಗ. " ಅವಳಣ್ಣ ಸಾಶಾ ಅಂದನು.

ಮುದ್ದು ಹುಡುಗ ಮಿಶಾ ಸತ್ತಿರುವನೆಂದರೆ ಸುಳ್ಳೇ ಎಂದೆನಿಸುತ್ತಿತ್ತು, ತಾಯಿ, ತಮ್ಮಂದಿರಿಗೆಲ್ಲ ಒಂದು ಗಳಿಗೆಯ ಮೊದಲು ರೊಟ್ಟಿಯ ತುಂಡನ್ನು ಕಿಸೆಯೊಳಗೆ ಹಾಕಿ ಒಲೇನಾಳಿಗೆ ಕೊಡಲು ಸದ್ದು ಮಾಡದೆ ಹೋಗಿದ್ದನು. ಕೊಟ್ಟು ಬೇಗನೇ ಬರುವನೆಂದು ಅವರೆಲ್ಲರೂ ಕಾದು ನಿಂತಿದ್ದರು. ಅವನ ಮರಳಿ ಬರೋಣವು ಈ ರೀತಿಯಾಗುವುದೆಂದು ಅವರು ಎಣಿಸಿದ್ದಿಲ್ಲ

" ಅವನನ್ನು ನಾವು ಕಳಿಸಬಾರದಿತ್ತು. " ಜೀನಾ ಅಳುತ್ತಾ ಅಂದಳು.

" ಅವನು ಹೋಗಲೇಬೇಕಿತ್ತು, ಮಗು. " ಎಂದು ತಾಯಿ ಸಂತೈಸಿದಳು.

" ಒಲೇನಾ ಮಾಮಿಗೆ ಅಲ್ಲಿ ತಿನ್ನಲು ಏನನ್ನೂ ಕೊಡುವುದಿಲ್ಲ " ಸಾಶಾ ಅಂದನು.

"ಹೌದು, ಸಾಶಾ ಒಲೇನಾಳೂ ನಿನ್ನ ಅಪ್ಪನೂ ಒಂದೇ ದಳದಲ್ಲಿದ್ದವರು ಈಗ ಅವಳು ಸಾಯುವುದು ಖಂಡಿತ" ಎಂದಳು ತಾಯಿ ಅವಳು ಸಾಯುವಳೆಂಬ ಕಲ್ಪನೆ ಚಿಕ್ಕ ಸಾಶಾನನ್ನು ಸಿಟ್ಟಿಗೆಬ್ಬಿಸಿತು

"ರೊಟ್ಟಿ ಇಲ್ಲ. ಬಟಾಟೆ ಕೆಲವು ಉಳಿದಿವೆ ಅವನ್ನು ನಾನು ಒಲೇನಾಳಿಗೆ ಕೊಟ್ಟು ಬರುತ್ತೇನೆ. ರಶ್ಯನ್ ಸೈನಿಕನ ಧೈರ್ಯ, ಉತ್ಸಾಹಗಳಿಂದ ಅಂದನು ಚಿಕ್ಕ ಸಾಶಾ

"ಬೇಡ, ಬೇಡ ಈಗ ಜರ್ಮನರ ಸರ್ಪಕಾವಲು ಜೋರಾಗಿರಬೇಕು ಈಗ ಹೋದರೆ ಸುಮ್ಮನೆ ಏನೂ ಉಪಯೋಗವಿಲ್ಲದೆ ಸಾಯುವೆ ನೀನು, ನಿನ್ನಣ್ಣನಂತೆ"

"ನನ್ನನ್ನು ಅವರು ಕಾಣಲಾರರು" ಹಟದ ಸ್ವರದಿಂದ ಸಾಶಾ ಹೇಳಿದನು

"ಹುಚ್ಚು ಮಾತು ಆಡಬೇಡ. ಮಿಶಾನಿಂದ ಸಾಧ್ಯವಾಗದ್ದು ಬೇರೆ ಯಾರಿಂದಲೂ ಸಾಧ್ಯವಿಲ್ಲ."

ಸಾಶಾನು ಮರು ಮಾತಾಡಲಿಲ್ಲ ಮೃತ ಮಿಶಾನ ಮೋರೆ ನೋಡಿ ಉಕ್ಕಿ ಬಂದ ಕಣ್ಣೀರೊರಸುತ್ತಾ ತಾಯಿ "ನಾಳೆ ಮುಂಜಾನೆ ಅವನನ್ನು ಹುಡುಕಲು ಆ ರಾಕ್ಷಸರು ಬರುವರು ಅವನನ್ನು ಎಲ್ಲಿಯಾದರೂ ಈಗಲೇ ಹುಗಿಯಬೇಕು" ಅಂದಳು.

"ತೋಟದಲ್ಲಿ ಹುಗಿಯೋಣ" ಸಾಶಾ ಸೂಚಿಸಿದನು

"ಸಾಧ್ಯವಿಲ್ಲ, ಸಾಶಾ. ಅಲ್ಲಿ ನೆಲ ಬಹಳ ಗಟ್ಟಿ ಇದೆ! ಅದಲ್ಲದೆ ನಮ್ಮನ್ನು ಅಲ್ಲಿ ನೋಡಿ ಅವರು ಬಂದೇ ಬರುವರು"

"ಹಾಗಾದರೆ ಏನು ಮಾಡೋಣ ?" ಅಸಹಾಯಸ್ಥಿತಿಯಲ್ಲಿ ಎಲ್ಲರೂ ಈ ವಿಚಾರಮಾಡಹತ್ತಿದರು

"ಮನೆಯಲ್ಲೇ ಹೂಳೋಣ." ತಾಯಿ ಮೆಲುದನಿಯಲ್ಲಿ ಉಸುರಿದಳು.

"ಮನೆಯಲ್ಲೇ ?" ಆಶ್ಚರ್ಯವಾಯಿತು ಜೇನಾಳಿಗೆ ಈ ಕಲ್ಪನೆಯಿಂದ.

"ಬೇರೆಲ್ಲಿ ? ಅವನು ನಮ್ಮ ಬಳಿಯಲ್ಲೇ ಮಲಗಲಿ." ಎಂದಳು ತಾಯಿ.

ಮಿಶಾನನ್ನು ಮಲಗಿಸಿದ ಕೋಣೆಯ ಮಗ್ಗುಲಿಗಿರುವ ಉಗ್ರಾಣದ ಚಿಕ್ಕ ಕೋಣೆಯಲ್ಲಿ ಹೊಂಡ ತೆಗೆಯುವುದೆಂದು ನಿಶ್ಚಯಿಸಿದರು. ಗುದ್ದಲಿ ತಂದು ತಾಯಿಯೂ ಚಿಕ್ಕ ಸಾಶಾ, ತಂಗಿ ಜೀನಾ, ಪ್ರತಿಯೊಬ್ಬರೂ ಸ್ವಲ್ಪ ಸ್ವಲ್ಪ ಅಗೆದು ಹೊಂಡವನ್ನು ಸಿದ್ಧಪಡಿಸಿದರು

ತಾಯಿಯು ಅವನ ಮುಖವನ್ನೂ ನೆತ್ತರಿನಿಂದ ತೊಯ್ದ ಎದೆ ಹಾಗೂ ಬೆನ್ನನ್ನೂ ತೊಳೆದಳು. ಕೊಳೆಯಾದ ಅವನ ಅಂಗಿಯನ್ನು ತೆಗೆದು ಮಡಿಯಾದ ಬೇರೆ ಅಂಗಿಯನ್ನು ತೊಡಿಸಿದಳು ಜೀನಾಳಿಗೆ ಕಣ್ಣೀರು ತಡೆಹಿಡಿಯಲಸಾಧ್ಯವಾಯಿತು

" ಅಳಬೇಡ, ಜೀನಾ. ಮಿಶಾನು ಕೆಂಪು ಸೈನಿಕನಂತೆ ನಾಡಿಗಾಗಿ ಸತ್ತನು, ವೀರಮೃತ್ಯುವನ್ನು ಹೊಂದಿದನು " ಎಂದು ತಾಯಿ ಸಂತೈಸಿದಳು

ಜೀನಾಳನ್ನು ಸಂತೈಸುತ್ತಿದ್ದ ತಾಯಿಗೆ ತನ್ನ ಮನಸ್ಸಿನ ವೇದನೆಯನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಕಠಿಣವಾಯಿತು ದುಃಖದ ತೆರೆಗಳು ಅವಳ ಮನಸ್ಸಿನಲ್ಲಿ ಏಳುತ್ತಲೇ ಇದ್ದುವು. ಹತ್ತು ವರ್ಷ ಪ್ರೀತಿಯಿಂದ ಸಾಕಿ ಸಲುಹಿದ ಮುದ್ದು ಕುವರ, ಕ್ರೂರ ಜರ್ಮನರ ಒಂದೇ ಗುಂಡಿಗೆ ಹತನಾಗಿದ್ದ ದಾರುಣ ಪರಿಸ್ಥಿತಿ.

" ಅಪ್ಪನು ಗ್ಯುರಿಲ್ಲಾ ದಳವನ್ನು ಸೇರಲು ಹೊರಟಿದ್ದಾಗ ಮಿಶಾನನ್ನು ಕರೆದು ಹೇಳಿದ್ದನು ' ನನ್ನ ಹೆಸರು ಹಾಳು ಮಾಡಬೇಡ , ಮಿಶಾ ' ಮಿಶಾನು ಅಪ್ಪನ ಆಜ್ಞೆಯನ್ನು ಅಕ್ಷರಶಃ ಪಾಲಿಸಿದನು ಹೆಸರನ್ನು ಉಳಿಸಿದನು. "

" ನನಗೆ ಗೊತ್ತಾಯಿತು, ಅಮ್ಮಾ " ಎಂದು ಹೇಳಿ ಜೀನಾಳು ಇನ್ನಷ್ಟು ಅತ್ತಳು.

" ನೀನು ಅಳಬಾರದು ಮಿಶಾನ ಮೇಲೆ ಕಣ್ಣೀರು ಬಿದ್ದರೆ ಅವನು ಸಮಾಧಾನದಿಂದ ತನ್ನ ಹೊಂಡದಲ್ಲಿ ಮಲಗಲಾರನು ಬಾ, ಹೊಂಡದಲ್ಲಿ ಅರಿವೆ ಹಾಸೋಣ. " ತಾಯಿ ಅಂದಳು

ಶುಭ್ರ ಬಿಳಿವಸ್ತ್ರವನ್ನು ಹೊಂಡದಲ್ಲಿ ಹಾಸಿ ಅವನ ಮೃತ ದೇಹವನ್ನು ಅದರಲ್ಲಿಟ್ಟು ಅದಕ್ಕೆ ಅರಿವೆ ಸುತ್ತಿದರು.

" ಜೀನಾ, ಒಂದು ಹಿಡಿ ಮಣ್ಣು ತೆಗೆದು ನಿನ್ನ ಅಣ್ಣನ ಮೇಲೆ ಹಾಕು '' ಎಂದಳು ತಾಯಿ.

ಜೀನಾ, ಸಾಶಾ ಇಬ್ಬರೂ ಅಣ್ಣನ ಮೇಲೆ ಒಂದೊಂದು ಹಿಡಿ ಮಣ್ಣು ಹಾಕಿದರು ತರುವಾಯ ತಾಯಿ ಮಣ್ಣನ್ನು ತುಂಬಿಸಿ ಹೊಂಡವನ್ನು ಪೂರ್ಣ ಮುಚ್ಚಿದಳು.

ತುಂಬಿಸಿ ಆದಮೇಲೆ ಅದನ್ನು ನೋಡಿ ತಾಯಿ ಒಂದು ದೀರ್ಘ ಶ್ವಾಸವನ್ನು ಬಿಟ್ಟಳು. ಹೊಸದಾಗಿ ಮಣ್ಣು ತುಂಬಿಸಿದೆಂಬುದು ಸ್ಪಷ್ಟವಾಗಿ ಕಾಣುತ್ತಿತ್ತು. ಎಲ್ಲಾದರೂ ಜರ್ಮನರು ಮನೆಯೊಳಗೆ ಹೊಕ್ಕಿ ಸಂಶಯ ಪಟ್ಟು ಅಗೆದರೆ! ಮಣ್ಣನ್ನು ಮತ್ತಿಷ್ಟು ಸಮಕಟ್ಟಾಗಿ ಮಾಡದಿದ್ದರೆ, ಮಿಶಾ ನನ್ನು ಅವರು ಒಯ್ದು ಚರಂಡಿಯಲ್ಲಿ ಹಾಕುವುದು ಖಂಡಿತ ಆದರೆ ಮಣ್ಣನ್ನು ಮೆತ್ತುವುದು ಹೇಗೆ? ಹಂಚಿಕೆ ಹೊಳೆಯಿತು ಮಕ್ಕಳನ್ನು ಕರೆದು ತಾನೂ ಅವರೂ ಕೂಡಿ ಕಾಲಿನಿಂದಲೇ ಮೆದ್ದು ನೆಲವನ್ನು ಸರಿಮಾಡಿ ದರು. ಗೋರಿಯನ್ನು ಮೆಟ್ಟಬಾರದೆಂದು ಹಿರಿಯರಿಂದಲೂ ನಡೆದು ಬಂದ ಸಂಪ್ರದಾಯ ಆದರೆ ಇಂದು ತನ್ನ ಮಗನ ಗೋರಿಯನ್ನು ತಾನೇ ಮೆಟ್ಟ ಬೇಕಾದ ದುರ್ಧರ ಪಸ್ರಂಗ ಒದಗಿತ್ತು

ನೆಲವು ಸರಿಯಾಗಿ ಸಮಕಟ್ಟಾದ ಬಳಿಕ ಅದರ ಮೇಲೆ ಕೆಲವು ಸಾಮಾನುಗಳನ್ನು ಹರಡಿದರು ಅಲ್ಲಿ ಯಾರನ್ನಾದರೂ ಹುಗಿದಿದೆಯೆಂಬ ಸಂಶಯ ಕೂಡಾ ಯಾರಿಗೂ ಬರುವಂತಿರಲಿಲ್ಲ

" ಮಕ್ಕಳೇ ಹೋಗಿರಿ, ಇನ್ನು ಮಲಗಿರಿ. "

" ನೀನು, ಅಮ್ಮಾ ? "

" ನಾನೂ ಮಲಗುವೆ ''

ಹಾಗೆ ಹೇಳಿದ್ದಳೇನೊ ನಿಜ ಆದರೆ, ಅವಳು ಮಲಗಲಿಲ್ಲ ಮಗನ ಗೋರಿಯನ್ನು ನೋಡುತ್ತಾ ನಿಂತಳು. ಮಕ್ಕಳು ಸಾಯುವುದು ಹೊಸ ದೇನೂ ಅಲ್ಲ. ಆದರೆ, ಸತ್ತಾಗ ಅವರನ್ನು ಅಂದವಾದ ಪೆಟ್ಟಿಗೆಯಲ್ಲಿ ಮಲ ಗಿಸಿ ಎಲ್ಲರೂ ಮೆರವಣಿಗೆ ಹೊರಟು ಹೂಗಿಡಗಳಿಂದ ಸುಶೋಭಿತವಾದ ಉದ್ಯಾನದಲ್ಲಿ ಹುಗಿಯುತ್ತಿದ್ದರು. ಆದರೆ, ಅವಳ ಮುದ್ದು ಮಿಶಾ ಮಾತ್ರ

ನಡುರಾತ್ರಿಯಲ್ಲಿ ಯಾರಿಗೂ ತಿಳಿಯದಂತೆ ಮನೆಯ ಕತ್ತಲೆಕೋಣೆಯಲ್ಲಿ ಪೆಟ್ಟಿಗೆ ಕೂಡಾ ಇಲ್ಲದೆ ಹೂಗಿಯಲ್ಪಟ್ಟಿದ್ದನು.

ತನ್ನ ಗಂಡ ಪ್ಲೇಟನನಿಗೆ ಮಿಶಾ ಅಂದರೆ ಅತ್ಯಚ್ಚುಮೆಚ್ಚಿನ ಮಗ. ಪ್ಲೇಟನನು ಗೆಗಿಳರ ಯುದ್ಧದಲ್ಲಿ ಕೈಯ ಎರಡು ಬೆರಳುಗಳನ್ನು ಕಳಕೊಂಡಿದ್ದನು. ಆದರಿಂದ ಅವನು ದಂಡಿನಲ್ಲಿ ಸೇರಿಸಿಕೊಳ್ಳಲ್ಪಡಲಿಲ್ಲ. ಹಾಗಾಗಿ ಅವನು ಗ್ಯಾರಿಲ್ಲಾ ದಳವನ್ನು ಸೇರಿದ್ದನು. ಗ್ಯಾರಿಲ್ಲಾಗಳು ಶಾರೀರಿಕ ಶಕ್ತಿಗೆ ಹೆಚ್ಚಿನ ಮಹತ್ವ ಕೊಡುತ್ತಿರಲಿಲ್ಲ. ಅವರಿಗೆ ದೇಹಬಲಕ್ಕಿಂತಲೂ ಹೆಚ್ಚಾಗಿ ಬೇಕಾದದ್ದು ಮಾನಸಿಕ ನಿರ್ಧಾರ.

ಪ್ಲೇಟನನು ಮನೆಗೆ ಬಂದು ಮಿಶಾನನ್ನು ಕೇಳಿದರೆ ಏನು ಹೇಳಲಿ? ಮಿಶಾನ ಮರಣದ ವೃತ್ತಾಂತವನ್ನು ಕೇಳಿ ಅವನಿಗೆಷ್ಟು ಕಳವಳವಾಗುವುದು! ಇಲ್ಲ, ಅವನು ಕಳವಳಪಡಲಿಕ್ಕಿಲ್ಲ. ಮಿಶಾನ ಸಾಹಸಕ್ಕಾಗಿ ಅವನಿಗೆ ಧನ್ಯತೆ ಎನಿಸುವುದು. ಗ್ಯಾರಿಲ್ಲಾದಳವನ್ನು ಸೇರಲು ಹೋಗುವಾಗ ಅವನು ಹೇಳಿದ್ದ ಮಾತುಗಳು ಅವಳ ಸ್ಮರಣೆಗೆ ಬಂದುವು. "ಕೊನೆಯವರೆಗೂ ಬಗ್ಗಬೇಡ. ಜರ್ಮನರು ಮನೆಯೊಳಗೆ ನುಗ್ಗಿದರೆ ಕೈಗೆ ಸಿಕ್ಕಿದ್ದರಿಂದ ಅವರಿಗೆ ಹೊಡೆ. ಗಂಡು ಹೆಣ್ಣೆನ್ನದೆ, ಮುದುಕ, ಹರೆಯದವರೆನ್ನದೆ ಎಲ್ಲರೂ ಯುದ್ಧ ಮಾಡಬೇಕಾದ ಕಾಲವಿದು. ಸೋಲೇ ಗತಿಯಾದರೂ ಜೀವ ಹೋಗುವ ಪ್ರಸಂಗವೇ ಬಂದರೂ ಸರಿ, ಎಂದೆಂದಿಗೂ ಜರ್ಮನರಿಗೆ ಶರಣು ಹೋಗಬೇಡಿರಿ." ವೀರ ಪಿತನ ವೀರ ಬಾಲಕ ಮಿಶಾ. ಮಿಶಾನಂತಹ ಎಳೇ ಬಾಲಕರಿರುವವರೆಗೆ ರಶ್ಯ ಎಂದೆಂದಿಗೂ ಜರ್ಮನರಿಗೆ ಬಗ್ಗದು.

೪

"ಪ್ರಿಯ ಲುಯಿಸಾ. . ...."

ತನ್ನ ಪ್ರಿಯ ಪತ್ನಿಗೆ ಪತ್ರ ಬರೆಯಲು ತೊಡಗಿದ್ದ ಕರ್ಟ ವಾರ್ನರನು ಕಣ್ಣೆತ್ತಿ ಕಿಟಕಿಯ ಕಡೆಗೆ ನೋಡಿದನು. ಹೊರಗೆ ಭೀಕರವಾಗಿ ಬೀಸುತ್ತಲಿದ್ದ ಬಿರುಗಾಳಿಯು ಭೂಮಿಯ ಮೇಲೆ ದಪ್ಪವಾಗಿ ಬಿದ್ದಿದ್ದ ಹಿಮವನ್ನು

ಸಿಕ್ಕಾಬಟ್ಟೆ ಹಾರಾಡಿಸುತ್ತಲಿತ್ತು ಮೊದಲೇ ಅಸಹ್ಯವಾಗಿದ್ದ ಚಳಿಯು ಈ ಗಾಳಿಯಿಂದ ಇನ್ನಷ್ಟೂ ತೀಕ್ಷ್ಣವಾಗಿ ದೇಹದಲ್ಲಿದ್ದ ರಕ್ತವನ್ನೇ ನೀರನಂತೆ ಹೆಪ್ಪುಗಟ್ಟಿಸುವುದೊ ಎಂತ ಅನಿಸುತ್ತಿತ್ತು

ಕರ್ಟನ ಹೃದಯವು ವಿರಹವೇದನೆಯಿಂದ ಭಾರವಾಗಿತ್ತು ರಶ್ಯದ ಅಸಹನೀಯ ಕಠಿಣ ಚಳಿಯು ಜರ್ಮನಿಯಲ್ಲಿದ್ದ ತನ್ನ ಮನೆಯ ಹಂಬಲ ವನ್ನು ಇನ್ನಷ್ಟೂ ಹೆಚ್ಚಿಸಿತ್ತು ಹೆಂಡತಿ ಮಕ್ಕಳನ್ನು ಕಾಣದೆ ಎಷ್ಟೋ ದಿನ ಗಳಾಗಿದ್ದುವು ! ಫ್ರಾನ್ಸ್ ಶರಣಾಗತವಾಗಿ ಅಲ್ಲಿನ ಯುದ್ಧವು ಮುಗಿದ ಮೇಲೆ ಮನೆಗೆ ಹೋಗಬಹುದೆಂದು ಕರ್ಟನು ಎಣಿಸಿದ್ದನು ಆದರೆ ಹಿಟ್ಲರನು ಒಮ್ಮೆಲೆ ರಶ್ಯದೊಡನೆ ಯುದ್ಧವನ್ನು ಸಾರಿದ್ದರಿಂದ ಎಲ್ಲಾ ಸೇನೆಯನ್ನು ರಶ್ಯಕ್ಕೆ ತಂದಿದ್ದರು ಜರ್ಮನಿಯ ಮಾರ್ಗವಾಗಿ ಬಂದವರಾದರೂ ಅಲ್ಲಿಂದ ಹಾದು ಹೋಗುವಾಗ ಒಬ್ಬರಿಗೂ ನಿಲ್ದಾಣದಲ್ಲಿ ಕೂಡ ಇಳಿಯಲು ಅನುಮತಿ ಇರಲಿಲ್ಲ. ಒಂದು ದಿನದ ಮಟ್ಟಿಗಾದರೂ ಊರಿಗೆ ಹೋಗಲು ಅನುಮತಿ ದೊರೆತ್ತಿದ್ದರೆ ! ತಾನು ತನ್ನ ಪ್ರಿಯ ಡ್ರೆಸ್ಡೆನಿನಲ್ಲಿದ್ದರೆ ಇಷ್ಟು ಹೊತ್ತಿಗೆ ಬೆಚ್ಚಗಿನ ಕೋಣೆಯಲ್ಲಿ ಕುಳಿತು ಬಿಸಿ ಬಿಸಿ ಕಾಫಿ ಕುಡಿಯುತ್ತಿದ್ದನು ಲುಯಿಸಾ ತನ್ನ ಸ್ಥೂಲ ಕೈಗಳಿಂದ ಬೆಣ್ಣೆ ಹಚ್ಚಿ ಒಂದೊಂದೇ ಬ್ರೆಡ್ ತುಂಡನ್ನು ಕೊಡುತ್ತಿದ್ದಳು ಆ ಸುದಿನ ಪುನಃ ಎಂದು ಬರುವುದೋ !

ತನ್ನ ಲುಯಿಸಾ! ಅವಳ ಅಡಿಗೆ ಅದೆಷ್ಟು ರುಚಿಕರ ! ಮನೆಯನ್ನು ಅವಳು ಎಷ್ಟು ಅಚ್ಚುಕಟ್ಟಾಗಿ ಇಡುತ್ತಿದ್ದಳು ! ಮನೆಯೊಳಗೆ ಕಾಲಿಟ್ಟರೆ ಸರಿ. ಅಲ್ಲಿನ ವ್ಯವಸ್ಥೆಯನ್ನು ಕಂಡು ಅದೆಷ್ಟೋ ಆನಂದವಾಗುವುದು. ಪುಸ್ಕಾಳ ವಿಷಯದಲ್ಲಿ ಅವನಿಗೆ ತಿರಸ್ಕಾರ ಹುಟ್ಟಿತು. ಸೋಮಾರಿ ಅವಳು. ಮಧ್ಯಾಹ್ನದ ವರೆಗೆ ಮಲಗುವುದ, ಎದ್ದ ಮೇಲೆ ಬೇಸರಿಕೆಯಿಂದು ದಿನವಿಡೀ ಗೊಣ ಗೊಟ್ಟುವುದು ತನ್ನ ಕೋಣೆಯನ್ನು ಕೂಡಾ ವ್ಯವಸ್ಥೆಯಿಂದ ಇಡಲಾರಳು ಸೀಗರೇಟ ತುಂಡು, ರೊಟ್ಟಿಯ ಚೂರು ಮೇಜಿನ ಮೇಲೆ ಬಿದ್ದದ್ದು ಲ್ಲೇ, ಅವನ್ನು ತೆಗೆದು ಬಿಸಾಡುವದು ಕೂಡಾ ಇಲ್ಲ. ಈ ನಿರುಪಯೋಗಿ ವೈಗಳ್ಳ ಪುಸ್ಕಾಳಿಗೂ ಲೂಯಿಸಾಳಿಗೂ ಎಷ್ಟು ಅಂತರ!

ಮತ್ತು ಈ ರಶ್ಯನ ಜನರು. ಈ ದೇಶದ ಹವೆಯಷ್ಟೇ ಕಠಿಣ ಅವರ

ಹೃದಯ ಅವರ ಸಹಕಾರ ಸಂಪಾದಿಸಲು ತಾನು ಮಾಡಿದಪ್ರಯತ್ನವೆಷ್ಟು! ಎಲ್ಲವೂ ನಿರರ್ಥಕ. ನೀಡಿದ ಕೈಯನ್ನೇ ಕಚ್ಚುವವರು ತನ್ನನ್ನು ನೋಡಿ ದರೆ, ತಲೆಕೆಳಗೆ ಮಾಡಿ ಮೂಕರಂತೆ ವರ್ತಿಸುವರು. ಆದರೆ ವಿಧೇಯತೆ ಯಾಗಲಿ ಅಂಜಿಕೆಯಾಗಲಿ ಅವರ ಸ್ವಭಾವದಲ್ಲೇ ಇಲ್ಲ ಸಹಾನ್ಯ ಭೀತಿ, ದಬ್ಬಾಳಿಕೆ, ಯಾವುದರಿಂದಲೂ ಇವರ ಮೇಲೆ ಆಗುವ ಪರಿಣಾಮ ಒಂದೇ ಸೊನ್ನೆ "ಆಗಲಿ, ತೋರಿಸುವೆ ಕುನ್ನಿಮಕ್ಕಳೇ ಈ ಕರ್ಟ ವಾರ್ನರನ ಸಾಮರ್ಥ್ಯ" ತಿರಸ್ಕಾರದ ಪರಮಾವಧಿಯಲ್ಲಿ ಹಲ್ಲು ಕಚ್ಚಿ ಈ ಮಾತನ್ನು ಹೇಳಿದನು ಮತ್ತು ಲೂಯಿಸಾಳಿಗೆ ಬರೆಯುವ ಪತ್ರವನ್ನು ಮುಂದರಿಸಿದನು

"ಮನೆಗೆ ಬರುವ ಸುಸಮಯ ಎಂದು ಬಂದೀತೆಂದು ದಿನ ಲೆಕ್ಕ ಹಾಕುತ್ತ ಇದ್ದೇನೆ, ಲೂಯಿಸಾ ನಾವು ಈಗ ಮುಂದರಿಸುತ್ತಿದ್ದೇವೆ ನಮ್ಮ ಸಂಪೂರ್ಣ ವಿಜಯವು ಇನ್ನು ಕೆಲವೇ ದಿನಗಳ ಮಾತು"

ಲೂಯಿಸಾಳಿಗೆ ಸಂತೋಷವಾಗಲೆಂದು ಹೀಗೆ ಬರೆದನು ಮೂರು ತಿಂಗಳಿಂದ ಈ ಹಾಳು ಹಳ್ಳಿಕೊಂಪೆಯಲ್ಲಿ ಮುಂದೆ ಸಾಗಲಾರದೆ ಭಯಂಕರ ಚಳಿ, ಹಿಮ, ಅವೆರಡಕ್ಕಿಂತಲೂ ಭಯಂಕರವಾದ ಗ್ಯರಿಲ್ಲಾಗಳ ದಾಳಿ ಇವಕ್ಕೆಲ್ಲಾ ಬಲಿಯಾಗಿ ದಿನದಿಂದ ದಿನಕ್ಕೆ ಬಲದಲ್ಲಿಯ ಆರೋಗ್ಯದಲ್ಲಿಯೂ ಕ್ಷೀಣವಾಗುತ್ತಾ ಬರುತ್ತಿದ್ದೇವೆಂಬದು ಅವಳಿಗೇನು ಗೊತ್ತು. ಡ್ರೆಸ್‌ಡೆ ನಿಂದ ದಾಡಿಗೆ ಹೋದವರ ಪೈಕಿ ತಾನೊಬ್ಬನೇ ಉಳಿದಿದ್ದನು. ಆದರೆ ಇದೆಲ್ಲಾ ಅವಳಿಗೆ ತಿಳಿಯಬಾರದು ಯುದ್ಧರಂಗದಿಂದ ಬಂದ ಪತ್ರವೆಂದ ಮೇಲೆ ಅದು ಧೈರ್ಯ ಹುಟ್ಟಿಸಬೇಕು ಹಾಗೂ ದೇಶಾಭಿಮಾನವನ್ನು ಬೆಳೆಸಬೇಕು. ಅದೂ ಅಲ್ಲದೆ, ಲೂಯಿಸಾಳ ಕೈಗೆ ತಲುಪುವ ಮೊದಲು ಅದನ್ನು ಬೇರೆಯ ವರು, ತನ್ನ ಮೇಲಾಫೀಸರರು ಓದುವರು ಈ ಪತ್ರದಿಂದಲೇ ಅವರು ತನ್ನ ಮತ ಮನೋಭಾವನೆಗಳ ಪರೀಕ್ಷೆ ಮಾಡುವರು. ಮತ್ತೆ ಬರೆದನು:

"ಇಲ್ಲಿ ಚಳಿ ವಿಪರೀತ ಇಲ್ಲಿನ ಭಯಂಕರ ಶೀತಗಾಳಿ ಹಾಗೂ ಹಿಮ ವನ್ನು ನಾವು ಈ ವರೆಗೆ ಅನುಭವಿಸಿದವರಲ್ಲ. ಆದರೆ, ಫ್ಯೂರರನ (ಹಿಟ್ಲರನ)

ಆಜ್ಞೆಗಳಿಂದ ಈ ದಾರುಣ ಶೀತಬಾಧೆಯನ್ನು ಸಹಿಸುವ ಉಷ್ಣತೆಯನ್ನು ನಾವು ಪಡೆದಿದ್ದೇವೆ ಜರ್ಮನಿಯ ದಿವ್ಯ ಭವಿತವ್ಯವನ್ನು ರೂಪಿಸುವುದರಲ್ಲಿ ನಮ್ಮ ಅಲ್ಪವಾದರೂ ಅಂಗವಿದೆಯೆಂಬುದು ನಮಗೆಲ್ಲರಿಗೂ ಹೆಮ್ಮೆಯ ವಿಷಯ. ”

ಈ ಉದಾತ್ತ ವಿಚಾರಗಳಿಗಾಗಿ ಕರ್ಟನು ತನ್ನನ್ನು ತಾನೇ ಅಭಿನಂದಿಸಿದನು. ಹಿಟ್ಲರನು ಈ ಪತ್ರವನ್ನು ನೋಡಿದರೆ ಖಂಡಿತವಾಗಿ ತನಗೆ ದೊಡ್ಡ ಪಾರಿತೋಷಿಕವನ್ನು ಕೊಡದಿರನು

ತನ್ನ ಮೇಲಾಧಿಕಾರರಿಗಾಗಿ ಅಂದರೆ ತನಗೆ ಮೆಚ್ಚುಗೆ ಸಿಗುವುದರ ಸಲುವಾಗಿ ಇಷ್ಟು ಬರೆದದ್ದು ಸಾಕೆಂದೆನಿಸಿತು. ಇದರ ಮೇಲೆ ಪತ್ರದ ಮೂಲ ಉದ್ದೇಶವಾದ ವೈಯುಕ್ತಿಕ ಖಾಸಗಿ ವಿಷಯಗಳನ್ನು ಬರೆದನು.

" ನೀನು ಹೇಗಿದ್ದಿ ? ಲೈಸೆಲನು ಪರೀಕ್ಷೆಯಲ್ಲಿ ಎಷ್ಟು ಮಾರ್ಕು ಗಳಿಸಿದನು ? ವಿಲ್ಲಿಗೆ ನೆಗಡಿ ಬಾಧೆ ಇದೆಯೆ ಈಗಲೂ ? ಅವನಿಗೆ ಅಂಗಿಗಾಗಿ ರೋಮವಿದ್ದ ತೊಗಲನ್ನು ಕಳಿಸುವೆ ಅದನ್ನು ಕೊಟ್ಟರೆ ಅವನಿಗೆ ನೆಗಡಿ ಬಾರದು ನಿನಗೆ ಕಾಲುಚೀಲ ಬೇಕೆಂದಿದ್ದೆ. ಆದರೆ ಈಗ ನಾವು ಹಳ್ಳಿಗಳಲ್ಲೆ ಇರುತ್ತೇವೆ ನಾವು ಶಹರವನ್ನು ಆಕ್ರಮಿಸಿದೊಡನೆ ನಿನಗೆ ಕಾಲು ಚೀಲ ಕಳಿಸುತ್ತೇನೆ. ಕಳೆದ ವಾರ ಬೆಣ್ಣೆ ಕಳಿಸಿದ್ದೆ. ತಲುಪಿತೇ ? ಮುಂದಿನ ವಾರ ಸ್ವಲ್ಪ ಜೇನು ಕಳಿಸುವೆ. ತಲುಪಿದ್ದಕ್ಕೆ ಕೂಡಲೇ ಪತ್ರ ಬರಿ "

ಪಹರೆಯವನು ಬಾಗಿಲು ತಟ್ಟಿ ಊರ ಹಿರಿಯನು ಬಂದಿರುವನೆಂದು ತಿಳಿಸಿದನು.

ಕರ್ಟನ ಮನಸ್ಸು ಡ್ರೆಸ್ ಡೆನಿನಿಂದ ಪುನಃ ರಶ್ಯದ ಈ ಗ್ರಾಮಕ್ಕೆ ಮರಳಿತು. ಚುಂಬನಗಳಿಂದ ಪತ್ರವನ್ನು ಬೇಗನೇ ಪೂರ್ತಿಮಾಡಿ ಲಕೋಟೆಯೊಳಗ ಹಾಕಿ ಊರ ಹಿರಿಯನನ್ನು ಒಳಗೆ ಕರೆದನು.

ಒಂದು ಕಾಲದಲ್ಲಿ ಸುಖಜೀವಿಯಾಗಿದ್ದವನಂತೆ ತೋರುತ್ತಿದ್ದ ಒಬ್ಬ ದುಂಡು ಹೆಗಲಿನ ಮನುಷ್ಯನು ಒಳಗೆ ಬಂದು ಮುಜರೆ ಮಾಡಿ " ತಾವು ಕರೆಕಳಿಸಿದ್ದಿರೇನು ? " ಎಂತ ಕೇಳಿದನು.

“ಹೌದು, ದವಸ ಧಾನ್ಯಗಳ ಸಂಗ್ರಹವು ಎಂದು ಸಿದ್ಧ ವಾಗುವುದು ?”

ಎಂದು ಸಿಟ್ಟಿನಿಂದ ಕರ್ಟನು ಕೇಳಿದನು.

"ನಾನು ನನ್ನ ಶಕ್ತಿ ಮೀರಿ ಪ್ರಯತ್ನ ಮಾಡುತ್ತಲಿದ್ದೇನೆ. ಆದರೆ ಧಾನ್ಯವೇ ಇಲ್ಲ." ಬಂದವನು ಹೆದರಿ ಹೆದರಿ ಅಂದನು.

"ಧಾನ್ಯವೇ ಇಲ್ಲವೆಂಬುದರ ಅರ್ಥವೇನು? ಈ ಊರಲ್ಲಿ ಮುನ್ನೂರು ಮನೆಗಳಿವೆ. ಹಾಗೂ ಈ ವರ್ಷ ಹದಿನಾರಾಣೆ ಬೆಳೆಯಾಗಿತ್ತು. ಆದರೂ ನೀನು ಧಾನ್ಯ ಇಲ್ಲವೆನ್ನುವೆ!"

"ದವಸಧಾನ್ಯವೆಲ್ಲಾ ಅಡಗಿಸಿಟ್ಟಿದ್ದಾರೆ, ಮಹಾಪ್ರಭೂ" ದೀನವಾಣಿಯಿಂದ ಬಂದವನು ಅರಿಕೆ ಮಾಡಿದನು.

"ಅಡಗಿಸಿಟ್ಟಿದ್ದಾರೆ ನೀನ್ಯಾಕೆ ಅದರ ಶೋಧ ನಡೆಸಲಿಲ್ಲ?" ಕರ್ಟನು ಕೇಳಿದನು

"ಎಲ್ಲಿ ಹುಡುಕಲಿ ಮಹಾಪ್ರಭು?"

"ಎಲ್ಲಿ ಹುಡುಕಲಿ? ಸರಿಯಾಗಿ ಹುಡುಕಬೇಕು ಸರಿಯಾಗಿ ಹುಡುಕಿದರೆ ಅಡಗಿಸಿದ ಕಾಳು ಸಿಗದೆ ಎಲ್ಲಿ ಹೋಗುತ್ತದೆ?" ಬಂದವನು ಮಾತಾಡಲಿಲ್ಲ.

ಕರ್ಟನು ಮುಂದುವರಿದನು "ನನಗೆ ನಿನ್ನ ವಿಷಯದಲ್ಲಿ ಏನೂ ಸಮಾಧಾನವಿಲ್ಲ, ಎಳ್ಳಷ್ಟೂ ಇಲ್ಲ. ನಿನ್ನನ್ನು ಇಲ್ಲಿ ಗ್ರಾಮದ ಹಿರಿಯನೆಂದು ಯಾಕೆ ತಂದರೋ ಗೊತ್ತಾಗುವದಿಲ್ಲ. ಒಬ್ಬ ಸ್ಥಳೀಕ ಮನುಷ್ಯನಿದ್ದರೆ ಒಳಿತಾಗುತ್ತಿತ್ತು ನೀನು ಬಂದು ಒಂದು ತಿಂಗಳು ಕಳೆದರೂ ಊರಲ್ಲಿ ಯಾರ್ಯಾರು ಇದ್ದಾರೆಂದು ನೀನು ಈ ವರೆಗೆ ತಿಳಕೊಂಡಿಲ್ಲ."

"ಹೌದು ಪ್ರಭು, ಇದು ದೊಡ್ಡ ಹಳ್ಳಿ. ಅಲ್ಲದೆ ನನ್ನೊಡನೆ ಯಾರೂ ಒಂದು ಮಾತನ್ನು ಕೂಡಾ ಆಡುವುದಿಲ್ಲ. ನಾನು ಹ್ಯಾಗೆ ಪರಿಚಯ ಮಾಡಿಕೊಳ್ಳಲಿ? ಸ್ಥಳೀಕನಿದ್ದರೆ ಅವನಿಗೆ ಸುಲಭವಿತ್ತು"

ಕರ್ಟನು ಖುರ್ಚಿಯ ಬೆನ್ನಿಗೆ ಒರಗಿದನು. "ಓಹೋ, ನಿನ್ನ ಈಗಿನ ಕೆಲಸದಿಂದ ನಿನಗೆ ತೃಪ್ತಿ ಇಲ್ಲವೆಂತ ಕಾಣುತ್ತದೆ" ಹಿರಿಯನು ಕೈಯಲ್ಲಿದ ಟೊಪ್ಪಿಗೆಯನ್ನು ತಿರುಗಿಸುತ್ತಾ ನಿಂತನು. ಉತ್ತರ ಕೊಡಲಿಲ್ಲ.

"ಕೆಂಪು ಸೈನಿಕರು ನಿನಗೆ ಗುಂಡು ಹಾಕುತ್ತಿದ್ದರು. ಕಿಸಾನರ ಕೈಗೆ

ಸಿಕ್ಕಿದರೆ ಕುಡುಗೋಲುಗಳಿಂದ ನಿನ್ನನ್ನು ತುಂಡು ತುಂಡು ಮಾಡಿ ಜೀವ ತೆಗೆಯುತ್ತಿದ್ದರು. ಜರ್ಮನರಿಂದಾಗಿ ನಿನ್ನ ಪ್ರಾಣ ಉಳಿಯಿತೆಂಬುದನ್ನು ಮರೆಯಬೇಡ. ಹಾಗಿದ್ದರು ಅವರೂ ಹೇಳಿದ್ದನ್ನು ಮಾಡಲು ಇಷ್ಟು ಉದಾಸೀನವೇ ? ಅವರೇನು ನಿನ್ನಿಂದ ಅಸಾಧ್ಯವಾದುದನ್ನೇನೂ ಬಯಸಿಲ್ಲ "

ಹಿರಿಯನು ಅಸಾಧ್ಯತೆಯ ಹೂತ್ಕಾರವನ್ನು ಎಳೆದನು.

" ನೀನು ನಿನ್ನ ಕೆಲಸದಲ್ಲಿ ಏನೂ ಮನಸ್ಸಿಡುವದಿಲ್ಲ. ಬೋಲ್ಶೆವಿಕರು ನಿನ್ನ ಆಸ್ತಿಯನ್ನೆಲ್ಲಾ ಕಸಿದುಕೊಂಡರು, ನಿನ್ನನ್ನು ಸೆರೆಯಲ್ಲಿಟ್ಟರು. ನಾವು ನಿನ್ನನ್ನು ಬಿಡಿಸಿದೆವು ಕೃತಜ್ಞತೆಯ ಲವಲೇಶವಾದರೂ ನಿನ್ನಲ್ಲಿ ಇದ್ದರೆ ಶಕ್ತಿ ಮೀರಿ ಪ್ರಯತ್ನ ಮಾಡುತ್ತಿದ್ದೆ. ಆದರೆ ನೀನು ಏನೂ ಮಾಡಿಲ್ಲ. ಒಂದು ಹಿಡಿ ಕಾಳು ಕೂಡಾ ದೊರಕಿಸಲಿಲ್ಲ. ನಿನ್ನಿಂದ ನಮಗೆ ಯಾವ ಸುದ್ದಿಯೂ ಸಿಕ್ಕಿಲ್ಲ."

" ಹಾಗಲ್ಲ ಮಹಾಪ್ರಭು, ನಾನು ನನ್ನಿಂದಾಗುವ ಪ್ರಯತ್ನ ಮಾಡುತ್ತಿದ್ದೇನೆ. ಒಲೇನಾಳು ಊರಿಗೆ ಮರಳಿದ ಸುದ್ದಿ ನಾನು ಕೊಡಲಿಲ್ಲವೆ ? "

ಎಲ್ಲಿಯೊ ಕತ್ತಲಲ್ಲಿ ಮನೆಗಳ ಹಿಂದೆ ನುಸುಳಿದಾಗ ಸಿಕ್ಕಿದ ಸುದ್ದಿ ಅದು. ಅದನ್ನು ದೊಡ್ಡ ಪರಾಕ್ರಮವೆಂದು ತೋರಿಸಿ ತನ್ನನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡಿದನು, ಕಂಗೆಟ್ಟ ಹಿರಿಯ

ಕರ್ಟನು ಸಿಟ್ಟಿನಿಂದ ಹುಬ್ಬುಗಂಟಿಕ್ಕಿದನು

" ಸರಿ, ಮತ್ತೆ ಏನಾದರೂ. "

" ಹೊರಗಿನವರಿಗೆ ಒಳಗಿನ ಗುಟ್ಟು ತಿಳಿಯಲು ಸಾಧ್ಯವಿಲ್ಲ. ಸ್ಥಳೀಕರಾದರೆ ಸುಲಭ. "

ಕರ್ಟನ ಕೋಪವು ನೆತ್ತಿಗೇರಿತು.

" ಸ್ಥಳೀಕನಿಗೆ ಸುಲಭ ಎಂದು ಸುಮ್ಮನೆ ಒದರಬೇಡ. ಸ್ಥಳೀಕನನ್ನು ತರುವುದು ಎಲ್ಲಿಂದ ? ಈ ಊರಲ್ಲಿ ಮೂನ್ನುರು ಮನೆಗಳಿದ್ದರೂ ಎಲ್ಲರೂ ಸಾಂಘಿಕ ಕೃಷಿಕ್ಷೇತ್ರಕ್ಕೆ ಸೇರಿದವರು. ಸ್ವತಂತ್ರ ಹೊಲದೊಡೆಯರು ಒಬ್ಬರೂ ಇಲ್ಲ. ಎಲ್ಲರೂ ಬೋಲ್ಶೆವಿಕರು ಬರುವ ಮೊದಲು ಭಿಕಾರಿಗಳಾಗಿದ್ದವರು.

ಇವರಲ್ಲಿ ನಮಗೆ ಜನ ಎಲ್ಲಿಂದ ಸಿಗಬೇಕು? ಅದು ಏನೂ ಇಲ್ಲ. ನಿನಗೆ ಮೂರು ಅಲ್ಲ ನಾಲ್ಕು ದಿನಗಳ ಸಮಯ ಕೊಡುತ್ತೇನೆ ಅಷ್ಟರೊಳಗೆ ದವಸ ಧಾನ, ಸಂಗ್ರಹಿಸಲಿಕ್ಕೇಬೇಕು ಇಲ್ಲದಿದ್ದರೆ, ನಿನ್ನನ್ನು ನಡಿಸಿಕೊಳ್ಳುವ ರೀತಿಯೇ ಬೇರೆ, ನೆನಪಿರಲಿ "

" ನಾನೊಬ್ಬ ಏನು ಮಾಡಲಿ ? ನನಗೆ ಸೈನ್ಯದ ಸಹಾಯ ಬೇಕು " ಹಿರಿಯನು ಹೇಳಿದನು

" ನಾನು ಬೇಡವೆಂದೆನೇ ? ಸೈನ್ಯದ ಸಹಾಯ ಬೇಕಾದಾಗ ತಕ್ಕೊ. ಆದರೆ ಏನಾದರೂ ಪ್ರಯತ್ನಮಾಡಿ ಧಾನ್ಯ ದೊರಕಿಸು "

" ಆಗಲಿ, ಮಹಾಪ್ರಭೂ "

" ಇನ್ನೊಂದು ವಿಚಾರ ಅಪರಾಧಿಗೆ ರೊಟ್ಟಿ ಕೊಡಲು ಬಂದ ಆ ಹುಡುಗನ ದೇಹವನ್ನು ಕದ್ದವರ ಪತ್ತೆ ಹಚ್ಚಬೇಕು, ತಿಳಿಯಿತೇ ? ಅದಕ್ಕೂ ನಾಲ್ಕು ದಿವಸದ ಅವಧಿ ಕೊಟ್ಟಿದ್ದೇನೆ. ಈ ಎರಡು ಕೆಲಸ ಲಕ್ಷ್ಯ ದಲ್ಲಿ ಇಟ್ಟುಕೊ. "

" ಅಪ್ಪಣೆ " ಎಂದು ಟೊಪ್ಪಿಗೆ ಕೈಯಲ್ಲಿ ಹಿಡಿದು ಅತ್ಯಂತ ನಮ್ರತೆ ಯಿಂದ ಸಲಾಂ ಮಾಡಿ ಗ್ರಾಮದ ಹಿರಿಯನು ಹೊರಬಿದ್ದನು

ರಸ್ತೆಗೆ ಬಂದ ಮೇಲೆ ಹಿರಿಯನು ಟೊಪ್ಪಿಗೆಯನ್ನು ತಲೆಯ ಮೇಲಿಟ್ಟು ಕೊಂಡನು ಇದು ಕರ್ಟನು ತನಗೆ ಕೊಡುವ ಕೊನೆಯ ಸಂದರ್ಭ (Chance). ಈ ಸಾರೆ ಊರಿನವರ ಅಸಹಕಾರವನ್ನು ಮುರಿಯಲಿಕ್ಕೇ ಬೇಕು ಹಾಗೆ ಮಾಡದಿದ್ದರೆ ತನಗೆ ಉಳಿಗಾಲವಿಲ್ಲವೆಂಬುದನ್ನು ಹಿರಿಯನು ಚೆನ್ನಾಗಿ ಅರಿತಿದ್ದನು. ಅದಕ್ಕಾಗಿ ಏನಾದರು ಹಂಚಿಕೆ ಹೂಡಲೇಬೇಕಾ ಗಿತ್ತು. ಇದೇ ವಿಚಾರಗಳಲ್ಲಿ ಮಗ್ನನಾಗಿ ರಸ್ತೆಯಲ್ಲಿ ಹೋಗುತ್ತಿದ್ದಾಗ ತನ್ನ ಮುಂದಿನಿಂದ ಒಬ್ಬ ಮುದುಕನು ಹೋಗುವದನ್ನು ಕಂಡು ತಾನು ಯೋಚಿ ಸುತ್ತಲಿದ್ದ ಹಂಚಿಕೆಯ ಪ್ರಥಮ ಪ್ರಯೋಗವನ್ನು ಆಗಲೇ ಮಾಡಿ ನೋಡೋಣ ವೆಂದು ಆಮುದುಕನನ್ನು ಕರೆದನು. ಮುದುಕನು ಹತ್ತಿರಕ್ಕೆ ಬಂದು ಕರೆದವನು ಯಾರೆಂದು ನೆತ್ತಿಯ ಮೇಲೆ ಕೈಯಿಟ್ಟು ನೋಡಿದನು. ಜರ್ಮ ನರು ನೇಮಿಸಿದ ಗ್ರಾಮದ ಹಿರಿಯನೆಂದು ತಿಳಿದೊಡನೆ ಮೋರೆ ನೋಡಿದ್ದೇ

ತಪ್ಪಾಯಿತೆಂದು ತಿರಸ್ಕಾರದಿಂದ ಥೂ ಎಂದು ಉಗಿದು ಅಡ್ಡದಾರಿ ಹಿಡಿದನು.

ಹಿರಿಯನು ಅವನು ಹೋಗುವದನ್ನು ನೋಡುತ್ತಾ ನಿಂತನು. ಜರ್ಮನ ಆಫೀಸರರ ಧಿಕ್ಕಾರ, ಊರಿನ ಜನರ ತಿರಸ್ಕಾರ, ಇವುಗಳನ್ನು ಸಹಿಸಿ ಸಹಿಸಿ ಸಣ್ಣಾಗಿದ್ದ ಅವನಿಗೆ ಉಗ್ರ ಉಪಾಯಗಳನ್ನು ಕೈಕೊಳ್ಳುವುದೆಂದರೆ ಬಹಳ ಕಳವಳವೆನಿಸಿತು. ಆದರೆ ಕರ್ಟನ ಭೀಕರ ಸ್ವರ, ಅವನು ನುಡಿದ ಎಚ್ಚರಿಕೆಯ ಮಾತುಗಳು, ಅವನನ್ನು ಬೇಗನೇ ನಿರ್ಧಾರಕ್ಕೆ ಬರುವಂತೆ ಮಾಡಿದುವು. ತನ್ನ ಜೀವ ತಾನು ಉಳಿಸಿಕೊಳ್ಳುವದು ತನ್ನ ಆದ್ಯಕರ್ತವ್ಯವೆಂದು ತನ್ನನ್ನು ತಾನೇ ಸಮಾಧಾನಪಡಿಸಿಕೊಂಡು ಮನೆಗೆ ಹೋಗಿ ಹುಕುವನ್ನು ಗೀಚಲು ತೊಡಗಿದನು

ಅಂದು ಇಷ್ಟೆಲ್ಲಾ ನಡೆಯುತ್ತಿರುವಾಗ, ಈ ಭಯಂಕರ ಘಟನೆಗಳ ದ್ಯೋತಕವೋ ಎಂಬಂತೆ ಹೊರಗೆ ಜೋರಿನ ಬಿರುಗಾಳಿ ಬೀಸುತ್ತಲೇ ಇತ್ತು ಆ ಚಳಿ ಗಾಳಿಯ ಹವೆಯಲ್ಲಿ ಯಾರೂ ಹೊರಬಿದ್ದಿರಲಿಲ್ಲ. ಮುದುಕ ಎವ್ರೊಕಿಮನು ಮಾತ್ರ ಒಂಟಿತನಕ್ಕೆ ಬೇಸತ್ತು ನೆರೆಯಲ್ಲಿದ್ದ ಗಾಲ್ಯಾಳ ಹತ್ತಿರನಾದರೂ ಹೋಗೋಣವೆಂದು ಹೊರಟನು. ಬಾಗಿಲ ಮುಂದೆ ನಿಂತು ತಟ್ಟಿದನು. ಉತ್ತರವಿಲ್ಲ. ಕೊನೆಗೆ ಬಾಗಿಲು ತೆರೆದನು. ಭಯಭೀತರಾದ ಮೂರು ವ್ಯಕ್ತಿಗಳು ಅವನ ಕಡೆಗೇನೇ ನೋಡಿದರು "ಹೇಗಿದ್ದೀರಮ್ಮಾ ಎಲ್ಲರೂ ?" ಎವ್ರೊಕಿಮನ ಈ ಮಾತು ಕೇಳಿ ಹೆದರಿಕೆಯಿಂದ ನಿಂತು ಹೋಗಿದ್ದ ಶ್ವಾಸವನ್ನು ಗಾಲ್ಯಾಳು ಪುನಃ ಪಡೆದಳು. "ಎವ್ರೊಕಿಮ ಅಜ್ಜ ನೀನು ?" ಎಂದು ಮಕ್ಕಳು ನಿಟ್ಟುಸಿರು ಬಿಡುತ್ತಾ ಉಸುರಿದರು.

"ಕಾಣುವದಿಲ್ಲವೇ ನಿಮಗೆ, ಏತಕ್ಕಾಗಿ ನೀವು ಹೀಗೆ ಹೆದರಿ ಕಂಗಾಲಾಗಿದ್ದೀರಿ ?"

ಯಾರೂ ಉತ್ತರ ಕೊಡಲಿಲ್ಲ. ಕೋಲಿನ ಮೇಲೆ ಭಾರಹಾಕಿ ಮುದುಕನು ಅಲ್ಲೇ ನಿಂತನು

"ಏನಮ್ಮಾ, ನನಗೆ ಕುಳಿತುಕೊಳ್ಳಲು ಕೂಡಾ ಹೇಳುವದಿಲ್ಲ. ಹೊಸ ಸಂಪ್ರದಾಯವೇನು ಇದು ?"

"ನೀನು ನಮ್ಮೊಡನೆ ಕುಳಿತುಕೊಳ್ಳುವುದು ಒಳಿತಲ್ಲ. ಇಲ್ಲಿಗೆ ಜಾರ

ದಿರುವುದೇ ಲೇಸು " ಗಾಲ್ಯಾ ಅಂದಳು.

" ಯಾಕವ್ವಾ ? ಹೀಗೇಕೆ ಹೇಳುವೆ ? "

ಗಾಲ್ಯಾ ಭಯಗ್ರಸ್ತಳಾದವಳಂತೆ ಎವೆಯಿಕ್ಕದೆ ನೋಡುತ್ತಿದ್ದಳು.

"ಏನಾಗಿದೆ ಗಾಲ್ಯಾ ನಿನಗೆ ? ಹುಚ್ಚಳಂತೆ ವರ್ತಿಸುತ್ತಿರುವೆ. ಮಿಶಾ ಎಲ್ಲಿ ? "

ಮಿಶಾನ ಹೆಸರು ಕೇಳಿದೊಡನೆ ಜೀನಾ ಒಂದೇಸವನೆ ಅಳತೊಡಗಿದಳು.

" ನಿನಗೇನಾಯಿತೇ, ಹೀಗೆ ರೋದಿಸಲು ? " ಏನನ್ನೂ ಅರಿಯದ ಎವ್ಡೋಕಿಮನು ಕೇಳಿದನು. ಜೀನಾ ಇನ್ನೂ ಜೋರಾಗಿ ಅತ್ತಳು.

" ಬಾಯಿ ಮುಚ್ಚು. ಜೀನಾ, ಅಳಬೇಡ. " ಎಂದು ತಾಯಿ ಗದ್ದರಿಸಿದಳು

ಏನೂ ಬಗೆಹರಿಯದೆ ಎವ್ಡೋಕಿಮನು ತಲೆ ತುರಿಸುತ್ತಾ ಕುಳಿತನು.
" ಆಗಿದೆ ಏನಪ್ಪಾ ನಿಮಗೆಲ್ಲಾ. ಈ ಚಳಿಗಾಳಿಯಲ್ಲಿ ಮಿಶಾ ಎಲ್ಲಿ ಅಡ್ಡಾಡುತ್ತಾನೆ ? "

" ಮಿಶಾನು ಹೋದ, ಅಜ್ಜಾ " ಗಾಲ್ಯಾ ಗದ್ಗದಕಂಠದಿಂದ ಹೇಳಿದಳು

" ಹೋದ ! ಎಲ್ಲಿಗೆ ಹೋದ ? "

" ಎಲ್ಲಿಗೂ ಹೋಗಿಲ್ಲ. ಜರ್ಮನರು ಇಂದು ಸಂಜೆ ಅವನಿಗೆ ಗುಂಡು ಹಾಕಿದರು.

ಮುದುಕನ ಕೈ ನಡುಗಹತ್ತಿತು.

" ಮಿಶಾನಿಗೆ ಗುಂಡುಹಾಕಿದರು ! ನೀನು ಹೇಳುತ್ತಿರುವೆಯಾದರೂ ಏನು ? "

" ಹೌದಜ್ಜಾ. ಅವನು ಒಲೇನಾಳಿಗೆ ಒಂದು ರೊಟ್ಟಿ ತುಂಡು ಕೊಡಲು ಹೋಗಿದ್ದನು. ಹೋದಾಗ ಜರ್ಮನ್ ಸಿಪಾಯಿಗಳು ಗುಂಡಿಕ್ಕಿದರು. "

" ಅವನ ದೇಹ ? "

" ಅದನ್ನು ಅಲ್ಲಿ ಬಿಡಲಿಲ್ಲ ನಾವು. ಹೊಟ್ಟೆಯ ಮೇಲೆ ಹಿಂದಾ

ಡುತ್ತಾ ಅಲ್ಲಿಯವರೆಗೆ ಹೋಗಿ ನನ್ನ ಹೆಗಲ ಮೇಲೆ ಹೊತ್ತು ಮನೆಗೆ ತಂದೆ. ಯಾರಿಗೂ ಗೊತ್ತಾಗದಂಥ ಸ್ಥಳದಲ್ಲಿ ಹುಗಿದಿದ್ದೇವೆ, ಅವನನ್ನು. ”

“ ಅವನು ಯಾರೆಂದು ಗೊತ್ತಾಯಿತೊ ಅವರಿಗೆ ? ”

“ ಹ್ಯಾಗೆ ಗೊತ್ತಾಗಬೇಕು ? ಗುಂಡು ಹಾಕಿದರು, ಕೂಡಲೇ ಸತ್ತ ನಾಯಿಯನ್ನು ಒಗೆದಂತೆ ಚರಂಡಿಯಲ್ಲಿ ಒಗೆದರು. ಇನ್ನು ಮುಂದೆ ಅವನು ಯಾರೆಂದು ತಪಾಸಣೆ ನಡಿಸಬಹುದು ನೀನು ಬಾಗಿಲು ತಟ್ಟಿದಾಗ, ಅವರೇ ಬಂದರೆಂದು ನಾವು ಅಂಜಿದೆವು. ”

ಮುದುಕನು ತಲೆಯನ್ನು ಅಲ್ಲಾಡಿಸಿದನು

“ ಎಷ್ಟು ಜನರ ಆಹುತಿ ! ಎಳೇ ಮಕ್ಕಳು ಕೂಡಾ ನಿನ್ನ ಗಂಡನಿಗೆ ಇದು ಗೊತ್ತಾಗಿದೆಯೆ ? ”

“ ಗೊತ್ತಾಗುವುದು, ಇಂದಲ್ಲ ನಾಳೆ. ಗೊತ್ತಾಗಿ ಮಾಡುವುದೇನು? ”

“ ಹಾಗನ್ನಬೇಡ, ಗಾಲ್ಯಾ. ಒಂದರ ಮೇಲೆ ಇನ್ನೊಂದು ಕ್ರೂರ ಕರ್ಮ. ಇವೆಲ್ಲಾ ಪ್ರತೀಕಾರವನ್ನು ಕರೆಯುತ್ತಿವೆ. ಪ್ಲೇಟನ್ನನು ಇಷ್ಟು ದಿನ ಇತರರ ದುಃಖದ ಪ್ರತೀಕಾರವನ್ನು ಮಾಡುತ್ತಿದ್ದ ಈಗ ತನ್ನ ಮಗನ ಮೃತ್ಯುವಿನ ಪ್ರತೀಕಾರ ಮಾಡಬೇಕಾಯಿತು. ”

“ ಎಲ್ಲವೂ ಒಂದೇ ಅಜ್ಜ. ”

“ ನಿಜ, ನಿಜ ಆದರೆ ಮಗನೆಂದರೆ ಮಗ ಸಂಬಂಧ ಸಮೀಪ ವಾದಷ್ಟು ವಿರಹದ ಬೇನೆಯು ಹೆಚ್ಚಲ್ಲವೇ ? ನನ್ನ ಮಗ ಹಿಂದಿನ ಯುದ್ಧ ದಲ್ಲಿ ಸತ್ತನು. ಈಗ ನಾನು ಒಬ್ಬನೇ ಯಾರಿಗೂ ಉಪಯೋಗವಿಲ್ಲದೆ ಸೊರ ಗುತ್ತಿದ್ದೇನೆ. ಮಗನು ಜೀವದಿಂದಿದ್ದರೆ ಮನೆ ತುಂಬಾ ಮೊಮ್ಮಕ್ಕಳಿದ್ದು ಎಷ್ಟು ಆನಂದಮಯವಾಗುತ್ತಿತ್ತು! ”

“ ಊರು ತುಂಬಾ ನಿನ್ನ ಮೊಮ್ಮಕ್ಕಳೇ ಅಲ್ಲವೇನಜ್ಜಾ ? ”

“ ಅದು ಸರಿ, ಆದರೆ ರಕ್ತಸಂಬಂಧ ಅಂತ ಒಂದು ಇದೆಯುಲ್ಲಾ, ಅದರ ವೈಶಿಷ್ಟ್ಯ ಬೇರೆಯೇ. ”

“ ಅದೋ ಕೇಳು ಗಂಟೆ ಬಾರಿಸುತ್ತಾರೆ. ” ಚಿಕ್ಕ ಸಾಶಾ ಕೈಮಾಡಿ ಕರೆದು ಹೇಳಿದನು

"ಗಂಟೆ ಅಂದರೆ ಸಭೆಗೆ ಕರೆ ಮಿಶಾನ ವಿಷಯಕ್ಕೋ ಏನೋ." ಇದನ್ನು ಹೇಳುವಾಗ ಗಾಲ್ಯಾಳ ಮುಖ ದಿಗಿಲಿನಿಂದ ಬಾಡಿಹೋಯಿತು.

"ಅದಕ್ಕಾಗಿಯೇ ಎಂತ ಹೇಗೆ ಗೊತ್ತು? ಬೇರೆ ವಿಷಯಕ್ಕೂ ಇರ ಬಹುದು." ಮುದುಕ ಎವ್ದ್ರೊಕಿಮನೆಂದನು

"ಏನಿದ್ದರೂ, ನಾವು ಹೋಗಲೇಬೇಕು. ಹೋಗದಿದ್ದರೆ ಅವರು ಬಂದು ಅಟ್ಟಿಕೊಂಡು ಹೋಗುತ್ತಾರಲ್ಲಾ. ನೀನು ಬರುವುದಿಲ್ಲವೇ ಅಜ್ಜಾ?"

"ಈ ವಿಷಯದಲ್ಲಿ ನನ್ನ ಇಚ್ಛೆ ಎಲ್ಲಿ ನಡೆಯುತ್ತದೆ? ಹೋಗೋಣ" ಎಂದು ಹೇಳಿ ಕೋಲನ್ನು ಊರುತ್ತಾ ಮುದುಕ ಎದ್ದನು.

"ಸಾಶಾ, ಎಲ್ಲಿಗೂ ಹೋಗಬೇಡ. ಜೀನಾಳನ್ನು ನೋಡಿಕೊಂಡಿರು. ಸಭೆ ಮುಗಿದೊಡನೆ ಬರುವೆನು." ಎಂತ ಮಗನಿಗೆ ಹೇಳಿ ಗಾಲ್ಯಾಳೂ ಸಭೆಗೆ ನಡೆದಳು.

ಎಲ್ಲ ಮನೆಗಳಿಂದಲೂ ಬಾಗಿಲುಗಳು ತೆರೆಯಲ್ಪಟ್ಟು ಗಂಡಸರು, ಹೆಂಗಸರು, ಮುದುಕರು, ಮಕ್ಕಳು ಎಲ್ಲರೂ ಸಭೆಯ ಸ್ಥಳಕ್ಕೆ ಹೊರಟರು. ಸಭೆ ಯಾವುದಕ್ಕಾಗಿ ಎಂದು ಒಬ್ಬರು ಇನ್ನೊಬ್ಬರನ್ನು ಕೇಳುತ್ತಿದ್ದರು. ಕೇಳಿದವರಿಗೆ "ನನಗೇನು ಗೊತ್ತು ನಿನ್ನಷ್ಟೇ ನಾನೂ ತಿಳಿದಿರುವೆ" ಎಂತ ಉತ್ತರ ಕೊಡುತ್ತಿದ್ದರು.

"ದೇವಾ, ಏನು ಗಂಡಾಂತರ ಬಂತಪ್ಪಾ!" ಎಂತ ಮುದುಕಿಯೊಬ್ಬಳು ಗಟ್ಟಿಯಾಗಿ ಅಳಹತ್ತಿದಳು.

"ಯಾತಕ್ಕೆ ಸಭೆ ಅಂತ ಏನು ಗೊತ್ತಿಲ್ಲ ಗೊತ್ತಾಗುವ ಮೊದಲೇ ಯಾಕೆ ಅಳುತ್ತಿರುವೆ?" ಇನ್ನೊಬ್ಬಳು ಕೇಳಿದಳು.

"ಸಭೆಯ ಪರಿಣಾಮ ಏನು ಒಳಿತಾಗಲಿಕ್ಕಿಲ್ಲ. ಮುದುಕಿ ಅಂದಳು,"

"ಅದು ಗೊತ್ತಿದ್ದದ್ದೇ. ಒಳಿತು ಮಾಡಲು ಬಂದಿರುವರೇನು ಅವರು?" ಇನ್ನೊಬ್ಬಳಂದಳು.

"ಅದಕ್ಕಾಗಿಯೇ ಮರುಕ ಬರುತ್ತದೆ."

"ಮೊದಲೇ ಮರುಗುವುದು ಯಾಕೆ? ಮೊದಲಾಗಲಿ, ಕೊನೆಗಾಗಲಿ ಮರುಗುವ ಅಗತ್ಯವಿಲ್ಲ ಭವಿತವ್ಯದಲ್ಲಿಟ್ಟ ಭರವಸೆಯನ್ನು ಬಿಡದಿರೋಣ,

ಅಂದರೆ ಸಾಕು." ಈ ಮಾತುಗಳನ್ನು ಅವರಿಬ್ಬರನ್ನು ಹಿಂಬಾಲಿಸುತ್ತಿದ್ದ ಫೆಡೊಸ್ಯಾ ಅಂದಳು.

ಅವಳ ಮಾತಿಗೆ ಯಾರೂ ಮರುಮಾತಾಡಲಿಲ್ಲ. ವಾಸ್ಯಾನ ಸುದ್ದಿ ಎಲ್ಲರೂ ಅರಿತಿದ್ದರು. ಅವಳಿಗೆ ಮುಂದಿನ ಸುಖದ ಆಸೆ ಏನೂ ಇರಲಿಲ್ಲ. ಇತರರಿಗಾದರೆ ಯುದ್ಧಕ್ಕೆ ಹೋದ ಅವರ ಗಂಡಂದಿರ ಹಾಗೂ ಮಕ್ಕಳ ಪೈಕಿ ಕೆಲವರಾದರೂ ಕೊನೆಯ ಜರ್ಮನನನ್ನು ರಶ್ಯದಿಂದ ಹೊರಗಟ್ಟಿದ ಮೇಲೆ ಮರಳಿ ಬರಬಹುದೆಂಬ ಆಸೆ ಇದ್ದಿತು. ಆದರೆ ಒಬ್ಬನೇ ಮಗನನ್ನು ಕಳಕೊಂಡ ಈ ವೃದ್ಧ ವಿಧವೆಗೆ ಅಂತಹ ಆಸೆಗೇನೇ ಎಡೆ ಇರಲಿಲ್ಲ. ಆದರೂ ಅವಳ ಧೈರ್ಯ, ಮನೋದಾರ್ಢ್ಯಗಳೆಷ್ಟು !

ಸಭೆಯನ್ನು ಶಾಲೆಯ ಕಟ್ಟಡದಲ್ಲಿ ಸೇರಿಸಿದ್ದರು. ಬಿಳೀ ಹಂಚಿನ ಎತ್ತರ ಮಾಡಿನ ಹಾಗೂ ಉದ್ದ ಕಿಟಕಿಗಳ ಭವ್ಯ ಕಟ್ಟಡವಾಗಿತ್ತು ಅದು ಈಗ ಅಲ್ಲಿ ಶಾಲೆ ಇರಲಿಲ್ಲ. ಇದ್ದ ಬೆಂಚು, ಖುರ್ಚಿಗಳನ್ನು ಜರ್ಮನರು ಒಡೆದು ಉರಿಸಲು ಉಪಯೋಗಿಸಿದ್ದರು. ಗೋಡೆಯಲ್ಲಿದ್ದ ನಕಾಶೆ, ಚಿತ್ರಗಳನ್ನು ಕಿತ್ತುಹರಿದು ಹಾಕಿದ್ದರು. ಶಾಲೆಯ ಇತರ ಸಾಮಗ್ರಿಗಳನ್ನು ಕದ್ದು ತಮ್ಮಲ್ಲಿಗೆ ಒಯ್ದಿದ್ದರು. ಗ್ರಾಮಸ್ಥರ ಅಭಿಮಾನಾಸ್ಪದವಾದ ಆದರ್ಶ ಶಾಲೆಯು ಈಗ ಹಾಳುಬಿದ್ದ ಸ್ಮಶಾನದಂತೆ ತೋರುತ್ತಿತ್ತು

ಗ್ರಾಮದ ಹಿರಿಯನು, ಕಟ್ಟಿಗೆಗಾಗಿ ಉಪಯೋಗಿಸದೆ ಉಳಿದಿದ್ದ ಒಂದು ಸಣ್ಣ ಮೇಜಿನ ಹಿಂದೆ ಕುಳಿತಿದ್ದನು. ಹತ್ತಿರವೇ ಇದ್ದ ಫೀಲ್ಡ್‌ವೇಬೆಲನ ಮುಂದೆ ಅವನು ವರ್ತಿಸುವ ಗುಲಾಮೀ ರೀತಿಯು ಗ್ರಾಮದ ಹಿರಿಯನಿದ್ದರೂ ಜರ್ಮನರ ದೃಷ್ಟಿಯಲ್ಲಿ ಅವನ ಸ್ಥಾನವೇನೆಂಬುದನ್ನು ಒಡೆದು ತೋರಿಸುತ್ತಿತ್ತು.

"ಎಲ್ಲರೂ ಬಂದಿದ್ದಾರೊ ?" ತನ್ನ ಸೊರಗಿದ ಉದ್ದ ಕೈಗಳನ್ನೆತ್ತಿ ಗ್ರಾಮದ ಹಿರಿಯನು ಕೇಳಿದನು.

"ಎಲ್ಲರೂ." ಹಿಂದಿನಿಂದ ಯಾರೊ ಪ್ರತಿಧ್ವನಿಸಿಕೊಟ್ಟರು.

ಹಿರಿಯನು ಮೇಜಿನ ಮೇಲಿದ್ದ ಕೆಲವು ಕಾಗದ ಪತ್ರಗಳನ್ನು ತನ್ನ ನಡುಗುವ ಕೈಗಳಿಂದ ಎತ್ತಿದನು.

"ಹೆದರಿಬಿಟ್ಟಿದೆ, ಈ ಬೊಕ್ಕ ತಲೆ" ಮುಂದಿಯ ಗುಂಪಿನಲ್ಲಿ ಒಬ್ಬನು ಮೆಲ್ಲನೆ ಹೇಳಿದನು.

"ಹೆದರದೆ ಮತ್ತೆ. ನಮ್ಮ ಕೆಂಪುಸೈನ್ಯ ಇಲ್ಲಿಗೆ ಬಂದ ಮೇಲೆ ಅವನ ತೊಗಲು ಸುಲಿಯುವರೆಂದು ಗೊತ್ತಿಲ್ಲವೇ, ಆ ಮುದಿಗೂಬೆಗೆ?" ಇನ್ನೊಬ್ಬ ಎಂದ.

"ಕೆಂಪುಸೈನ್ಯ ಬರುವವರೆಗೆ ಅವನು ನಮ್ಮ ಕೈಯಲ್ಲಿ ಸಿಕ್ಕದಿದ್ದರೆ ಅಲ್ಲವೇ ಆ ಮಾತು." ಮೂರನೆಯವನೆಂದ

"ಮಾತು ನಿಲ್ಲಿಸಿರಿ, ಸಭೆಯ ಕಾರ್ಯ ಸುರುವಾಯಿತು." ಎಂದು ಹಿರಿಯನು ಜಾಹೀರು ಮಾಡಿದನು

"ಸುರುವಾದಂತೇನೂ ತೋರುವದಿಲ್ಲ." ಎನ್ನೊಕಿಮನು ಗೊಣಗುಟ್ಟಿದನು

"ಮತ್ತೇನಾಗಬೇಕು? ಹಿರಿಯನ ಸ್ವಾರಿ ಚಿತ್ತೈಸಿದೆ. ಅವನ ಧಣಿಗಳೂ ದಯಮಾಡಿಸಿದ್ದಾರೆ. ಸಭೆ ಸುರುವಾಗಲು ಇನ್ನೇನು ಬೇಕು?" ಹತ್ತಿರ ಕೂತವನಂದನು.

"ಮಾತು ನಿಲ್ಲಿಸಿರೆಂದು ಎಷ್ಟು ಸಾರೆ ಹೇಳಬೇಕು ನಿಮಗೆ? ಏನಿದು ಎಲ್ಲಾ ಗುಣಗುಣಾಟ!" ಏರಿಸಿದ ಸ್ವರದಲ್ಲಿ ಹಿರಿಯನು ಒದರಿದನು.

"ಸ್ವಲ್ಪ ಶಾಂತರಾಗಿರೊ, ಮುದಿಗೂಬೆ ಏನು ಕೂಗುತ್ತದೋ ಕೇಳೋಣ" ಎಂದು ಗಟ್ಟಿಯಾಗಿ ನಗುತ್ತಾ ಯುವತಿಯೊಬ್ಬಳು ಹೇಳಿದಳು.

ಹಿರಿಯನು ಕನ್ನಡಕವನ್ನು ಕಿಸೆಯಿಂದ ತೆಗೆದು ಮೂಗಿಗೆ ಸಿಕ್ಕಿಸಿದನು ಮತ್ತು ನಡುಗುವ ಕೈಗಳಲ್ಲಿ ಒಂದು ಕಾಗದವನ್ನು ಹಿಡಿದು ಕನ್ನಡಕದ ಮೇಲಿನಿಂದ ಸಭೆಯನ್ನೊಮ್ಮೆ ನೋಡಿದನು. ಸಭೆಯು ನಿಶ್ಶಬ್ದವಾಯಿತು. ಒಂದೆರಡು ಸಲ ಕೆಮ್ಮಿ ಕಂಠವನ್ನು ಸರಿಪಡಿಸಿಕೊಂಡು ಹಿಂಜರಿಯುವ ಅಳುದನಿಯಲ್ಲಿ ಹಿರಿಯನು ಓದಲು ತೊಡಗಿದನು

"ಈವರೆಗೆ ಯಾರೂ ತೀರ್ವೆಗಾಗಿ ವಿಧಿಸಿದ ದವಸಧಾನ್ಯಗಳನ್ನು ಕೊಟ್ಟಿಲ್ಲ." ಸಭೆಯಲ್ಲಿ ಗುಜುಗುಜು ಮಾತು ತೊಡಗಿ ಫಕ್ಕನೆ ನಿಂತಿತು. "ಧಾನ್ಯವನ್ನು ಕೊಡಲು ವಿಧಿಸಿದ ಅವಧಿಯು ಇನ್ನು ಮೂರೇ ದಿವಸಗಳಲ್ಲಿ

ಮುಗಿಯುತ್ತದೆ." ಪುನಃ ಗುಜುಗುಜು ಮಾತು.

" ವಿಧಿಸಿದ ಪ್ರಮಾಣದಲ್ಲಿ ಧಾನ್ಯವನ್ನು ಕೊಟ್ಟು ತನ್ನ ದೇಶಕ್ಕೂ ಜರ್ಮನ್ ಸೈನ್ಯಕ್ಕೂ ತನ್ನ ಕರ್ತವ್ಯ ಮಾಡದಿರುವವನು ಅಸಹಕಾರ ಹಾಗೂ ರಾಜದ್ರೋಹದ ಕುರಿತಾದ ಕಾಯಿದೆಯನ್ವಯ ......"

" ನಮಗೆಲ್ಲಾ ಗೊತ್ತಿದೆ " ಯಾರೊ ಹಿಂದಿನಿಂದ ಧಿಕ್ಕಾರದ ಹಾಗೂ ಏರಿದ ಸ್ವರದಲ್ಲಿ ಹೇಳಿದರು.

ಫೀಲ್ಡ್‌ವೆಬೆಲನು ಎದ್ದು ಹೇಳಿದವರಾರೆಂದು ಗೊತ್ತುಹಚ್ಚಲು ಸ್ವರ ಬಂದ ಕಡೆ ನೋಡಿದನು ಆದರೆ, ಅಲ್ಲಿ ಎಲ್ಲರೂ ಸ್ತಬ್ಧರಾಗಿ ಹಿರಿಯನನ್ನು ನೋಡುತ್ತಾ ಕುಳಿತಿದ್ದರು.

ಧ್ವನಿಯನ್ನು ಏರಿಸಿ ಹಿರಿಯನು ಜಾಹೀರುನಾಮೆಯನ್ನು ಪೂರ್ತಿಗೊಳಿಸಿದನು, " ಮರಣದಂಡನೆಗೆ ಗುರಿಯಾಗುವನು."

ಮುಂದಿಯ ಮೇಲಿನ ಪರಿಣಾಮವನ್ನಳಿಯಲು ಹಿರಿಯನು ಓದಿದ ಮೇಲೆ ತುಸು ಹೊತ್ತು ಸ್ತಬ್ಧನಾಗಿ ನಿಂತನು ಆಮೇಲೆ ನಡುಗುತ್ತಿದ್ದರೂ ಸ್ವರವನ್ನು ಏರಿಸುವ ಪ್ರಯತ್ನಮಾಡಿ, " ಕೇಳಿದಿರೇನು ಎಲ್ಲರೂ ?" ಎಂತ ಒದರಿದನು.

" ಎಲ್ಲರೂ " ಗುಂಪಿನಿಂದ ಯಾರೋ ಉತ್ತರಿಸಿದರು.

" ತಿಳಿತೇನು ಎಲ್ಲರಿಗೂ ?" ಪುನಃ ಒದರಿದನು.

" ತಿಳೀತು, ತಿಳೀತು, ತಿಳಿಯಬೇಕಾದ ರೀತಿಯಲ್ಲೇ ತಿಳೀತು "ತರ್ಪಿಲಿಕಾ ಎಂಬ ಯುವತಿಯೊಬ್ಬಳು ಹೇಳಿದಳು.

ಗೆಪ್ಲಿಕ್ (ಅದು ಹಿರಿಯನ ಹೆಸರು) ಸಂಶಯಾತ್ಮಕ ದೃಷ್ಟಿಯಿಂದ ಅವಳನ್ನೇ ನೋಡಿದನು. ಅವಳು ಸ್ವಲ್ಪವಾದರೂ ಹೆದರದೆ ದೃಢತೆಯ ಮುಖ ಮುದ್ರೆಯಿಂದ ಎದುರಿಗೆ ನೋಡುತ್ತಾ ನಿಂತಿದ್ದಳು.

" ಹಾಗಿದ್ದರೆ ಎಲ್ಲವೂ ಸರಿಯಾಯಿತು."

ಇದನ್ನು ಕೇಳಿ ಕೆಲವರು ಎದ್ದು ಬಾಗಿಲಕಡೆಗೆ ಹೋಗಲಿಕ್ಕೆ ಹತ್ತಿದರು.

" ಎಲ್ಲಿಗೆ ಹೋಗುತ್ತೀರೊ ?" ಗೆಪ್ಲಿಕನು ಒದರಿದನು.

" ತೀರಲಿಲ್ಲೇನು ಎಲ್ಲಾ ?"

" ಯಾರು ಹೇಳಿದರು ? ಇನ್ನೊಂದು ಮಹತ್ವದ ವಿಷಯವಿದೆ. "

ಈ ಮಾತು, ಅದನ್ನು ಹೇಳುವಾಗ ಗೆಪ್ಲಿಕನ ಮೋರೆಯಲ್ಲೂ ಸ್ವರದಲ್ಲೂ ತೋರಿದ ಕಠಿಣತೆ ಇದರಿಂದ ಮಿಶಾನ ತಾಯಿಗೆ ಭೀತಿಯಿಂದ ಭೂಮಿ ಇಬ್ಭಾಗವಾದಂತೆ ತೋರಿತು.

" ಮಹತ್ವದ ವಿಷಯುವೇಂದರೆ ? "

ಮಂದಿ ಆತುರದಿಂದ ಕೇಳಹತ್ತಿತು.

" ನಿನ್ನೆ ರಾತ್ರಿ ಕೈದಿನಲ್ಲಿರುವ ಅಪರಾಧಿಗೆ ಯಾರೊ ರೊಟ್ಟಿ ಕೊಡುವ ಪ್ರಯತ್ನ ಮಾಡಿದರು "

ಭಯದ ಅತಿರೇಕದಿಂದ ಕೂಡ್ರುವ ಶಕ್ತಿಯನ್ನೂ ಕಳಕೊಂಡ ಮಿಶಾನ ತಾಯಿ ಬಳಿಯಲ್ಲಿದ್ದ ಚೆಚೋರಾಳ ಕೈ ಗಟ್ಟಿಯಾಗಿ ಹಿಡಿದಳು

" ಏನಾಗಿದೆ ನಿನಗೆ ? " ಚೆಚೋರಾ ಕೇಳಿದಳು

" ಏನೂ ಇಲ್ಲ .. ಏನೂ ಇಲ್ಲ. " ಮಿಶಾನ ತಾಯಿ ಅವಸರದಲ್ಲಿ ಉತ್ತರ ಕೊಟ್ಟಳು.

" ಹಾಗೆ ರೊಟ್ಟಿ ಕೊಡಲು ಪ್ರಯತ್ನಿಸಿದವನು ಒಬ್ಬ ಹತ್ತುವರ್ಷದ ಹುಡುಗನು. ಅವನ ಮೇಲೆ ಗುಂಡು ಹಾರಿಸಲಾಯಿತು "

ಸಭೆಯಲ್ಲಿ ಎಲ್ಲರೂ ಒಮ್ಮೆಗೆಲೆ ಗುಜುಗುಜುಮಾತಾಡುವ ಗುಲ್ಲೆದ್ದಿತು. ಮಿಶಾನ ತಾಯಿಯ ಮೋರೆಯು ಭೀತಿಯಿಂದ ಬಿಳಿದಾಯಿತು. ಗಂಟಲು ಬಿಗಿದು ಶ್ವಾಸವು ಹೊರಡದಾಯಿತು ಬಳಿಯಲ್ಲಿದ್ದ ಚಚೋರಾಳ ಕೈಯನ್ನು ಇನ್ನಷ್ಟು ಬಲವಾಗಿ ಹಿಡಿದಳು.

" ಸಮಾಧಾನ ತಾಳು ತಾಯಿ, ಇಲ್ಲದಿದ್ದರೆ ಅವನ ಲಕ್ಷ್ಯ ನಿನ್ನ ಕಡೆಗೆನೇ ಹೊರಳುವುದು. " ಎಂದು ಚೆಚೋರಾ ಹೇಳಿದಳು

ಇವರ ಸುದೈವದಿಂದ ಗೆಪ್ಲಿಕನು ಮಂದಿಯ ಮುಖ ನೋಡುತ್ತಿರಲಿಲ್ಲ. ಅಷ್ಟು ಧೈರ್ಯ ಅವನಿಗಾದರೂ ಎಲ್ಲಿಂದ ? ಮೇಲೆ ನೋಡುತ್ತಾ ಅವನು ಮುಂದರಿದನು " ಈ ಹುಡುಗನ ಮೃತದೇಹವನ್ನು ಯಾರೋ ಕದ್ದು ಅಡಗಿಸಿರುವರು. ಈ ಹುಡುಗ ಅಥವಾ ಅವನ ದೇಹವನ್ನು ಕದ್ದವರು ಯಾರೆಂದು ಗೊತ್ತಿದ್ದವರು ಕೂಡಲೇ ಜರ್ಮನ್ ಸೇನಾಪತಿಗೆ ತಿಳಿಸಬೇಕು. "

ಯಾರೂ ಏನೂ ಮಾತಾಡಲಿಲ್ಲ.

“ಶಿಸ್ತು, ಶಾಂತಿಗಳ ಪಾಲನೆಯು ಸುಲಭಸಾಧ್ಯವಾಗುವಂತೆ ಹಾಗೂ ಅಪರಾಧಿಗಳ ಶೋಧವು ಯಶಸ್ವಿಯಾಗುವಂತೆ ಮಾಡಲು ಜರ್ಮನ್ ಸೇನಾ ಪತಿಯು ಈ ರೀತಿ ಹುಕುಂ ಮಾಡುತ್ತಾನೆ” ಎಲ್ಲರೂ ಈ ಸುಗ್ರೀವಾಜ್ಞೆಯ ಸ್ವರೂಪವೇನೆಂದು ಕೇಳಲು ತಲೆ ಮುಂದೂಡಿ ಕಿವಿ ನೆಟ್ಟಗೆ ಮಾಡಿದರು

“ಊರಿನ ಈ ಕೆಳಗಿನ ನಾಗರೀಕರು, ಪಾಲಂಚುಕ, ನೀನಾ, ಒಕಾಬ್ಲೊ ಎವ್ಡೊಕಿಮ್, ಗ್ರೊಬಾಚ್ ಒಸ್ಸೀಪ್, ಮರಿಯಾ ಚೆಚೋರಾ, ಏಶ್ನಿವಾ ಮಾಲನ್ಯಾ, ಜಾಮೀನುದಾರರಾಗಿ ಬಂಧಿಸಲ್ಪಡುವರು.”

ಮಿಶಾನ ತಾಯಿಯು ಚೆಚೋರಾಳ ಮೇಲೆ ಬಂದಿದ್ದ ಈ ಭಯಂಕರ ವಿಪತ್ತಿನಲ್ಲಿ ತನ್ನ ದುಃಖವನ್ನು ಮರೆತಳು. ಹಿಡಿದಿದ್ದ ಅವಳ ಕೈಯನ್ನು ಬಿಟ್ಟು ಸಹಾನುಭೂತಿಯಿಂದ ಅವಳ ಕಡೆ ನೋಡಿದಳು ಆದರೆ ಚೆಚೋ ರಾಳು ಎಳ್ಳಷ್ಟೂ ಧೈರ್ಯಗೆಡಲಿಲ್ಲ. ತಾನು ಜೀವವನ್ನೇ ಕೊಡುವ ಪ್ರಸಂಗ ತನ್ನ ಮೇಲೆ ಬಂದರೂ ಅವಳೇ ಮಿಶಾನ ತಾಯಿಗೆ ಧೈರ್ಯಕೊಡುತ್ತಿದ್ದಳು. “ಚಿಂತೆ ಇಲ್ಲ, ಗಾಲ್ಯಾ ಯೋಚನೆ ಮಾಡಬೇಕಾದ್ದಿಲ್ಲ. ನನ್ನ ಮಕ್ಕಳ ನ್ನಷ್ಟು ನೋಡಿಕೊ” ಎಂದು ಸಣ್ಣದಾದರೂ ಸ್ಥಿರವಾದ ಸ್ವರದಲ್ಲಿ ಮಿಶಾನ ತಾಯಿಗೆ ಹೇಳಿ ತಾನು ಸಿದ್ಧಳಾದಳು.

“ಅಪರಾಧಿಯು ದೇಹವನ್ನು ಕದ್ದು ಅಡಗಿಸಿದ ದ್ರೋಹಿಗಳು ಮೂರು ದಿವಸ ಗಳೊಳಗೆ ಸಿಕ್ಕದಿದ್ದರೆ ಹಾಗೂ ಅಷ್ಟರೊಳಗೆ ಊರವರು ಕಾಳು ಕೊಡಲು ತೊಡಗದಿದ್ದರೆ ಈಗ ಜಾಮೀನಾಗಿ ಬಂಧಿತರಾದ ಐದು ಜನರು ಗಲ್ಲಿಗೇರಿ ಸಲ್ಪಡುವರು”

ಗಾಬರಿಯ ಗದ್ಲೊಂದು ಕೂಡಿದ ಜನಗಳ ಗುಂಪಿನಿಂದ ಹಾದು ಹೋಯಿತು. ಆದರೆ ಈ ಭೀಕರ ಬೆದರಿಕೆಯಿಂದ ಅವರ ನಿರ್ಧಾರವೇನೂ ಕದಲಿದಂತೆ ತೋರಲಿಲ್ಲ ಅಶಿಕ್ಷಿತ ಹಳ್ಳಿಗರ ಈ ಅಚಲ ಧೈರ್ಯವು ಹಿರಿ ಯನ ಹೃದಯದಲ್ಲಿ ಒಂದು ಅಜ್ಞಾತ ಅಂಜಿಕೆಯನ್ನು ಹುಟ್ಟಿಸಿತು.

“ಮುಗಿಯಿತಲ್ಲಾ, ಇನ್ನು ನಾವೆಲ್ಲಾ ಹೋಗಬಹುದೇನು?”

ಫೆಡೋಸ್ಯಾ ನಡೆದ ಸಂಗತಿಯೆಲ್ಲಾ ಬರೀ ಬೇಸರ ಬರುವಂಥ ಕ್ಷುಲ್ಲಕ ವಿಷಯವೆಂಬ ರೀತಿಯಲ್ಲಿ ಕೇಳಿದಳು

" ಸಭೆ ಮುಗಿಯಿತು, ಹೆಸರು ಹೇಳಿದ ಐದು ಜನರಲ್ಲದೆ ಇತರರೆಲ್ಲಾ ಹೋಗಬಹುದು " ಹಿರಿಯನು ಧೈರ್ಯವನ್ನು ನಟಿಸುವ ಪ್ರಯತ್ನಮಾಡಿ ಹೇಳಿದನು. ಉಸಿರೆತ್ತದೆ ಸಭಿಕರು ಬಾಗಿಲಿನಿಂದ ಒಬ್ಬೊಬ್ಬರೇ ಹೊರ ಬಿದ್ದರು ಈ ಹುಕುಮು ಹೊರಡುವ ಮೊದಲೇ ಹೆಸರು ಹೇಳಿದ ಐದು ಜನರು ಮೇಜಿನ ಬಳಿ ಸಾಲಾಗಿ ನಿಂತರು ಸಶಸ್ತ್ರ ಸಿಪಾಯಿಗಳು ಅವರ ಎರಡು ಕಡೆಗಳಲ್ಲೂ ಸಾಲುಗಟ್ಟಿ ಅವರನ್ನು ಹೊರಗೆ ತಂದರು. ಹೊರಬಿದ್ದ ಜನರ ಗುಂಪು ಅಲ್ಲೇ ಇವರನ್ನು ನೋಡುತ್ತ ನಿಂತಿತ್ತು

" ನಮ್ಮ ಯೋಚನೆ ಬೇಡ ಇದೇನೂ ದೊಡ್ಡದಲ್ಲ ಆದರೆ, ಸರ್ವಥಾ ಶರಣು ಹೋಗಬೇಡಿರಿ ಎಷ್ಟು ಮಾತ್ರಕ್ಕೂ ಕದಲಬೇಡಿರಿ " ಚೆಚೋರಾ ಗಟ್ಟಿಯಾಗಿ ಸ್ಪಷ್ಟವಾದ ಸ್ವರದಲ್ಲಿ ನೆರೆದವರನ್ನುದ್ದೇಶಿಸಿ ಹೇಳಿದಳು

ಒಳಗೊಳಗೆ ಕುದಿಯುತ್ತಿದ್ದ ಸಂತಾಪವನ್ನು ತಡೆಹಿಡಿದು ಪ್ರತೀಕಾರದ ದೃಢನಿರ್ಧಾರದ ಶಾಂತವಾತಾವರಣದಲ್ಲಿ ಕೂಡಿದ ಜನರ ಸಮೂಹ ನಿದಾನವಾಗಿ ಚದರಿತು ಜನತೆಯ ನಿಷ್ಠುರವಾದ ಮುಖಮುದ್ರೆಯನ್ನು ನೋಡಿ, ಹಿರಿಯ ಗೆಪ್ಲಿಕನು ಬೆನ್ನೆಲುಬಿನಲ್ಲಿ ಮಂಜು ಎರೆದಂತೆ ಭಯದಿಂದ ನಡುಗಹತ್ತಿದನು ತನ್ನನ್ನು ಮನಸ್ಸಿನ ಆಳದಿಂದ ವಿರೋಧಿಸುತ್ತಿದ್ದ ಈ ಮುನ್ನೂರು ಮನೆಗಳಲ್ಲಿ ತನ್ನನ್ನು ಕೊಲ್ಲುವ ವೈರಿಯು ಎಲ್ಲಿಂದ ಬರುವನೆಂದು ಹೇಳಬರುವಂತಿದ್ದಿಲ್ಲ. ಒಮ್ಮೊಮ್ಮೆ ಆಂದಿನ ಉಗ್ರ ಕಾರ್ಯಕ್ರಮ ಹೊರಡಿಸದಿದ್ದರೆನೇ ಒಳಿತಾಗುತ್ತಿತ್ತು, ಎಂತ ಅನಿಸಿತು. ಆದರೆ ಮರುಕ್ಷಣಕ್ಕೆ, ವಾರ್ನರನ ಕಠಿಣ ಮುಖ, ಭೀಕರ ಆಜ್ಞೆ, ಇವು ಮನಸ್ಸಿನ ಮುಂದೆ ಬಂದವು. " ಈ ಹಳ್ಳಿಯ ಹುಂಬರು ಮಾಡುವದೇನು ? ಜರ್ಮನರು ಗೆಲ್ಲುವುದು ಖಂಡಿತ " ಎಂದು ತನ್ನನ್ನು ತಾನೇ ಸಮಾಧಾನಪಡಿಸುವ ಪ್ರಯತ್ನ ಮಾಡಿಕೊಂಡನು. ಆದರೆ ಸ್ವಾತಂತ್ರ್ಯಯೋಧರ ಗುಂಡು ದೇಶದ್ರೋಹಿಯ ಎದೆಯಲ್ಲಿ ಬೀಳುವಾಗ ಯಾವ ಜರ್ಮನ್ ಅಧಿಕಾರಿಯೂ ತಡೆಯಲಾರನೆಂದು

ಅವನ ಅಂತರಾತ್ಮನಿಗೆ ಅರಿಯದಿರಲಿಲ್ಲ.

*　　*　　*　　*

ಗಾಲ್ಯಾಳು ಮನೆಗೆ ಮುಟ್ಟುವಾಗ ಸಂತಾಪ, ಉದ್ವೇಗಗಳಿಂದ ಅರೆ ಜೀವವಾಗಿದ್ದಳು. ಅವಳಿಲ್ಲದ ವೇಳೆ ಸಾಶಾನು ಕೋಲಿನ ತುಂಡುಗಳಿಂದ ಬೇರೆ ಬೇರೆ ರೂಪಗಳನ್ನು ಮಾಡಿ ಜೀನಾಳನ್ನು ಆಡಿಸುತ್ತಿದ್ದನು. ಮಕ್ಕಳನ್ನು ನೋಡಿ ಗಾಲ್ಯಾಳ ದುಃಖವು ಕಟ್ಟೆಯನ್ನು ಒಡೆದು ಬರುವ ನೀರಿನಂತೆ ಕಣ್ಣಿನಿಂದ ಅಶ್ರುರೂಪದಲ್ಲಿ ಹೊರಗೆಬಂದಿತು

"ಹೇಗಿದ್ದೀರಿ ಸಾಶಾ, ಜೀನಾ ಹಟಮಾಡಲಿಲ್ಲವಲ್ಲಾ?" ಎಂತ ಮಗನ ಕೂಡ ಕೇಳಿದಳು.

"ಏನೂ ಇಲ್ಲ ಅಮ್ಮಾ, ಸಭೆ ಮುಗಿಯಿತೇ ?"

"ಮುಗಿಯಿತು. ನಾನು ಕ್ಷಣದಲ್ಲಿ ಚೆಚೋರಾಳ ಮನೆಗೆ ಹೋಗಿ ಬರುತ್ತೇನೆ."

"ಯಾಕಮ್ಮಾ! ಇಷ್ಟುರಾತ್ರಿ ಚೆಚೋರಾಳ ಮನೆಗೆ ಹೋಗುವುದು?"

"ಚೆಚೋರಾಳನ್ನು ಜರ್ಮನರು ಬಂಧಿಸಿದ್ದಾರೆ ಅವಳ ಮಕ್ಕಳನ್ನು ಇಲ್ಲಿಗೆ ಕರಕೊಂಡು ಬರಬೇಕು."

"ಅವಳನ್ನು ಬಂಧಿಸಿದ್ದು ಯಾಕಮ್ಮಾ?" ಸಾಶಾ ಆಶ್ಚರ್ಯದಿಂದ ಕೇಳಿದನು.

"ಜರ್ಮನರದಿನ್ನೂ ಗೊತ್ತಾಗಿಲ್ಲೇನು ನಿನಗೆ ?" ಎಂದು ಹೇಳಿ ಗಾಲ್ಯಾಳು ಹೊರಗೆ ಹೋದಳು. ತುಸು ಹೊತ್ತಿನಲ್ಲಿ ಚೆಚೋರಾಳ ಮೂರು ಮಕ್ಕಳೊಡನೆ ಹಿಂತಿರುಗಿದಳು ಹಿರಿಯ ಮಗು ಎಂಟು ವರ್ಷದ್ದು. ಸಾಶಾನ ಪ್ರಾಯದ್ದು. ಚಿಕ್ಕವಳಾದ ಮೂರು ವರ್ಷದ ನೀನಾ "ಅಮ್ಮಾ, ಅಮ್ಮಾ" ಎಂದು ಒಂದೇ ಸವನೆ ಅಳುತ್ತಿತ್ತು ತಾಯಿ ಬೇಗನೇ ಬರುವಳೆಂದು ಅವುಗಳನ್ನು ಸಮಾಧಾನಪಡಿಸಿ ಉಣ್ಣಲಿಕ್ಕೆ ಕೂಡಿಸಿದಳು.

ಊಟ! ಕೆಲವು ಬಟಾಟೆಗಳನ್ನು ಬೇಯಿಸಿದ್ದಳು. ಅದೇ ಅಡಿಗೆ. ಬಟಾಟೆಯ ಚಿಕ್ಕ ಚೀಲವೊಂದಲ್ಲದೆ ಮನೆಯಲ್ಲಿ ಆಹಾರ ಪದಾರ್ಥ ಬೇರೇನೂ ಇರಲಿಲ್ಲ. ಜರ್ಮನರ ಕೈಯಲ್ಲಿ ಬೀಳಬಾರದಂತೆ ಇದ್ದ ಸ್ವಲ್ಪ ಜೋಳ,

ಸೆಜ್ಜೆ ಹಾಗೂ ಜೇನು, ಒಣಮಾಂಸವನ್ನೆಲ್ಲಾ ಮನೆಯಿಂದ ದೂರ ನೆಲದಲ್ಲಿ ಹೂತಿಟ್ಟಿದ್ದರು. ನೆಲದಲ್ಲೆಲ್ಲಾ ಮಂಜು ಮುಸುಕಿ ಹೆಪ್ಪುಗಟ್ಟಿದ್ದರಿಂದ ಈಗ ಅವುಗಳಿದ್ದ ಸ್ಥಳದ ಗುರುತುಕೂಡಾ ಹತ್ತುವಂತಿರಲಿಲ್ಲ.

"ಯಾವಾಗಲೂ ಬಟಾಟೆ, ಬಟಾಟೆ, ಬೇರೆ ಏನೂ ಇಲ್ಲ." ಎಂದು ಜೀನಾ ಗೊಣಗುಟ್ಟಿದಳು

"ಬೇರೇನು ಬೇಕು ನಿನಗೆ. ಇಷ್ಟಾದರೂ ಸಿಕ್ಕಿದ್ದು ನಿನ್ನ ಪುಣ್ಯ ಎನ್ನು" ಎಂದು ತಾಯಿ ಗದರಿಸಿದಳು.

ಗದರಿಸಿದಳೇನೊ ನಿಜ, ಆದರೆ ಜೀನಾಳ ಸೊರಗಿದ ದೇಹ, ಕೃಶವಾದ ಕೈಗಳನ್ನು ನೋಡುವಾಗ ಅವಳಿಗೇನೇ ಕಣ್ಣೀರು ತಡೆಯಲಿಲ್ಲ.

"ಬೇಜಾರು ಮಾಡಬೇಡಿ, ಮಕ್ಕಳೇ. ನಮ್ಮ ಹುಡುಗರು ಬೇಗನೇ ಬರುವರು ಆಗ ಎಲ್ಲಾ ಸರಿಹೋಗುವುದು. ಆಮೇಲೆ ರೊಟ್ಟಿಯ ಮೇಲೆ ಜೇನನ್ನು ಸವರಿ ಬೇಕಾದಷ್ಟು ತಿನ್ನುವಿರಂತೆ. ಸದ್ಯ ಬಟಾಟೆ ಮಾತ್ರ ಸಾಕು" ಎಂದಳು.

"ಖಂಡಿತವಾಗಿಯೂ ಸಾಕು." ಎಂದು ಸಾಶಾ ಮೋರೆಯನ್ನೆತ್ತಿ ಅಂದನು.

"ಖಂಡಿತವಾಗಿ ಸಾಕು" ಜೀನಾ ನಿದಾನವಾಗಿ ಅವೇ ಶಬ್ದಗಳನ್ನು ಉಚ್ಚರಿಸಿದಳು

ಮನಸ್ಸಿನ ಕಳವಳವನ್ನಡಗಿಸುವುದು ಗಾಲ್ಯಾಳಿಗೆ ಅಸಾಧ್ಯವಾಯಿತು. ಮಕ್ಕಳನ್ನು ನೋಡುವಾಗ ಅವಳ ಕೈಕಾಲುಗಳು ತಣ್ಣಗಾದುವು. ಹೃದಯವು ಒಡೆದು ಇಬ್ಭಾಗವಾದಂತಾಯಿತು. ತನ್ನ ಮಕ್ಕಳ ಸಂಕಷ್ಟವೇ ಹಿರಿದೆಂದೆಣಿಸಿದ್ದಳು. ಆದರೆ ಈ ಮೂರು ಮಕ್ಕಳು ಮೂರು ವರ್ಷದ ನೀನಾ, ಐದು ವರ್ಷದ ಒಸ್ಕಾ, ಎಂಟು ವರ್ಷದ ಸೋನ್ಯಾ; ಅವರ ತಂದೆ ಈ ಮೊದಲೇ ದಂಡಿಗೆ ಸೇರಿದ್ದನು. ಈಗ ಈ ಹಸುಳೆಗಳು ತಾಯನ್ನೂ ಕಳಕೊಂಡವು

ಉದ್ವೇಗದ ಸಂತಾಪದಲ್ಲಿ ಗಾಲ್ಯಾಳಿಗೆ ಗ್ರೊಖಾಚನ ನೆನಪಾಯಿತು. ಅವನ ಮನೆಯವರ ಸ್ಥಿತಿ ಏನಾಗಿದೆಯೊ! ಅದನ್ನು ತಿಳಿದುಕೊಳ್ಳೋಣ,

ಎಂದು ಅಲ್ಲಿಗೆ ಹೋಗಲು ಹೊರಟಳು.

"ಪುನಃ ಎಲ್ಲಿಗೆ ಹೋಗುವೆ ಅಮ್ಮಾ? ಹೊರಗೆ ಹೋಗುತ್ತಲೇ ಇರುತ್ತಿ" ಎಂದು ಪುಟ್ಟ ಜೀನಾ ಕೇಳಿದಳು. ಹಾಗೆ ಕೇಳುವಾಗ ಅವಳಿಗೆ ಅಳು ಬಂದಿತು.

"ನಾನು ಕೆಲಸ ಇಲ್ಲದೆ ಹೋಗುವದಿಲ್ಲ, ಜೀನಾ. ಬೇಗ ಬರುತ್ತೇನೆ. ಸುಮ್ಮನೆ ಕೂಗಬೇಡ" ಎಂತ ತಾಯಿ ಸಂತೈಸಿದಳು.

"ಶಾಲು ಹೊದ್ದುಕೊ ಅಮ್ಮಾ, ಎಂತಹ ಚಳಿ ಹೊರಗೆ." ಸಾಶಾ ಎಚ್ಚರಿಸಿದನು. ಎಷ್ಟು ಧೀರ ಹಾಗೂ ವಿಚಾರವಂತ ಮಕ್ಕಳು.

ಗ್ರೋಖಾಚನ ಮನೆ ತುಸುದೂರವಿತ್ತು. ಗಾಲ್ಯಾ ಜೋರಾಗಿ ನಡೆದು ಅಲ್ಲಿಗೆ ಬೇಗನೇ ತಲುಪಿದಳು. ಆದರೆ ಒಳಗೆ ಹೋಗಲು ಹಿಂಜರಿದು ಬಾಗಿಲಲ್ಲೇ ನಿಂತಳು. ಗ್ರೋಖಾಚನ ಕೊರಳಿಗೆ ಫಾಶಿಯ ನೇಣು ಬಿದ್ದಂತೆಯೇ ಇತ್ತು. ಅವನ ಹೆಂಡತಿ ಮಕ್ಕಳ ದುಃಖ, ಅದೆಷ್ಟು ತೀಕ್ಷ್ಣವಿರಬೇಕು. ತಾನು ಈ ಪರಿಸ್ಥಿತಿಯಲ್ಲಿ ಅಲ್ಲಿಗೆ ಹೋಗುವುದು ಸರಿಯೊ ಎಂಬ ಸಂಶಯವು ಕೂಡಾ ಅವಳನ್ನು ಬಾಧಿಸಿತು. ಅಂತೆಯೇ ಅವಳು ನೇರಾಗಿ ಒಳಗೆ ಹೋಗದೆ ಹೊರಗೇನೇ ತುಸು ಹೊತ್ತು ನಿಂತಳು.

ಹೀಗೆ ನಿಂತಾಗ ಒಳಗಿನಿಂದ ಫಕ್ಕನೆ ಗರಗಸದ ಶಬ್ದ ಕೇಳಿಸಿತು. ಗಾಲ್ಯಾಳಿಗೆ ಕೊಂಚ ಆಶ್ಚರ್ಯವಾಯಿತು. ಗ್ರೋಖಾಚನ ಮನೆಯಲ್ಲಿ ಈ ಹೊತ್ತು ಮರ ಸಿಗಿಯುವವರ್‍ಯಾರು?

ಗಾಲ್ಯಾ ಇಣಿಕಿ ನೋಡಿದಳು. ಗ್ರೋಖಾಚನ ಹೆಂಡತಿಯೂ ಅವನ ಹಿರೀಮಗಳೂ ಗರಗಸದಿಂದ ಮರವನ್ನು ತುಂಡು ಮಾಡುತ್ತಿದ್ದರು. ಗಾಲ್ಯಾಳನ್ನು ನೋಡಿ ಅವರಿಗೂ ಸ್ವಲ್ಪ ಆಶ್ಚರ್ಯವಾಯಿತು. "ನಿನ್ನೊಡನೆ ಮಾತಾಡಲು ಬಂದೆ." ಗಾಲ್ಯಾಳು ಗ್ರೋಖಾಚನ ಹೆಂಡತಿಯನ್ನುದ್ದೇಶಿಸಿ ಹೇಳಿದಳು.

"ಒಳ್ಳೇದಾಯಿತು, ಒಳಗೆ ಹೋಗೋಣ."

ಇಬ್ಬರೂ ಒಳಗೆ ಹೋದರು. ಒಳಗಿನ ಕೋಣೆಯಲ್ಲಿ ಗ್ರೋಖಾಚನ ಕಿರಿಮಗಳು ಹೊಲಿಯುತ್ತಾ ಕೂತಿದ್ದಳು. ಅವಳನ್ನು ನೋಡಿ ಗಾಲ್ಯಾಳು

ಗ್ರೊಖಾಚನ ಹೆಂಡತಿಗೆ "ನಿನ್ನೊಡನೆ ಸ್ವಲ್ಪ ಖಾಸಗಿ ಮಾತಿದೆ" ಎಂದು ಹೇಳಿದಳು ಗ್ರೊಖಾಚನ ಹೆಂಡತಿಯು ಕಿರಿಮಗಳನ್ನು ಅಕ್ಕನಿಗೆ ಮರ ಸಿಗಿಯುವುದರಲ್ಲಿ ಸಹಾಯಮಾಡಲು ಹೊರಗೆ ಕಳಿಸಿ "ನನ್ನೊಡನೆ ಏನು ಹೇಳಲಿಕ್ಕಿದೆ ?" ಎಂದು ಗಾಲ್ಯಾಳೊಡನೆ ಕೇಳಿದಳು.

"ನಿನ್ನ ಗಂಡನನ್ನು ಅವರು ತಗೊಂಡು ಹೋದರಲ್ಲಾ!" ಭಾರವಾದ ಸ್ವರದಲ್ಲಿ ಗಾಲ್ಯಾ ಹೇಳಿದಳು

"ಹೌದು, ನಾವೇನು ಮಾಡಲಾಗುತ್ತದೆ ? ನಮ್ಮ ಹಣೆಬರಹ ! ಸುದೈವದಿಂದ ಅವನು ಬಂದರೂ ಬರಬಹುದು ನೀನು ಈ ವಿಷಯ ದಲ್ಲೇ ಮಾತಾಡಬೇಕೆಂದಿದ್ದುದು ?"

"ಹೌದು, ... .. ....ಅಂ, ಅಲ್ಲ"

"ಮಾತಾಡಲಿಕ್ಕೇನಿದೆ, ಈ ವಿಷಯದಲ್ಲಿ ? ನನಗೆ ಮೊದಮೊದಲು ಅತಿಶಯ ದುಃಖವಾಯಿತು. ಹೃದಯಕ್ರಿಯೆ ನಿಂತು ಹೋಗಿ ನಾನು ಸತ್ತುಬೀಳುವೆನೊ ಎಂದೆನಿಸಿತು. ಮನೆಗೆ ಬಂದು ವಿಚಾರ ಮಾಡಿದೆ. ಅತ್ತು ಏನು ಉಪಯೋಗ ? ಅದರಿಂದ ಯಾರಿಗೂ ಸಹಾಯವಾಗು ವಂತಿಲ್ಲ ಏನಾದರೂ ಕೆಲಸ ಮಾಡುತ್ತಾ ಇದ್ದರೆ ಮನಸ್ಸಿನ ನೋವನ್ನು ಮರೆಯಬಹುದು. ಆದ್ದರಿಂದ ಈ ಕೆಲಸಕ್ಕೆ ತೊಡಗಿದೆ.

ಇದೆಷ್ಟು ದಿನ ಹೀಗೆ ನಡೆದೀತು ? ಆ ಹಿರಿಯ ಗೆಪ್ಲಿಕನು ನನ್ನ ಗಂಡನ ಹೆಸರು ಓದಿದ ಮೇಲೆ ನನ್ನನ್ನೇ ನೋಡಿದನು ನಾನು ಅಳುವೆ ನೆಂದು ಎಣಿಸಿದನೇನೊ. ನಾನು ಮನಸ್ಸಿನಲ್ಲೇ ಹೇಳಿದೆ: 'ಬರಿಯ ಕಣ್ಣು ಬಿಟ್ಟು ಏನು ನೋಡುತ್ತಿಯೇ ? ನಾನು ನಿನ್ನ ಮುಂದೆ ಎಂದೂ ಅಳಲಾರೆ ನಾವು ಹಳ್ಳಿಯ ಹೆಂಗಸರೆಂದರೆ ಕಬ್ಬಿಣದಂತೆ. ನಮ್ಮ ಬಾಯಿಯಿಂದ ನಿನಗೆ ಬೇಕಾದುದು ಏನೂ ಹೊರಡದು ಹಾಗೂ ನಾವು ರೋದಿಸುವುದನ್ನು ನೀನು ನೋಡುವ ಬದಲು ನೀನು ಒದರಿ ಒದರಿ ರೋದಿಸುವುದನ್ನು ನಾವು ನೋಡುವ ದಿನ ಬೇಗನೇ ಬರುವುದು"

ತನ್ನ ಮಗನಿಂದಾಗಿ ನೆರೆಕರೆಯವರಿಗೆ ಇಷ್ಟೆಲ್ಲಾ ಭಯಂಕರ ವಿಪತ್ತು ಒದಗಿದ್ದನ್ನು ನೋಡಿ ಗಾಲ್ಯಾ ಮನಸ್ಸಿನಲ್ಲೇ ಮರುಗುತ್ತಿದ್ದಳು.

ಈಗ ಗ್ರೊಬಾಚನ ಮನೆಯವರ ಸಂಕಷ್ಟ, ಅದನ್ನು ಅನುಭವಿಸುವುದರಲ್ಲಿ ಅವರು ತೋರಿಸುವ ಅತುಲ ಧೈರ್ಯ, ಇವುಗಳಿಂದ ಅವಳ ಮನಸ್ಸಿನಲ್ಲಿ ಒಂದು ರೀತಿಯ ಅಸಮಾಧಾನದ ಅಶಾಂತತೆಯು ಮೂಡಿತು ಅವರೆಲ್ಲರ ಆಪತ್ತಿಗೆ ತಾನು ಹೊಣೆಗಾರಳೆಂಬುದನ್ನು ಹೇಳದಿರಲು ಅವಳ ಮನಸ್ಸು ತಡೆಯಲಿಲ್ಲ.

"ಜರ್ಮನರು ಗುಂಡಿಕ್ಕಿ ಕೊಂದದ್ದು ನನ್ನ ಮಿಶಾನನ್ನು"

"ಮಿಶಾ!"

"ಹೌದು. ನಾನೇ ಅವನನ್ನು ಚರಂಡಿಯಿಂದ ಎಳೆದು ತಂದು ಹುಗಿದೆನು. ನನ್ನ ಈ ಕೃತ್ಯದಿಂದಾಗಿಯೇ ನಿನ್ನ ಗಂಡನೂ ಇತರ ನಾಲ್ಕು ಜನರೂ ವಿಪತ್ತಿಗೊಳಗಾಗಿದ್ದಾರೆ."

ಇದನ್ನು ಹೇಳಿದ್ದರಿಂದ ಮನಸ್ಸಿನ ಮೇಲಿದ್ದ ದೊಡ್ಡ ಹೊರೆಯೊಂದನ್ನು ಇಳಿಸಿದಂತೆ ಅವಳಿಗೆ ಅನಿಸಿತು. ಮನಸ್ಸು ತುಸು ಹಗುರವಾಯಿತು

"ನನಗೆ ಯಾಕೆ ಹೇಳಿದಿ, ಇದನ್ನು? ಇದು ಯಾರಿಗಾದರೂ ಯಾಕೆ ಗೊತ್ತಾಗಬೇಕು?" ಗ್ರೊಬಾಚನ ಹಂಡತಿ ಅಸಮಾಧಾನ ಪಟ್ಟವಳಂತೆ ಹೇಳಿದಳು.

ಗಾಲ್ಯಾಳಿಗೆ ಇದರ ಅರ್ಥ ಮನಸ್ಸಿಗೆ ಹೋಗಲಿಲ್ಲ.

"ಯಾಕೆ? ನಿನ್ನ ಗಂಡನನ್ನು ಕೊಂಡುಹೋದರು ನಾನು ಜರ್ಮನರ ಠಾಣ್ಯಕ್ಕೆ ಹೋಗಿ ಎಲ್ಲವನ್ನೂ ಹೇಳಿಬಿಡುತ್ತೇನೆ. ಆಗ ಬಂಧಿತರನ್ನು ಬಿಡುವರು."

ಗ್ರೊಬಾಚನ ಹೆಂಡತಿಯು ದಿಗಿಲುಬಿದ್ದವಳಂತೆ ಫಕ್ಕನೆ ಎದ್ದಳು

"ನೀನಗೇನು ಪೂರಾ ಹುಚ್ಚುಹಿಡಿದಿರುವುದೇ? ಜರ್ಮನರ ಬಳಿಗೆ ಹೋಗುವೆಯೆನ್ನುವೆ?"

"ಹೌದು, ನಡೆದ ವಿಷಯವನ್ನೆಲ್ಲಾ ಹೇಳಿ, ಜನರದೇನೂ ತಪ್ಪಿಲ್ಲ ಎನ್ನಲು..........."

"ಮತ್ತು ನಿನ್ನ ತಪ್ಪಾದರೂ ಏನು? ಮಗನ ದೇಹವನ್ನು ಅವರ ಕೈಗೆ ಸಿಕ್ಕಲು ಬಿಡಬೇಕಿತ್ತೇ? ಎಂತಹ ವಿಚಾರ! ನಿನ್ನ ಬುದ್ಧಿ ಪೂರ್ಣ

ವಾಗಿ ಕೆಟ್ಟುಹೋಗಿದೆಯೇ? ಅವರಿಗೆ ಬೇಕಾದ್ದನ್ನೇ ನೀನು ಮಾಡು ವೆಯಾ? ಐದು ಜನರನ್ನು ಬಂಧಿಸಿ ಗಲ್ಲಿಗೇರಿಸುವ ಹೆದರಿಕೆ ಹಾಕಿದ ರಾಯಿತು, ಬೇಕಾದ್ದು ಸಿಗುತ್ತದೆಂದಾಯಿತು. ಹೀಗಾದರೆ ಹಿರಿಯನ ಹಂಚಿಕೆ ಸಫಲವಾದಂತೆಯೇ ಸರಿ. ಇದರ ಪರಿಣಾಮವೇನಾಗುವುದು ಗೊತ್ತೇ? ಇವತ್ತು ಐದು, ನಾಳೆ ಐವತ್ತು ಜನರನ್ನು ಇದೇ ರೀತಿ ಬಂಧಿಸು ವರು. ಅವರಿಗೆ ಚಲೋ ದಾರಿ ತೋರಿಸುವೆ, ನೀನು!

"ಹಾಗಲ್ಲ, ನನ್ನಿಂದಾಗಿ ಅವರು ಬಂಧಿಸಲ್ಪಟ್ಟರು. ನನ್ನಿಂದಾಗಿ ಈಗ ಅವರು ಗಲ್ಲಿಗೇರಿಸಲ್ಪಡುವರಲ್ಲಾ, ಅದಕ್ಕಾಗಿ ಹೇಳಿದೆ."

"ನಿನ್ನಿಂದಾಗಿ ಅಂತ ಸುಮ್ಮನೆ ಅನ್ನಬೇಡ. ಅವರು ಬಂಧಿತರಾದರೆ ಅದು ಜರ್ಮನರಿಂದಾಗಿ. ಇದು ಇಡಿಯ ರಾಷ್ಟ್ರದ ಹೋರಾಟ. ಅದರಲ್ಲಿ ಎಷ್ಟು ಜನರು ದೇಹವನ್ನರ್ಪಿಸಬೇಕಾಗುವುದೊ ಯಾರು ಬಲ್ಲರು?"

ಗ್ರೊಖಾಚನ ಹೆಂಡತಿಯ ಈ ಗಂಭೀರ ವಿಚಾರಗಳಿಂದ ಗಾಲ್ಯಾಳು ವಿಸ್ಮಯಗೊಂಡಳು.

"ಅಂದರೆ?"

"ಅಂದರೆ ಗಿಂದರೆ ಏನೂ ಇಲ್ಲ' ಅವಳ ಮಾತನ್ನು ಮುಂದರಿಸ ಗೊಡದೆ ಗ್ರೊಖಾಚನ ಹೆಂಡತಿಯು ನಡುವೆಯೇ ಅಂದಳು. "ಯೋಚಿಸ ಬೇಕಾದ್ದು ಏನೂ ಇಲ್ಲ. ನೆಟ್ಟಗೆ ಮನೆಗೆ ಹೋಗು, ಹಾಗೂ ಈ ವಿಷಯ ಯಾರಲ್ಲೂ ಉಸುರಬೇಡ. ಯಾರಿಗೂ ತಿಳಿಯಬೇಕಾದ್ದಿಲ್ಲ ಅದು. ಎಲ್ಲರೂ ನಮ್ಮವರೇ ಹೌದು, ಆದರೆ ಈ ವಿಷಯ ಎಲ್ಲರಿಗೂ ತಿಳಿದರೆ ಸುಮ್ಮನೆ ಉದ್ದ ನಾಲಿಗೆಗೆ ಎಡೆಕೊಟ್ಟಂತಾದೀತು. ಈ ಉದ್ದ ನಾಲಿಗೆಗಳಿಂದಲೇ ನಮ್ಮ ಗುಟ್ಟು ಕೆಲವು ಸಾರೆ ರಟ್ಟಾಗುತ್ತದೆ. ಆದ್ದರಿಂದ ಸದ್ದಿಲ್ಲದೆ ಮನೆಗೆ ಹೋಗಿ ನಿನ್ನ ಕೆಲಸ ನೋಡು."

"ಆದರೆ ನಿನ್ನ ಗಂಡ............"

"ಹುಚ್ಚಿ ಬರೇ. ಅವನು ನನ್ನ ಗಂಡನೊ ನಿನ್ನ ಗಂಡನೊ? ನಾನು ತಣ್ಣಗೆ ಇದ್ದೇನೆ. ನೀನ್ಯಾಕೆ ಸುಮ್ಮನೆ ಮರುಗುತ್ತೀ? ವಿಧಿಲಿಖಿತ ಆಗಿಯೇ ತೀರಬೇಕು. ಬದುಕುವುದು ಅವನ ಹಣೆಯಲ್ಲಿದ್ದರೆ ಬದುಕುವನು.

ಇಲ್ಲದಿದ್ದರೆ ಜರ್ಮನರ ಕೈಯಿಂದ ಸಾಯುವನು ಅಷ್ಟೆ. ಜರ್ಮನರ ದಾಸ್ಯತ್ವವೇ ಶಾಶ್ವತವಾದರೆ ನಾವು ಎಲ್ಲರೂ ಸಾಯುವುದೇ ಉತ್ತಮ ''

'' ಜರ್ಮನರ ಅಧಿಕಾರ ಬಹಳ ದಿನ ಉಳಿಯಲಾರದು." ಗ್ರೊಖಾಚನ ಹೆಂಡತಿಯ ಧೀರ ವರ್ತನೆಯಿಂದ ಹುರಿದುಂಬಿದ ಗಾಲ್ಯಾ ಹೇಳಿದಳು.

" ಅಷ್ಟು ಖಾತ್ರಿ ಇಲ್ಲದೆ ಇದ್ದರೆ ನಾನು ಎಂದೊ ಕುತ್ತಿಗೆಗೆ ಉರುಲು ಹಾಕಿ ಸಾಯುತ್ತಿದ್ದೆ. ಈಗ ಏನೊ ನಮಗೆ ದಿನ ಕಷ್ಟದು. ಆದರೆ ಅವರ ದುರ್ದಿನ ಬೇಗನೇ ಬರುವುದು. ಅನುಮಾನವೇ ಬೇಡ ಆ ಬಗ್ಗೆ."

ಇದನ್ನು ಹೇಳುವಾಗ ಗ್ರೊಖಾಚನ ಹೆಂಡತಿಯ ಕಣ್ಣುಗಳಲ್ಲಿ ಆನಂದೋತ್ಸಾಹಗಳ ಬೆಳಕು ಹೊಳೆಯುತ್ತಿತು.

" ಏನೊ ಅಮ್ಮಾ, ನನಗೆ ಒಂದೂ ತೋಚುವುದಿಲ್ಲ.'' ಗಾಲ್ಯಾ ಅಂದಳು.

'' ನಿನ್ನ ಅಂತರಾತ್ಮವು ದೇವರಷ್ಟೇ ದೊಡ್ಡದಿದೆ. ಆದರೆ, ತಲೆಯಲ್ಲಿ ಮೂರ್ಖ ವಿಚಾರಗಳೇ ತುಂಬಿವೆ ನಿನ್ನ ವಿಷಯವನ್ನೊಂದೇ ಹಿಡಿದು ಯೋಚಿಸುತ್ತಾ ಕೂಡಬೇಡ. ಸಾರ್ವಜನಿಕ ದೃಷ್ಟಿಯಿಂದ ವಿಚಾರ ಮಾಡು. ನಾಡಿನ ಹಿತದ ದೃಷ್ಟಿಯಿಂದ ನೋಡು. ಸೋಲನ್ನು ಒಪ್ಪಿಕೊಂಡಂತೆ ನಿನ್ನ ಕೊರಳನ್ನು ಜರ್ಮನರ ಕೈಗೆ ಕೊಡಲು ನಿನಗೆ ಹಕ್ಕಿಲ್ಲವೆಂಬುದು ಆಗ ನಿನಗೆ ತಿಳಿಯುವುದು. ಈ ಜರ್ಮನರಿಂದ ನಮಗೇನು ಮಾಡಲು ಸಾಧ್ಯವಿದೆ? ಗಲ್ಲಿಗೇರಿಸಲಿ, ಗುಂಡಿಕ್ಕಿ ಕೊಲ್ಲಲಿ, ಬೇಕಾದ ಚಿತ್ರಹಿಂಸೆ ಮಾಡಲಿ. ಹಾಗೆ ಒಬ್ಬರನ್ನು, ಇಬ್ಬರನ್ನು, ಸಾವಿರ ಜನರನ್ನು ಕೊಲ್ಲಬಹುದು. ಆದರೆ ನಾಡನ್ನೇ ನಾಶಮಾಡಲು ಅವರಿಂದ ಎಂದೂ ಸಾಧ್ಯವಿಲ್ಲ ನಮ್ಮ ಸೈನ್ಯವು ಮರಳಿ ಬರುವವರೆಗೆ ನಾವು ಜರ್ಮನರಿಗೆ ಶರಣು ಬಾರದಿದ್ದರೆ ಸರಿ, ನಮಗೆ ಜಯವು ಕಟ್ಟಿಟ್ಟದ್ದು."

ಗ್ರೊಖಾಚನ ಹೆಂಡತಿಯು ಶೀಘ್ರಕೋಪಿ, ಜಗಳಗಂಟಿಯೆಂದು ಗ್ರಾಮದಲ್ಲೆಲ್ಲಾ ಹೆಸರಾಗಿದ್ದಳು. ಒಬ್ಬರಿಂದಲೂ ಒಳ್ಳೆಯ ಮಾತನ್ನು ಆಡಿಸಿಕೊಂಡವಳಲ್ಲ. ಆದರೆ ಈವತ್ತು ತನ್ನ ಗಂಡನನ್ನೇ ಕಳಕೊಳ್ಳುವ ಪ್ರಸಂಗ ಬಂದಾಗ ಅವಳು ತೋರಿಸಿದ ನಿಃಸ್ವಾರ್ಥ ದೇಶಪ್ರೇಮ, ಜರ್ಮನರ

ಅಧಿಕಾರವನ್ನೇ ಧಿಕ್ಕರಿಸುವ ಅವಳ ಉದಾತ್ತ ಧೈರ್ಯ ಇವು ಮಿಶಾನ ಮರಣದ ದುಃಖದಿಂದ ಕುಗ್ಗಿಹೋದ ಗಾಲ್ಯಾಳಿಗೆ ಸಹನೆಯ ಸ್ಫೂರ್ತಿಯನ್ನು ಕೊಟ್ಟವು. ಅವಳ ಕೈಯನ್ನು ಬಲವಾಗಿ ಹಿಡಿದು ಗಾಲ್ಯಾ ಅವಳನ್ನು ಬೀಳ್ಕೊಟ್ಟಳು

ಇತ್ತ ಮನೆಯಲ್ಲಿ ಮಕ್ಕಳೆಲ್ಲರೂ ಕೆಲವು ಕಟ್ಟಿಗೆ ಹಾಗೂ ಮಸಿ ತುಂಡುಗಳನ್ನು ಕೂಡಿಸಿ ಜರ್ಮನ ಸೇನೆಯು ಬರುವಾಗ ಅವರ ಕಣ್ಣಿಗೆ ಬೀಳದಂತೆ ಅಡಗಿಸಿದ ದನಕರುಗಳೆಂದು ಆಟವಾಡುತ್ತಿದ್ದರು. ಅಷ್ಟರಲ್ಲಿ ಫಕ್ಕನೆ ಬಾಗಿಲು ಹಾರಿದಂತಾಯಿತು ಆ ಕಡೆ ನೋಡಿದಾಗ ಒಬ್ಬ ಜರ್ಮನ ಸಿಪಾಯಿಯು ಬಾಗಿಲ ಬಳಿ ನಿಂತಿದ್ದನು ಮಕ್ಕಳು ಮಾತ್ರವೇ ಇದ್ದುದನ್ನು ನೋಡಿ ಅವನು ಏನೊ ಒದರಿದನು. ಅವರಿಗೇನೂ ಅರ್ಥವಾಗಲಿಲ್ಲ. ಮಿಶಾನ ಸುದ್ದಿ ಅವರಿಗೆ ಗೊತ್ತಾಗಿರಬೇಕೆಂದೂ ನೆಲವನ್ನು ಅಗೆದು ಅವನ ದೇಹ ಮೇಲೆ ತರಲು ಇವನು ಬಂದಿರಬೇಕೆಂದೂ ಸಾಶಾನು ಎಣಿಸಿದನು. ಸಾಶಾನಿಗೆ ಬಹಳ ಭಯವಾಯಿತು. ತನ್ನ ತಾಯಿ ಕೂಡಾ ಇಲ್ಲದ ವೇಳೆಯಲ್ಲಿ ಮಿಶಾನ ದೇಹವನ್ನು ಈ ನೀಚನ ಕೈಗೆ ಬೀಳದಂತೆ ಹೇಗೆ ರಕ್ಷಿಸುವುದೆಂದು ಅವನಿಗೆ ತಿಳಿಯಲಿಲ್ಲ.

ಆದರೆ ಈ ಜರ್ಮನನು ಅದಕ್ಕಾಗಿ ಬಂದವನಲ್ಲ ಅಸ್ಪಷ್ಟ ರಶ್ಯನ್ ನುಡಿಯಲ್ಲಿ " ಹಾಲು ಹಾಲು " ಎಂಬ ಶಬ್ದಗಳನ್ನಷ್ಟೇ ಒದರಿ ಅವನು ತಾನು ಬಂದ ಉದ್ದೇಶವನ್ನು ಮಕ್ಕಳಿಗೆ ತಿಳಿಸುವ ಯತ್ನ ಮಾಡುತ್ತಿದ್ದನು. " ನಮ್ಮಲ್ಲಿ ಹಾಲು ಏನೂ ಇಲ್ಲ '' ಸಾಶಾ ಅವನಿಗೆ ಹೇಳಿದನು. ಆದರೆ ಸಾಶಾ ಹೇಳಿದ್ದು ಅವನಿಗೆ ತಿಳಿಯಲಿಲ್ಲ. ಪುನಃ " ಹಾಲು ಹಾಲು " ಎಂದು ಒದರಹತ್ತಿದನು. ಸಾಶಾನು ಚಿಕ್ಕವನಾದರೂ ಕ್ರಾಂತಿಯ ಕುಮಾರ. ಪ್ರಸಂಗಾವಧಾನವನ್ನೆಂದೂ ಕಳಕೊಳ್ಳುವವನಲ್ಲ. ಕೂತಲ್ಲಿಂದ ಎದ್ದು ಹಟ್ಟಿಯ ಕಡೆಗೆ ಹೋಗಿ ಬರಿದಾದ ಹಟ್ಟಿಯನ್ನು ಜರ್ಮನ ಸೈನಿಕನಿಗೆ ತೋರಿಸಿದನು. ಅವರಲ್ಲಿದ್ದ ಒಂದೇ ದನವನ್ನು ಜರ್ಮನರು ಬಂದ ದಿನವೇ ಕೊಂದು ಔತಣ ಜರುಗಿಸಿದ್ದರು.

ಇಲ್ಲಿ ಹಾಲು ಸಿಗಲಾರದೆಂದು ಜರ್ಮನ ಸೈನಿಕನಿಗೆ ಖಾತ್ರಿಯಾಯಿತು.

ಹಟ್ಟಿಯಿಂದ ಹಿಂತಿರುಗಿದವನು ಜೀನಾಳ ಮುಂದೆ ನಿಂತು ನಕ್ಕನು. ಆ ಅಸಹ್ಯ ದೃಶ್ಯದಿಂದ ಜೀನಾಳು ಹೆದರಿ ಗಟ್ಟಿಯಾಗಿ ರೋದಿಸಹತ್ತಿದಳು. ಜರ್ಮನನು ತನ್ನ ಕೋವಿಯನ್ನು ಎತ್ತಿ ಅವಳ ಮೋರೆಗೆ ಗುರಿ ಇಡುವಂತೆ ಅವಳ ಮುಂದೆ ಹಿಡಿದನು. ಸಾಶಾ ಇದನ್ನು ನೋಡಿ ಸುಮ್ಮಗೆ ನಿಲ್ಲಲಿಲ್ಲ. ಸಟಕ್ಕನೆ ತನ್ನ ತಂಗಿಯ ಮುಂದೆ ಹಾರಿ ಎರಡೂ ಕೈಗಳನ್ನು ಚಾಚಿ ಅವಳ ಮುಂದೆ ನಿಂತನು. ಜರ್ಮನನು ತನ್ನ ಕೋರೆ ಹಲ್ಲುಗಳನ್ನು ತೋರಿಸಿ ನಗುತ್ತಾ ಕೋವಿಯನ್ನು ಜೀನಾಳ ಎದುರಿನಿಂದ ತಿರುಗಿಸಿ ನೀನಾಳ ಮುಂದೆ ಹಿಡಿದನು ಯಾವುದನ್ನೂ ತಿಳಿಯದ ಚಿಕ್ಕ ನೀನಾ ಅವನನ್ನು ಎವೆಯಿಕ್ಕದೆ ನೋಡಹತ್ತಿದಳು. "ನಾನು ಗುಂಡು ಹಾರಿಸುವೆ" ಎಂದು ಜರ್ಮನನು ಒದರಿದನು ನೀನಾಳಿಗೆ ಅವನ ಮಾತಿನ ಅರ್ಥವಾಗಲಿಲ್ಲ ಆದರೆ ಅವನ ಭೀಕರ ರೂಪವನ್ನು ನೋಡಿ ಅವಳು ಕದಲದೆ ಕೂತಳು. ಜರ್ಮನನು ಕೋವಿಯ ನಳಿಗೆಯನ್ನು ಒಮ್ಮೆ ನೀನಾಳ ಮುಂದೆ, ತಿರುಗೊಮ್ಮೆ ಜೀನಾಳ ಮುಂದೆ ಹಿಡಿದು ಈಗ ಗುಂಡಿಕ್ಕುವೆನೆಂಬಂತೆ ನಟಿಸುತ್ತಿದ್ದನು. ಅವನು ಗುಂಡು ಹಾರಿಸುವ ವಿಚಾರದಲ್ಲಿಲ್ಲವೆಂದೂ ಅವರನ್ನು ಅಂಜಿಸಿ ಮೋಜು ನೋಡುವ ಸಲುವಾಗಿಯೇ ಈ ರೀತಿ ಮಾಡುತ್ತಾನೆಂದೂ ಸಾಶಾನಿಗೆ ತಿಳಿಯಿತು. ಅವನು ಜೀನಾಳ ಮುಂದಿನಿಂದ ಹಿಂದೆ ಸರಿದು ಅವರಂತೆ ತಾನೂ ಜರ್ಮನನನ್ನು ನೋಡುತ್ತಾ ನಿಂತನು.

ತುಸು ಹೊತ್ತಿನ ಮೇಲೆ ಸೈನಿಕನು ಬೇಸತ್ತನು. ಹಾಗೂ ಕೋವಿಯನ್ನು ಹೆಗಲ ಮೇಲೇರಿಸಿ ಹೊರಟು ಹೋದನು. ಮಕ್ಕಳ ಹೋದ ಪ್ರಾಣಗಳು ಮರಳಿ ಬಂದುವು. ಸಾಶಾನು ನರಕಯಾತನೆಯ ಕೊನೆಗಂಡ ನಿಟ್ಟುಸಿರನ್ನು ಬಿಟ್ಟನು. ಅಷ್ಟರಲ್ಲಿ ಪುನಃ ಹೆಜ್ಜೆಗಳ ಸಪ್ಪಳವಾಯಿತು. ಜರ್ಮನ ಸೈನಿಕನು ತಿರುಗಿ ಬಂದನೆಂಬ ಭೀತಿಯಿಂದ ಮಕ್ಕಳು ಪುನಃ ಚೀರಾಡತೊಡಗಿದುವು. ಸಾಶಾನು ಕೂಡಾ ಭೀತಿಯಿಂದ ನಡುಗಹತ್ತಿದನು. ಬಾಗಿಲು ತೆರೆಯಿತು. ಒಳಗೆ ಬಂದ ವ್ಯಕ್ತಿ ಜರ್ಮನ ಸೈನಿಕನಿರದೆ ತಮ್ಮ ತಾಯಿಯೆಂದು ತಿಳಿದರೂ ಮಕ್ಕಳು ಅಳುವನ್ನು ನಿಲ್ಲಿಸಲು ಶಕ್ತರಾಗಲಿಲ್ಲ

ಜಾವಿೂನಿಗಾಗಿ ಬಂಧಿತರಾದ ಐದು ಜನರನ್ನು ಜರ್ಮನರು ಕತ್ತಲೆಯ ಕೋಣೆಗೆ ಒಯ್ದರು. ಅದು ಮೊದಲು ಗ್ರಾಮ ಸೋವಿಯಟ್ಟ (ಪಂಚಾಯತ)ದ ರಿಕಾರ್ಡು ಇಡುವ ಕೋಣೆಯಾಗಿತ್ತು. ಜರ್ಮನರು ಗ್ರಾಮವನ್ನು ಆಕ್ರಮಿಸಿದ ಮೇಲೆ ಕಿಟಕಿಗಳನ್ನೆಲ್ಲಾ ಮುಚ್ಚಿ ಬೆಳಕಿಗೆನೇ ನಿರ್ಬಂಧ ಹಾಕಿದ್ದರು. ಇದ್ದ ಮೇಜು, ಖುರ್ಚಿಗಳು ಎಂದೊ ಅಗ್ನಿಗೆ ಆಹುತಿಯಾಗಿದ್ದುವು. ಕೊರೆಯುವ ಚಳಿಯಲ್ಲಿ ಬರಿದಾದ ನೆಲದ ಮೇಲೆ ಈ ಐದು ಕೈದಿಗಳನ್ನು ಕೂಡಿಸಿದರು.

ಹೊರಗಿನ ವಾತಾವರಣವು ಭವಿತವ್ಯದಷ್ಟೇ ಭೀಕರವಾಗಿತ್ತು. ಆದರೆ ಯಾರೂ ಅಳಲಿಲ್ಲ ಮುಂಬರುವ ಮೃತ್ಯುವನ್ನು ಸ್ವಾಗತಿಸಲು ಎಲ್ಲರೂ ಸಿದ್ಧರಾಗಿದ್ದರು. ಗ್ರೊಖಾಚನು ಒಳಗೆ ಬಂದೊಡನೆ ನೆಲದ ಮೇಲೆ ಮೈ ಚಾಚಿ ಕೈಯನ್ನೇ ತಲೆದಿಂಬಾಗಿಸಿ ನಿದ್ದೆ ಹೋದನು. ಉಳಿದವರಿಗೆ ನಿದ್ದೆ ಹತ್ತಲಿಲ್ಲ. ಎಳೆಯ ನೀನಾ ಸ್ವಲ್ಪ ಅಂಜಿದಳು. ಆ ಕಾರಾಗೃಹ, ಅಗಾಧ ಕತ್ತಲು, ಹಿಂದಿನ ಘಟನೆ, ಮುಂದಿನ ಭವಿತವ್ಯ ಎಲ್ಲವೂ ಅವಳ ಕೋಮಲ ಅಂತಃಕರಣದಲ್ಲಿ ಒಂದು ರೀತಿಯ ಅಜ್ಞಾತ ಭಯವನ್ನು ಹುಟ್ಟಿಸಿದುವು. ಅವಳು ಭೀತಿಯಿಂದ ಚೆಚೋರಾಳ ಎದೆಯಲ್ಲಿ ತನ್ನ ತಲೆಯನ್ನಿಟ್ಟಳು ಚೆಚೋರಾಳು ತನ್ನ ಕೈಯಿಂದ ಅವಳನ್ನು ಆಲಂಗಿಸಿ ಇಬ್ಬರೂ ಒಬ್ಬರನ್ನೊಬ್ಬರು ಅಪ್ಪಿಕೊಂಡು ಕುಳಿತರು.

ಮಾಲಾನ್ಯಾಳು ಮಾತ್ರ ಇತರರಿಗಿಂತ ದೂರ ಕೂತಿದ್ದಳು. ಆಗಿ ಹೋದ ಯಾವ ಘಟನೆಗಳ ಕಡೆಗೂ ಅವಳ ಲಕ್ಷ್ಯವಿರಲಿಲ್ಲ. ತನ್ನ ಮನಸ್ಸನ್ನು ಕೊರೆಯುತ್ತಿದ್ದ ವಿಚಾರದಲ್ಲೇ ಅವಳು ಮಗ್ನಳಾಗಿದ್ದಳು. "ಒಂದು ವಾರ, ಅಲ್ಲಾ ಈವತ್ತಿಗೆ ಹತ್ತು ದಿನಗಳಾದುವು. ಅಹುದೊ ಅಲ್ಲವೊ? ಅಹುದಾದರೆ' ......... ಈ ಭಯಂಕರ ವಿಚಾರ ಮನಸ್ಸಿನಲ್ಲಿ ಬಂದೊಡನೆ

ಅವಳ ಹೃದಯವು ಒಂದೇಸವನೆ ಹಾರಾಡಹತ್ತಿತು. ನಾಡಿಗಳಲ್ಲಿ ನೆತ್ತರು ಜೋರಾಗಿ ಹರಿಯತೊಡಗಿತು.

ಲೆಕ್ಕ ತಪ್ಪಿರಬಹುದೆಂ ಏನೊ. ಪುನಃ ಎಣಿಸಿದಳು. ತಪ್ಪಿರಲಿಲ್ಲ. ಅದೇ ಹತ್ತು ದಿನಗಳು. ಹಿಂದಿನ ದಿನಗಳ ಲೆಕ್ಕ ಹಾಕುತ್ತಾ ಇದ್ದ ಅವಳ ಮನಸ್ಸಿನ ಮುಂದೆ ಆ ಘೋರ ದಿನದ ಭಯಂಕರ ಘಟನೆಗಳ ಚಿತ್ರ ಪುನಃ ಬಂದು ನಿಂತಿತು. ನರನಾಡಿಗಳಲ್ಲಿ ಕುದಿಯುವ ಸೀಸ ಹರಿದಂತೆ ಅಸಹ್ಯ ವೇದನೆಯಾಯಿತು. ಮೂಳೆಯ ಸಂದುಗಳೆಲ್ಲಾ ಮುರಿದಂತೆ ಅನಿಸಹತ್ತಿತು. ಇಂತಹ ಪರಿಸ್ಥಿತಿಯಲ್ಲಿ ಜೀವ ಉಳಿಯುವುದು ಅಸಾಧ್ಯವೆಂಬ ಭಾವನೆ ಉಂಟಾಯಿತು. ಆದರೆ ತನ್ನಂಥ ದುರ್ದೈವಿಯ ಮೇಲೆ ಸಾವಿಗಾದರೂ ದಯೆ ಎಲ್ಲಿಂದ ಬರಬೇಕು ? ಈ ಬರಿದಾದ ಕೊಠಡಿಯಲ್ಲಿ ಇತರ ಕೈದಿಗಳ ಮಧ್ಯೆ ಸಾಯುವುದು ಕೂಡ ಸುಲಭವಿರಲಿಲ್ಲ. ಗ್ರಾಮದ ಇಷ್ಟು ಹುಡಗಿಯರಲ್ಲಿ ಈ ಸಂಕಟ ತನ್ನ ಮೇಲೆ ಮಾತ್ರ ಬರಬೇಕೆ ? ಈಗ ತಾನೋರ್ವ ಮಹಾರೋಗಿ. ಎಲ್ಲರಂತೆ ಎಲ್ಲರೊಡನಿರಲು ಅಯೋಗ್ಯಳು.

ಏನೂ ಕಾಣದ ಕತ್ತಲು ಮಾಲಾನ್ಯಾಳಿಗೆ ಸುಖಕರವೆನಿಸಿತು. ಆದರೆ ಕೋಣೆಯಲ್ಲಿ ಕವಿದಿದ್ದ ಗಾಢಾಂಧಕಾರದಲ್ಲೂ ಆ ಮೂರು ಅಸಹ್ಯ ಮೋರೆಗಳು ಅವಳಿಗೆ ಕಂಡವು. ಕ್ಷೌರವಿಲ್ಲದ ಕುಟ್ಟಿಕಾಡಿನಂತೆ (Scrub-jungle) ಅಲ್ಪ ಸ್ವಲ್ಪ ಬೆಳೆದಿದ್ದ ಕೆಂಬಣ್ಣದ ಗಡ್ಡವುಳ್ಳ ಆ ಭೀಕರ ಮುಖಗಳ ಚಿತ್ರವನ್ನು ಅವಳ ಕಣ್ಣ ಮುಂದಿನಿಂದ ಅಳಿಸುವುದು ಎಷ್ಟೇ ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲ.

ಕೆಲವು ತಿಂಗಳ ಹಿಂದೆ ತನ್ನ ಪ್ರಿಯ ಐವಾನನೊಂದಿಗೆ ಕಳೆದ ರಾತ್ರಿಯ ನೆನಪು ಕ್ಷಣಕಾಲ ಚಿತ್ತಭಿತ್ತಿಯ ಮುಂದೆ ಹೊಳೆಯಿತು ಆ ಮೃದು ಹಾಸಿಗೆ, ಸುತ್ತಲಿಟ್ಟಿದ್ದ ಹೂವಿನ ಹೂಜಿಗಳು, ಆ ರಾತ್ರಿಯ ಆನಂದವೆಷ್ಟು! ಆದರೆ ಆಮೇಲೆ ಆ ದಿನ! ಹರಿದ ಹಾಸಿಗೆ, ಒಡೆದ ಹೂಜಿ, ಆ ಜರ್ಮನ ಸೈನಿಕರ ಒದರಾಟ, ನೆತ್ತರನ್ನೇ ಹೆಪ್ಪುಗಟ್ಟಿಸುವ ಅವರ ಹಿಡಿತ, ಇವೆಲ್ಲದರ ನೆನಪು ಸಹ ಭಯಂಕರವಾಗಿತ್ತು. ಮರೆಯಬೇಕೆಂದು ಎಷ್ಟೋ ಪ್ರಯತ್ನ ಪಟ್ಟಳು. ಆದರೆ ತನ್ನ ಸತೀತ್ವವು ನಷ್ಟವಾದ

ಆ ಘೋರ ಘಟನೆಗಳನ್ನು ಮನಸ್ಸಿನಿಂದ ಅಳಿಸುವುದೆಂದರೆ ಹೇಗೆ ?

ಆ ಗ್ರಾಮದ ಜನರು ಜರ್ಮನರ ಕೈಯಿಂದ ನಾನಾತರದ ಚಿತ್ರ ಹಿಂಸೆಯನ್ನು ಅನುಭವಿಸಿದ್ದರು. ಲಿವೊನ್ಯುಕನ ದೇಹವು ಫಾಶಿ-ಕಂಬ ದಿಂದ ಈಗಲೂ ನೇತಾಡುತ್ತಿತ್ತು. ಗರ್ಭಿಣಿ ಒಲೆನಾಳು ದಾರುಣ ನರಕ ಯಾತನೆಯನ್ನನುಭವಿಸಿದಳು. ಆದರೆ ಶತ್ರುವಿನ ಬೀಜವನ್ನು ಹೊಟ್ಟೆ ಯಲ್ಲಿ ಹೊರುವ ದಾರುಣ ದುಃಸ್ಥಿತಿಯು ತನ್ನ ಹೊರತು ಯಾರಿಗೂ ಬಂದಿರಲಿಲ್ಲ.

ಆಚೆಕಡೆಯ ಮೂಲೆಯಲ್ಲಿ ನೀನಾ ಪಾಲಾಂಚುಕಳು ಕಣ್ಣೀರು ಸುರಿಸುತ್ತಾ ಕುಳಿತಿದ್ದಳು. ಮಾಲಾನ್ಯಾಳಿಗೆ ಅವಳನ್ನು ನೋಡಿ ಸಿಟ್ಟು ಬಂತು. ಈ ಮೂರ್ಖಳು ಅಳುವುದೇತಕ್ಕೆ ? ಜರ್ಮನರು ಅವಳ ಮಾನ ಭಂಗ ಮಾಡಿರಲಿಲ್ಲ. ತಾನು ಅನುಭವಿಸಿದ ಭಯಂಕರ ಯಾತನೆಗಳ ಪೈಕಿ ಎಳ್ಳಷ್ಟು ಕೂಡ ಅವಳು ಅನುಭವಿಸಿದ್ದಿಲ್ಲ. ಮತ್ತೇಕೆ ಈ ಕೂಗಾಟ ? ಕೊಲ್ಲುವರೆಂದೇ ? ಅದು ತೀರ ಅಸಂಭವ ಶತ್ರುಗಳ ಕೈಯಿಂದ ಮೃತ್ಯು ವೊಂದೇ ಬಂದರೆ ತಮ್ಮ ದೊಡ್ಡ ಪುಣ್ಯವೆನ್ನಬೇಕು. ಜರ್ಮನರು ಅವರನ್ನು ಸುಮ್ಮನೆ ಕೊಲ್ಲುವಷ್ಟು ದಯಾಳುಗಳಲ್ಲ. ಮರಣಕ್ಕಿಂತಲೂ ಭೀಕರ ವಾದುದನ್ನು ಅವರು ತಮಗಾಗಿ ಯೋಜಿಸಿದ್ದಿರಬೇಕು.

ಪುನಃ ಆ ಕರಾಳ ದಿನದ ನೆನಪಾಯಿತು ಪುನಃ ಎಣಿಕೆ ಮಾಡಿದಳು. ಒಂದು, ಎರಡು, ಮೂರು..............ಹತ್ತು. ಸಂಶಯಕ್ಕೆ ಎಡೆಯೇ ಇರಲಿಲ್ಲ. ಧೀರ ಕೆಂಪು ಯೋಧನ ಧರ್ಮಪತ್ನಿಯಾದ ಅವಳು ಈಗ ತನ್ನ ಹೊಟ್ಟೆಯಲ್ಲಿ ಜರ್ಮನ ನಾಯಿಯ ಗರ್ಭವನ್ನು ಹೊತ್ತಿದ್ದಳು. ಮಾಲಾ ನ್ಯಾಳ ರಕ್ತವು ಕುದಿಯತೊಡಗಿತು. ಸಣ್ಣ ಸಣ್ಣ ಸುತ್ತಿಗೆಗಳಿಂದ ತನ್ನ ಮೈಯೊಳಗೆ ಯಾರೊ ಬಡೆಯುವಂತೆ ಮೈಯೆಲ್ಲಾ ನೋಯಹತ್ತಿತು. ಜರ್ಮನ ಗರ್ಭವನ್ನು ಪೋಷಿಸುವುದೆಂಬ ಕಾರಣದಿಂದ ತನ್ನ ದೇಹವೇ ಅವಳಿಗೆ ತಿರಸ್ಕರಣೀಯವೆನಿಸಿತು. ಹೊಟ್ಟೆಗೆ ಹಾಕಿದ ರೊಟ್ಟಿಯಿಂದ ಗರ್ಭವು ಬೆಳೆಯುವುದರಿಂದ ಹಸಿವಾದರೂ ಏನನ್ನೂ ತಿನ್ನಲಾರಳಾದಳು. ನಿದ್ದೆಯಿಂದ ಅದರ ಬೆಳವಣಿಗೆಗೆ ಸಹಾಯವಾಗುವುದೆಂಬ ಭಾವನೆಯಿಂದ

ಮಲಗುವುದು ಕೂಡ ಬೇಡವೆನಿಸಿತು. ಇನ್ನೂ ಹುಟ್ಟಲಿರುವ ಅಜ್ಞಾತ ಮಗು,-ಅದಕ್ಕೆ ಮಗುವೆನ್ನಲು ಅವಳು ತಯಾರಿರಲಿಲ್ಲ—ಶತ್ರುವಿನ ಬೀಜದಿಂದ ಹುಟ್ಟಿದ ಅದು ಮಗುವೇ? ಮಗ್ಗುಲಿನ ಕೋಣೆಯಿಂದ ಕೂಗು ಕೇಳಿಸುತ್ತಿರುವ ಒಲೆನಾಳ ಕೂಸಿಗಾದರೆ ಮಗುವೆನ್ನಬಹುದು. ಒಲೆನಾಳಿಗೆ ರೊಟ್ಟಿ ಕೊಡಲು ಹೋಗಿ ಜರ್ಮನರ ಗುಂಡಿಗೀಡಾದ ಆ ವೀರ ಬಾಲಕನಿಗೆ ಮಗುವೆನ್ನುವುದು ಸರಿ. ತಂದೆತಾಯಿಗಳಿಬ್ಬರೂ ಅಗಲಿದ ಚಿಚೋಲಾಳ ಮೂವರು ಹಸುಳೆಗಳು ನಿಜವಾಗಿಯೂ ಮಕ್ಕಳು. ಆದರೆ ತಾನು ಈಗ ಹೊಟ್ಟೆಯಲ್ಲಿ ಹೊತ್ತು ನಾಳೆ ಹಡೆಯಲಿರುವುದು ಮಗುವಲ್ಲ, ಜರ್ಮನ ಕುನ್ನಿ ಮರಿ. ಅದನ್ನು ಬೇರೆ ಮಾಡಲು ಯಾರಿಂದಲೂ ಅಸಾಧ್ಯ. ಅದು ಸತ್ತರೂ ಕೂಡ ತನ್ನ ರಕ್ತದಿಂದ ಒಂದು ಜರ್ಮನ ಜೀವಪೋಷಣೆ ಹೊಂದುತ್ತಿತ್ತು ಎಂಬುದನ್ನು ಮರೆಯುವುದು ಶಕ್ಯವಿಲ್ಲ. ಜರ್ಮನರಿಂದ ದೇಹ ಕೆಡಿಸಿಕೊಂಡವಳೆಂದು ಎಲ್ಲರೂ ತನ್ನ ಕಡೆಗೆ ಬೆರಳು ತೋರಿಸುವರು. ತನ್ನ ಉಬ್ಬಿದ ಹೊಟ್ಟೆಯನ್ನು ನೋಡಿ ಜರ್ಮನ ಕೂಸಿನ ತಾಯಿಯೆಂದು ಜನರು ತನ್ನಿಂದ ದೂರ ಸರಿಯುವರು

ಅವಳ ವಿಷಯ ಎಲ್ಲರೂ ಅರಿತಿದ್ದರು, ಹಾಗೂ ಪ್ರತಿಯೊಬ್ಬರೂ ಸಹಾನುಭೂತಿಯನ್ನು ತೋರಿಸುತ್ತಿದ್ದರು. ಸಂತೈಸುವ ಎರಡು ಮಾತುಗಳನ್ನಾಡಲು ಅಂದು ಪರಿಚಿತರೆಲ್ಲರೂ ಬಂದಿದ್ದರು. ಇದರ ಸೇಡನ್ನು ತೀರಿಸುವ ದಿನ ದೂರವಿಲ್ಲೆಂದು ಆಶ್ವಾಸನೆ ಎಲ್ಲರೂ ಕೊಟ್ಟಿದ್ದರು. ಆದರೆ ಅದು ಅಷ್ಟು ಸರಳವಿರಲಿಲ್ಲ. ಬೇರೆ ಎಲ್ಲದರ ಸೇಡು ತೀರಿಸಲು ಸಾಧ್ಯವಿತ್ತು. ಪಾಶ್ಚಿಕ, ಲೆವೊನ್ಯುಕ್, ಒಲೆನಾ, ನೆಲಸಮಗೈದ ಮನೆ, ಕೊಲ್ಲಲ್ಪಟ್ಟ ಕೂಸು ಎಲ್ಲದರ ಪ್ರತೀಕಾರವನ್ನು ವಿಜಯೋನ್ಮುಖ ಕೆಂಪುಸೈನ್ಯವು ಇಂದಲ್ಲ ನಾಳೆ ಮಾಡಿಯೇ ಮಾಡುವುದು. ಆದರೆ, ಅವಳ ಮೇಲೆ ಜರ್ಮನರು ಮಾಡಿದ ಅತ್ಯಾಚಾರ, ಮೇಲಾಗಿ ಆ ಅತ್ಯಾಚಾರದ ಪರಿಣಾಮ ಇದರ ಸೇಡನ್ನು ತೀರಿಸುವುದು ಶಕ್ಯತೆಯ ಮೇರೆ ಮೀರಿದ ವಿಷಯ. ಹೊರಗೆ ಎಷ್ಟೇ ಸಹಾನುಭೂತಿಯನ್ನು ತೋರಿದರೂ ಊರಿನ ಇತರ ಹೆಂಗಸರು ಅವಳನ್ನು ನೇರಾಗಿ ನೋಡುತ್ತಿರಲಿಲ್ಲವೆಂಬುದು ಅವಳಿಗೆ

ಅನಿಸುತ್ತಿತ್ತು. ಆ ದಿನದ ಘೋರ ಘಟನೆಯು ಅವಳ ಮತ್ತು ಇತರರ ನಡುವೆ ಹಾಕಿದ ಅಡ್ಡಗೋಡೆಯಾಗಿತ್ತು.

ಅಕ್ರಮಸಂಭೋಗ ಮಾಡಿದ ಮೇಲೆ ತಮ್ಮ ಪಾಶವೀಕೃತ್ಯಕ್ಕೆ ಬಲಿಯಾದವರನ್ನು ಜರ್ಮನರು ಗುಂಡಿಗೆ ಗುರಿಮಾಡುತ್ತಾರೆಂದು ಅವಳು ಕೇಳಿದ್ದಳು. ಆದರೆ ಅವಳ ದುರ್ದೈವದಿಂದ ಅವಳ ವಿಷಯದಲ್ಲಿ ಆ ಮೂರು ಪಶುಗಳು ಅಷ್ಟು ದಯೆಯನ್ನೂ ತೋರಲಿಲ್ಲ. ಅದೂ ಸಾಲ ದೆಂಬುದಕ್ಕೆ ಒಂದು ಜರ್ಮನ ಪ್ರಾಣಿಯನ್ನು ಹೊಟ್ಟೆಯಲ್ಲಿ ಹೊತ್ತು ತನ್ನ ರಕ್ತದಿಂದ ಅದನ್ನು ಪೋಷಿಸುವ ಭಯಂಕರ ಅವಸ್ಥೆಯನ್ನು ಅವಳ ಪಾಲಿಗೆ ಕೊಟ್ಟು ಹೋಗಿದ್ದರು.

ಐವಾನನಿಗೆ ಇದು ತಿಳಿದರೆ ? ಐವಾನನು ಯುದ್ಧಕ್ಕೆ ಹೋದುದರಿಂದ ಅವರ ದಾಂಪತ್ಯಜೀವನವು ಕೆಲವೇ ದಿನಗಳಲ್ಲಿ ಕೊನೆಗಂಡಿದ್ದರೂ ಅವನು ಅವಳನ್ನು ಅತಿಯಾಗಿ ಪ್ರೀತಿಸುತ್ತಿದ್ದನೆಂಬುದರಲ್ಲಿ ಅವಳಿಗೆ ತಿಲಮಾತ್ರವೂ ಸಂದೇಹವಿರಲಿಲ್ಲ. ಆದರೆ ತನ್ನ ಈಗಿನ ಅವಸ್ಥೆಯು ಅವನಿಗೆ ತಿಳಿದರೆ ? ಜರ್ಮನ ಕುನ್ನಿಯನ್ನು ಹೊಟ್ಟೆಯಲ್ಲಿ ಹೊತ್ತವಳನ್ನು ರಶ್ಯನ್ ಯೋಧನಾದ ಅವನು ಹತ್ತಿರ ಬರಗೊಡುವನೇ ?

ಅವನೊಡನೆ ಕಳೆದ ಎಷ್ಟೋ ರಾತ್ರಿಗಳಿಂದಲೂ ಆಗದಿದ್ದ ಪರಿಣಾಮ ಈ ಅರೆತಾಸಿನ ಪೈಶಾಚಿಕ ಬಲತ್ಕಾರದಿಂದ ಆಗಬೇಕೆಂದರೆ ಅವಳ ದುರದೃಷ್ಟವು ಎಷ್ಟು ಕಠಿಣವಾಗಿರಬೇಕು ?

ಊರಲ್ಲಿ ಅವಳು ಸುಂದರಿಯೆಂದು ಹೆಸರಾಗಿದ್ದಳು ಯುವಕರು ಅವಳೊಡನೆ ಎರಡು ಮಾತು ಆಡಲು, ಅವಳೊಟ್ಟಿಗೆ ಒಂದು ನಿಮಿಷ ನಗಲು ಹಾತೊರೆಯುತ್ತಿದ್ದರು. ಅವಳು ರಸ್ತೆಯಲ್ಲಿ ಹೋಗುವಾಗ ಕಿಟಕಿ, ಬಾಗಿಲುಗಳ ಸಂದಿನಿಂದ ಜನರು ಅವಳನ್ನೇ ನೋಡುತ್ತಿದ್ದರು ಆದರೆ ಈಗ.......... ಅವಳ ನಿಜಸ್ಥಿತಿಯು ತಿಳಿದರೆ ಅವಳನ್ನು ಅಭಿಮಾನ, ಪ್ರಶಂಸೆ ಗಳಿಂದ ನೋಡುತ್ತಿದ್ದವರೇ ಈಗ ಮಹಾರೋಗ ಹಿಡಿದವಳಂತೆ ಅವಳನ್ನು ದೂರೀಕರಿಸದೆ ಇರುವರೇ ? ನಾಳೆ ಪ್ರಸವಕಾಲ ಸಮೀಪಿಸಿದಾಗ.... .. .. ಒಲೆನಾಳಂತೆ ಅವಳು ಯಾರೊಬ್ಬರ ಸಹಾಯವಿಲ್ಲದೆ ಆ ದಾರುಣ ಅವಸ್ಥೆ

ಯನ್ನು ದಾಟಬೇಕಾಗುವುದು. ಆದರೆ ಒಲೆನಾಳಿಗೆ ಜನರ ಸಹಾನುಭೂತಿ ಯಾದರೂ ಇತ್ತು. ಅಲ್ಲದೆ ತನ್ನ ಕಾರ್ಯದಲ್ಲಿ ನೈತಿಕ ಧೈರ್ಯವಿತ್ತು. ಮೇಲಾಗಿ ಅವಳು ಹಡೆದದ್ದು ರಶ್ಯನ್ ವೀರಕುವರನನ್ನು. ತನಗೆ, ಜರ್ಮನ ನಾಯಿಮರಿಯನ್ನು ಹಡೆಯುವವಳಿಗೆ ನೈತಿಕ ಧೈರ್ಯವೆಲ್ಲಿಯದು? ನಿಜಸಂಗತಿ ತಿಳಿದವರಿಗೆ ಅವಳ ಕುರಿತು ಕನಿಕರದ ಬದಲು ತೀರಾ ತಿರಸ್ಕಾರ ಹುಟ್ಟದಿರಲಾರದು.

ಜಾಹೀರುಮಾಡಿದಂತೆ ಜರ್ಮನರು ಅವರನ್ನು ಗಲ್ಲಿಗೇರಿಸಿದರೆ! ಹಾಗಾದರೆ ಇದೆಲ್ಲಾ ತಪ್ಪುತ್ತಿತ್ತು. ಆದರೆ ತಾನು ಅಷ್ಟು ಸುದೈವಿಯಲ್ಲ ಹುಡುಗನ ಮೃತದೇಹ ಜರ್ಮನರಿಗೆ ಎಂದಿಗೂ ಸಿಗುವಹಾಗಿಲ್ಲವೆಂಬುದೆನ್ನೋ ನಿಜ. ಹಾಗೂ ಧಾನ್ಯದ ಒಂದೂ ಕಾಳೂ ಅವರಿಗೆ ಯಾರೂ ಕೊಡಲಾರರು. ಅಂತಹ ಪರಿಸ್ಥಿತಿಯಲ್ಲಿ ಜಾಮೀನಾಗಿ ಬಂಧಿತರಾದ ತನಗೂ ಇತರ ನಾಲ್ಕು ಜನರಿಗೂ ಸಾವು ಖಂಡಿತವೇ. ಹಾಗಿದ್ದರೂ, ಹೇಗೆಂದು ಹೇಳಲಸಾಧ್ಯವಾದರೂ, ತಾನು ಸಾಯುವುದಿಲ್ಲವೆಂಬ ಖಾತ್ರಿಯು ಅವಳನ್ನು ಬಾಧಿಸುತ್ತಿತ್ತು.

ಇತ್ತ ನೀನಾಳು ಅಳುವನ್ನು ನಿಲ್ಲಿಸಲಿಲ್ಲ. ಅವಳ ಮೈಯನ್ನು ಸವರುತ್ತ ಕುಳಿತಿದ್ದ ಚೆಚೋರಾಳಿಗೆ ಬೇಸರಹತ್ತಿತು.

“ಯಾಕೆ ಅಳುತ್ತೀ? ಸಾವಿಗೆ ಅಂಜಲು ನಾಚಿಕೆಯಾಗುವುದಿಲ್ಲವೇ, ನಿನಗೆ?” ಎಂದು ಕೇಳಿದಳು ಚೆಚೋರಾ

“ಅಳಬಾರದೆಂದು ನನಗೂ ಅನಿಸುತ್ತದೆ. ಆದರೆ ಎಷ್ಟೇ ಪ್ರಯತ್ನ ಪಟ್ಟರೂ ಅಳುವನ್ನು ತಡೆಯಲಾಗುವುದಿಲ್ಲ.” ಎಂದಳು ಎಳೇ ನೀನಾ.

ಹೆಸರಿನಂತೆಯೇ ಅವಳ ಸ್ವರವೂ ತನ್ನ ಮಗಳ ಸ್ವರದಂತೆಯೇ ಇದ್ದು ಚೆಚೋರಾಳಿಗೆ ತನ್ನ ಮಗಳ ನೆನಪನ್ನು ತಂದುಕೊಟ್ಟಿತು. ಮಕ್ಕಳನ್ನು ನೋಡಬೇಕೆಂಬ ಆಸೆಯು ಒಮ್ಮೆಲೆ ಅವಳನ್ನು ಪೀಡಿಸ ಹತ್ತಿತು. ಅವರು ಈಗ ಎಲ್ಲಿದ್ದಾರೊ, ಏನು ಮಾಡುತ್ತಾರೊ, ದೇವರೇ ಬಲ್ಲ. ಮಾತುಕೊಟ್ಟಂತೆ ಗಾಲ್ಯಾಳು ಅವರನ್ನು ತನ್ನಲ್ಲಿಗೆ ಕರೆದುಕೊಂಡು ಹೋಗಿದ್ದಾಳೊ ಇಲ್ಲವೊ? ಅವಳು ಕರೆದುಕೊಂಡು ಹೋಗಿರದಿದ್ದರೆ ತನ್ನ

ಮಕ್ಕಳ ಗತಿ ಏನಾದೀತು? ಈ ವಿಚಾರ ಬಂದೊಡನೆ ಅವಳ ಹೃದಯ ಕ್ರಿಯೆಯೇ ನಿಂತಂತಾಯಿತು. ಅರೆಕ್ಷಣದಲ್ಲಿ ಹಾಗಾಗಲಿಕ್ಕಿಲ್ಲವೆಂದು ಧೈರ್ಯವನ್ನು ತಂದುಕೊಂಡಳು. ಗಾಲ್ಯಾಳು ರಶ್ಯನ್ ಮಾತೆ. ತಬ್ಬಲಿ ಮಕ್ಕಳನ್ನು ಎಂದೂ ಕೈಬಿಡುವವಳಲ್ಲ. ಆದರೆ ಈ ಎಲ್ಲಾ ಮಕ್ಕಳ ಹೊಟ್ಟೆಗೆ ಹಾಕುವಷ್ಟು ಹಿಟ್ಟಾದರೂ ಅವಳಲ್ಲಿ ಇದ್ದೀತೇ? ಅಲ್ಲದೆ, ತನ್ನ ಮಕ್ಕಳು ಸರಿಯಾಗಿ ನಡಕೊಳ್ಳುತ್ತವೊ ಏನೊ? ಕಡೇ ಮಗ ಒಸ್ಯಾ ಬಹಳ ಜಗಳಗಂಟ. ಯಾವಾಗಲೂ ಬೇರೆ ಮಕ್ಕಳೊಡನೆ ಜಗಳ ಮಾಡಿ ಹೊಡೆತ ತಿಂದು ಮನೆಗೆ ಬರುತ್ತಿದ್ದನು ಅವನು ಸಾಶಾನೊಡನೆ ಜಗಳಾಡುತ್ತಾ ಇದ್ದರೆ ಏನು ಮಾಡುತ್ತಾಳೊ!

ಮುದುಕ ಎವ್ದೊಕಿಮನು, ಗೊರಕೆ ಹೊಡೆಯುತ್ತಿದ್ದ ಗ್ರೊಖಾಚನ ಕಡೆಗೆ ಬೆರಳು ತೋರಿಸಿ "ಹ್ಯಾಗೆ ನೈಮರೆತು ಮಲಗಿದ್ದಾನೆ ನೋಡಿರಿ?" ಎಂದನು. ತನ್ನ ತಬ್ಬಲಿ ಮಕ್ಕಳ ವಿಚಾರವನ್ನು ಮರೆಯಲು ಯತ್ನಿಸುತ್ತಿದ್ದ ಚೆಚೋರಾಳು "ನೀನು ಮಲಗುವುದಿಲ್ಲೇನು ಅಜ್ಜಾ?" ಎಂತ ಕೇಳಿದಳು.

"ನಾನು ಮುದುಕ. ಎರಡು, ಮೂರು ತಾಸಿಗಿಂತ ಹೆಚ್ಚು ನಿದ್ದೆಯೇ ಹತ್ತುವುದಿಲ್ಲ." ಎಂದನು.

"ನಾವು ಬಂದು ಬಹಳ ಹೊತ್ತಾಯಿತೇ?" ನೀನಾಳು ದಿಗಿಲು ಬಿದ್ದು ಕೇಳಿದಳು.

"ಯಾರಿಗೆ ಗೊತ್ತು? ಇಲ್ಲಿ ಕತ್ತಲು. ಕೋಣೆಯಲ್ಲಿ ಕುಳಿತಾಗ ಹೊತ್ತು ಮೂಡಿದ್ದೂ ಮುಳುಗಿದ್ದೂ ಒಂದೂ ತಿಳಿಯುವುದಿಲ್ಲ. ಆದರೆ ಈಗ ರಾತ್ರಿಯಾಗಿರಬೇಕು. ಅಗೊ ನೋಡಿ, ಆಚೆಯ ಕಾವಲು ಕೋಣೆಯಲ್ಲಿ ದೀಪ ಕಾಣುತ್ತದೆ." ಎಂದನು ತೀಕ್ಷ್ಣ ದೃಷ್ಟಿಯ ಮುದುಕ ಎವ್ದೊಕಿಮು.

"ಹೊತ್ತು ಮೂಡಿದರೇನು, ಮುಳುಗಿದರೇನು, ನಮಗೆ ಎಲ್ಲವೂ ಒಂದೇ. ಇಲ್ಲಿ ಇರುವಷ್ಟು ಕಾಲ ನಮ್ಮದು. ಆಮೇಲೆ ಇದೆಯಲ್ಲಾ ಅನಂತನಿದ್ರೆ."

"ನಮ್ಮ ಮಂದಿ ಬೇಗ ಬರಲಿಕ್ಕಿಲ್ಲವೇ?" ಬಿಡುಗಡೆಯ ಆಸೆಯನ್ನು ಇನ್ನೂ ಬಿಡದಿದ್ದ ನೀನಾ ಹೆದರಿದ ಧ್ವನಿಯಲ್ಲಿ ಮೆಲ್ಲನೆ ಕೇಳಿದಳು.

"ಜರ್ಮನರು ನಮಗೆ ಮೂರೇ ದಿವಸಗಳ ಅವಧಿ ಕೊಟ್ಟಿದ್ದಾರೆ, ಮರೆಯಬೇಡ." ಚೆಚೋರಾ ಎಚ್ಚರಿಕೆ ಕೊಟ್ಟಳು

"ಈ ಅವಧಿ ಮುಗಿಯುವುದರೊಳಗೆ ಅವರು ಬರಲಿಕ್ಕಿಲ್ಲವೇ ?" ಬದುಕಲು ಆತ್ಯಾಸೆಪಟ್ಟು ನೀನಾ ಅಂದಳು.

"ಈ ಭಯಂಕರ ಬಿರುಗಾಳಿಯಲ್ಲಿ, ಇಷ್ಟು ದಟ್ಟವಾಗಿ ಹಿಮ ಬಿದ್ದಿರುವಾಗ ಅವರು ಬರುವುದಾದರೂ ಹೇಗೆ? ಅವರ ತೋಪು, ಮಶಿನ್‌ಗನ್ ಎಲ್ಲಾ ಸಾಗಿಸಲು ಈ ಹವೆಯಲ್ಲಿ ಸಾಧ್ಯವಿದೆಯೇ? ಆ ಆಸೆ ಬಿಟ್ಟುಬಿಡು" ಚೆಚೋರಾ ಹೇಳಿದಳು.

ಬಾಯಿಯಿಂದ ಹೀಗೆ ಹೇಳಿದರೂ ಅವರು ಬರಬಹುದೆಂಬ ಅಪೇಕ್ಷೆಯು ಚೆಚೋರಾಳಿಗೂ ಇಲ್ಲದಿರಲಿಲ್ಲ. ಎಷ್ಟೇ ಜೋರಿನ ಬಿರುಗಾಳಿ ಎದ್ದರೂ ಎಂತಹ ಕಠಿಣ ಹಿಮ ಬಿದ್ದರೂ ನಾಡಿನ ಬಿಡುಗಡೆಗಾಗಿ ಹೋರಾಡುವ ವೀರ ರಶ್ಯನ್ ಯೋಧರು ಹಿಮ್ಮೆಟ್ಟಲಾರರೆಂಬುದು ಚೆಚೋರಾಳೂ ತಿಳಿದಿದ್ದಳು. ನೀನಾಳ ಎಣಿಕೆ ಸರಿಯಾದುದು. ಅವರಿಗೂ ಮರಣಕ್ಕೂ ನಡುವೆ ಇರುವ ಈ ಮೂರು ದಿನಗಳಲ್ಲಿ ಅವರು ಅಲ್ಲಿಗೆ ಮುಟ್ಟಲೂಬಹುದೆಂದು ಅವಳಿಗೆ ಅನಿಸಿತು "ಬರಬಹುದು, ನಮ್ಮ ಕೊನೆಯ ಅವಧಿಯು ಮುಗಿಯುವ ಮೊದಲೇ ಬರಬಹುದು" ಎಂದು ಅವಳೂ ಹೇಳಹತ್ತಿದಳು.

ನೀನಾಳ ಮುಖವು ಆನಂದದಿಂದ ಅರಳಿತು. "ನೀನೂ ಅದನ್ನು ನಿಶ್ಚಯವಾಗಿಯೂ ನಂಬುವೆಯಷ್ಟೇ?" ಎಂದು ಕೇಳಿದಳು. "ಬಂದೇ ಬರುವರು. ಇಷ್ಟರೊಳಗೇನೇ ಬರಬೇಕಾಗಿತ್ತು" ಮುದುಕ ಎವ್ಡೊಕಿಮನಂದ

"ಬಂದರೆ ಅವರಿಗೆ ನಾವಿರುವ ಜಾಗ ಯಾವುದೆಂದು ಗೊತ್ತಾದೀತಲ್ಲಾ?" ಎಲ್ಲಾದರೂ ಗೊತ್ತಾಗದೆ ಪ್ರಮಾದವಾದೀತೆಂಬ ಅಂಜಿಕೆಯಿಂದ ನೀನಾ ಮೆಲ್ಲನೆ ಕೇಳಿದಳು

"ಆ ಯೋಚನೆ ಬೇಡ ನಿನಗೆ. ನಾವು ಇಲ್ಲಿ ಇದ್ದೇವೆಂತ ಇಡೀ ಊರಿಗೆ ಗೊತ್ತಿದೆ. ಅಂದ ಬಳಿಕ ಅವರಿಗೆ ಗೊತ್ತಾಗದಿದ್ದೀತೇ? ಯಾವುದಕ್ಕೂ ಬರಲಿ ಅವರು." ಚೆಚೋರಾ ಅಂದಳು.

ಉಳಿದವರು ಇಂತಹ ವಿಚಾರಗಳಲ್ಲಿ ಮಗ್ನರಾಗಿದ್ದಾಗ, ಮಾಲಾನ್ಯಾಳು ಮಾತ್ರ ಅವರಿಂದ ದೂರ ಒಬ್ಬಳೇ ಒಂದು ಮೂಲೆಯಲ್ಲಿ ಬಾಯಿ ತೆರೆಯದೆ ಕುಳಿತಿದ್ದಳು. ನೀನಾಳಿಗಾಗಲಿ ಬಾಳಿನಲ್ಲಿ ಅರ್ಥವಿತ್ತು ಅಂತೆಯೇ ಅವರು ತಮ್ಮನ್ನು ಉಳಿಸಲು ಬರುವ ರಶ್ಯನ್ ಯೋಧರ ಆಗಮನವನ್ನು ನಿರೀಕ್ಷಿಸುತ್ತಿದ್ದರು ಆದರೆ ತನ್ನನ್ನು ಉಳಿಸಲು ಅವರಿಂದಲೂ ಸಾಧ್ಯವಿರಲಿಲ್ಲ ಜರ್ಮನ ಕುನ್ನಿಯನ್ನು ಹೊಟ್ಟೆಯಲ್ಲಿ ಹೊರುವ ತನಗೆ ಬದುಕುವ ಹಕ್ಕಾದರೂ ಎಲ್ಲಿಯದು ? ರಶ್ಯನ್ ಸೇನೆಯು ಮರಳಿ ಬಂದ ಮೇಲೆ ಮೃತಪ್ರಾಯವಾಗಿದ್ದ ಊರು ತಿರುಗಿ ಚೇತನಗೊಳ್ಳುವುದು ಹಳ್ಳಿಯ ಹುಡುಗೆಯರು ನಗೆಮೊಗದಿಂದ ಸೈನಿಕರನ್ನು ಸ್ವಾಗತಿಸುವರು. ಆ ಎಲ್ಲ ಮನೆಗಳಲ್ಲೂ ಸಂತೋಷದ ಸಂಭ್ರಮವು ಕಂಡುಬರುವುದು ತಾನು ಮಾತ್ರ ಹಿಗ್ಗಿನ ಸುಗ್ಗಿಯಲ್ಲಿ ತನ್ನ ಅವಲಕ್ಷಣಮೋರೆಯನ್ನು ಯಾರಿಗೂ ತೋರಿಸುವಂತಿಲ್ಲ ತನ್ನನ್ನು ನೋಡಿದೊಡನೆ ಎಲ್ಲರೂ ದೂರ ಸರಿಯ ಬಹುದು. ತಾನು ದೃಷ್ಟಿಗೆ ಬಿದ್ದೊಡನೆ ತಮ್ಮ ಆನಂದದ ಕುಣಿತವನ್ನು ನಿಲ್ಲಿಸಿಬಿಡಬಹುದ . ವಿಜಯದ ಹಿಗ್ಗಿನ ಹಸ್ತಾಂದೋಲನಕ್ಕಾಗಿ ಯಾರೂ ತನಗೆ ಕೈನೀಡಲಾರರು ಇತರರ ವಿಚಾರವಂತಿರಲಿ, ಐವಾನನು ಕೂಡ ತನ್ನಲ್ಲಿಗೆ ಬರಲಾರ ಊರಿಗೆ ಬಂದಾಗ ಅವನಿಗೆ ಎಲ್ಲ ವಿಷಯ ತಿಳಿಯದೆ ಇರದು ಅಂದ ಬಳಿಕ ಅವನು ತನ್ನನ್ನು ಕಣ್ಣಿನಿಂದ ಕೂಡಾ ನೋಡಲಿಕ್ಕಿಲ್ಲ ಎದುರಿಗೆ ಬಂದರೆ ವೈರಿಯಿಂದ ಮೈಯನ್ನು ಮುಟ್ಟಿಸಿಕೊಂಡವಳೆಂದು ತಿರಸ್ಕಾರದಿಂದ ನೆಲದ ಮೇಲೆ ಉಗುಳಿ ದೂರ ಹೋಗುವನು.

ಊರ ಜನರು ತನ್ನೊಡನೆ ಹೇಗೆ ವರ್ತಿಸುವರೆಂಬುದರ ಪೂರ್ವ ಚಿಹ್ನಗಳು ಈಗಲೇ ಕಾಣುತ್ತಿದ್ದುವು. ತನ್ನಂತೆಯೇ ಕೈದಿಗಳಾದರೂ ಚೆಚೋರಾ, ಒಲ್ಗಾ, ಎವ್ದೋಕಿಮ ಇವರೆಲ್ಲರೂ ತನ್ನಿಂದ ದೂರ ಕುಳಿತಿದ್ದರು. ಇಂತಹ ನಿರಾಶಾವಾದಿ ವಿಚಾರಗಳಲ್ಲೇ ಮಗ್ನಳಾದ ಮಾಲಾನ್ಯಾಳು ಕೋಣೆಗೆ ಬಂದ ಮೇಲೆ ತಾನು ಅವರೊಡನೆ ಮಾತಾಡದೆ ತಾನಾಗಿಯೇ ಅವರಿಂದ ದೂರಕ್ಕೆ ಹೋಗಿ ಕುಳಿತದ್ದನ್ನು ಮರೆತಳು.

ರೂಪದಲ್ಲಷ್ಟೇ ಅಲ್ಲ, ಸಾಂಘಿಕ ಕೃಷಿಕ್ಷೇತ್ರದಲ್ಲಿ ದುಡಿಯುವುದರಲ್ಲೂ ತನಗೆ ಸರಿಯಾದ ಹುಡುಗಿಯರು ಆ ಊರಲ್ಲಿ ಯಾರೂ ಇರಲಿಲ್ಲ. ಸೌಂದರ್ಯಕ್ಕೆ ಸಹಜವಾದ ಅಭಿಮಾನದಿಂದ ತಾನು ಅಡ್ಡಾಡುವಾಗ ಇತರ ಎಲ್ಲಾ ಹುಡುಗಿಯರಂತೆ ನೀನಾಳೂ ಅಸೂಯೆಪಟ್ಟಿದ್ದಳು. ಈಗ ನೀನಾಳಂಥವಳಿಗೂ ಭವಿಷ್ಯವಿದೆ. ಯಾಕೆಂದರೆ ಜರ್ಮನರು ಅವಳ ಮೈಮುಟ್ಟಿರಲಿಲ್ಲ. ಯುದ್ಧ ಮುಗಿದೊಡನೆ ಅವಳ ಪ್ರಿಯಕರ ಒಸ್ತಾಫನು ಬರುವನು. ಮದುವೆಯಾಗಿ ಸುಖದಿಂದ ಅವರು ಹೊಸ ಸಂಸಾರವನ್ನು ತೊಡಗುವರು. ಊರ ನಡುವಿನ ಚೌಕದಲ್ಲಿ ತೂಗಾಡುತ್ತ ಲಿದ್ದ ಲೆವೊನ್ಯೂಕನ ಹೆತ್ತವರಾದರೂ ತಮ್ಮ ಉಳಿದ ಮಕ್ಕಳ ಸುಖದಲ್ಲಿ ಅವನ ವಿರಹವನ್ನು ಇಂದಲ್ಲ ನಾಳೆ ಮರೆಯುವರು ಯುದ್ಧೋತ್ತರದ ಪುನರ್ರಚನೆಯು ಎಲ್ಲರ ಜೀವನದಲ್ಲಿ ಒಂದಲ್ಲ ಒಂದು ರೀತಿಯಿಂದ ಆಗಿಯೇ ಆಗುವುದು. ತನ್ನ ಜೀವನದಲ್ಲಿ ಮಾತ್ರ ಪುನರ್ರಚನೆಯ ಆಸೆಯೇ ಇಲ್ಲ. ತಾನು ಅಷ್ಟು ರೂಪವತಿಯಾಗಿರಲಿಲ್ಲವಾದರೆ ವಿಜಯದ ಆನಂದೋತ್ಸವದಲ್ಲಾದರೂ ಸೇರಲು ಸಾಧ್ಯವಿತ್ತು. ಈಗ ತನ್ನ ಪಾಲಿಗೆ ಆದೂ ಇಲ್ಲದಾಯಿತು.

ಅವಳಿಗೆ ಗೊತ್ತಾಗದಂತೆ ಮಾಲಾನ್ಯಾಳ ಬಾಯಿಯಿಂದ ದೀರ್ಘ ನಿಟ್ಟುಸಿರೊಂದು ಹೊರಬಿತ್ತು. ಅವಳು ಮಲಗಿರಬೇಕೆಂದು ಈ ವರೆಗೆ ಎಣಿಸಿದ್ದ ಚೆಚೋರಾಳು ಇದನ್ನು ಕೇಳಿ "ಮಾಲಾನ್ಯಾ, ನೀನು ಮಲ ಗಿಲ್ಲವೇ?" ಎಂತ ಕೇಳಿದಳು ಇಲ್ಲದ ತಿರಸ್ಕಾರವನ್ನು ಚೆಚೋರಾಳ ಸ್ವರದಲ್ಲಿ ಕಲ್ಪಿಸಿ ಮಾಲಾನ್ಯಾ ಸಿಟ್ಟಿನಿಂದ ಹೇಳಿದಳು, "ನಾನು ಮಲಗದಿದ್ದರೆ ನಿಮಗೆ ಬಂದದ್ದೇನು?"

"ಅಲ್ಲ ಸುಮ್ಮನೆ ಕೇಳಿದೆ." ಚೆಚೋರಾ ಅಂದಳು.

"ಕೇಳಬೇಕಾದ್ದೇನೂ ಇಲ್ಲ. ನನ್ನ ವಿಷಯ ಯಾವ ಕುತೂಹಲವೂ ಬೇಡ ನಿಮಗೆ."

"ರೇಗುವೆ ಏಕೆ? ನಮ್ಮೆಲ್ಲರ ಸ್ಥಿತಿಯು ಒಂದೇ ಅಲ್ಲವೇ?" ಮಾಲಾ ನ್ಯಾಳು ಸಿಟ್ಟಿನ ಹುಸಿನಗುವನ್ನು ನಕ್ಕಳು.

" ಒಂದೇ ಸ್ಥಿತಿ ! ಹ್ಞ ಹ್ಞ, ನನ್ನ ಸ್ಥಿತಿಯು ನಿಮ್ಮೆಲ್ಲರದಕಿಂತ ಬೇರೆಯೇ. "

" ಅದು ದುರ್ದೈವ ಅಥಕ್ಕೆ ನಾವೇನು ಮಾಡಬಲ್ಲೆವು ?" ಸಹಾನುಭೂತಿಯ ಸ್ವರದಲ್ಲಿ ಚೆಚೋರಾ ಹೇಳಿದಳು.

ಎಲ್ಲರೂ ತನ್ನನ್ನು ತುಚ್ಛೀಕರಿಸುತ್ತಾರೆಂಬ ಭ್ರಾಮಕ ಕಲ್ಪನೆಯಲ್ಲೇ ಮುಳುಗಿ ಹೋದ ಮಾಲಾನ್ಯಾಳಿಗೆ ಈ ಮಾತುಗಳಿಂದ ಒಳಗೊಳಗೆ ಎಲ್ಲರ ಕುರಿತು ಕುದಿಯುತ್ತಿದ್ದ ಸಿಟ್ಟು ಇನ್ನಷ್ಟು ನೆತ್ತಿಗೇರಿತು. " ಇಲ್ಲಿರುವಷ್ಟು ಕಾಲ ನೀವು ನಾಲಿಗೆ ಬಿಗಿಬಿಡಿದು ಸುಮ್ಮನೆ ಕುಳಿತರೆ ತುಂಬಾ ಉಪಕಾರ " ಎಂದಳು.

" ಅವಳೊಡನೆ ಮಾತಾಡಬೇಡ, ಸಿಟ್ಟಿನ ಸ್ವಭಾವ ಅವಳದು " ಎಂದು ನೀನಾ ಮೆಲ್ಲನೆ ಚೆಚೋರಾಳಿಗೆ ಹೇಳಿದಳು

ಮಾಲಾನ್ಯಾಳಿಗೆ ಇದು ಕೇಳಿಸಿತು.

" ಹೌದು, ನನ್ನೊಡನೇಕೆ ಮಾತಾಡುವುದು ? ನಾನು ಸಿಟ್ಟಿನ ಸ್ವಭಾವದವಳು. ನೀನು ಮಾತ್ರ ಕೋಪವನ್ನೇ ಅರಿಯದ ಮೊದ್ದು ಹುಡುಗಿ " ಅಂದಳು

ಮಾತು ಅಲ್ಲಿಗೆ ನಿಂತಿತು. ತನ್ನ ನಗುವಿನಿಂದ ಎಲ್ಲರಲ್ಲೂ ಸಂತೋಷದ ಸುಗ್ಗಿಯನ್ನು ಬೀರುತ್ತಿದ್ದ ತಾನು ಇಂದು ಸಿಟ್ಟಿನ ಸ್ವಭಾವದವಳೆಂದು ಸಂಭಾವಣೆಗೂ ಅಯೋಗ್ಯಳಾದೆ. ನಗುತ್ತಲಿದ್ದಾಗ ತೆಗೆದ ತನ್ನ ಫೋಟೊ ಗ್ರಾಮದ ವಾರ್ತಾಪತ್ರಿಕೆಯಲ್ಲಿ ಪ್ರಕಟವಾಗಿದ್ದರ ನೆನಪು ಮಾಲಾನ್ಯಾಳಿಗೆ ಬಂದಿತು. ಸಾಂಘಿಕ ಕೃಷಿಕ್ಷೇತ್ರದ ದುಡಿಮೆಯಲ್ಲಿ ಎಲ್ಲ ಹುಡುಗಿಯರಿಗಿಂತ ಅಗ್ರಸ್ಥಾನವನ್ನು ಪಡೆದಿದ್ದಳಾಕೆ. ಆಗ, ಅಂದು ಅನುಭವಿಸಿದ್ದ ಅಭಿನಂದನೆಯ ಆಲಿಂಗನಗಳೆಷ್ಟು, ಹರ್ಷದ ಹಸ್ತಾಂದೋಲನಗಳೆಷ್ಟು! ಆದರೆ ಇಂದು ?

ಹೊರಗಡೆ ಏನೊ ಬಿದ್ದ ಸದ್ದಾಯಿತು ಗೊರಕೆಹೊಡೆಯುತ್ತಿದ್ದ ಗ್ರೊಖಾಚನು ಅದರಿಂದ ಎಚ್ಚತ್ತು, ಒಂದು ದೊಡ್ಡ ಆಕಳಿಕೆಯನ್ನು ತೆಗೆದನು.

"ಗಾಢ ನಿದ್ದೆ ನಿನ್ನದು !" ಎವ್ನೊಕಿಮನು ಉದ್ಗಾರ ತೆಗೆದನು.

"ಈಗ ನಿದ್ದೆ ಮಾಡಿದ್ದೇ ಬಂತು. ಮುಂದೆ ಏನು ಆಗುವುದೋ ಯಾರು ಬಲ್ಲರು ?" ತೂಕಡಿಕೆಯ ಸ್ವರದಲ್ಲಿ ಗ್ರೊಖಾಚ ಅಂದನು.

"ಆಗುವುದೇನು, ಗೊತ್ತೇ ಇದೆ"

"ನಮ್ಮವರು ಬರಲಿಕ್ಕಿಲ್ಲವೇ ?" ಮೇಲಿನ ಮಾತನ್ನು ಕೇಳಿ ಗಾಬರಿಗೊಂಡ ನೀನಾ ಕೇಳಿದಳು.

"ಬರಬಹುದು. ಆದರೆ ಈ ಅವಧಿಯ ಮೂರು ದಿವಸಗಳೊಳಗೆ ಅವರು ತಲುಪುವುದೆಂದರೆ ....... ..."

"ಗ್ಯುರಿಲ್ಲಾಗಳಾದರೂ ಬರಬಹುದು"

"ಅದು ಅಸಾಧ್ಯ. ಈ ಹಿಮದಲ್ಲಿ ಇಲ್ಲಿಯ ತನಕ ಬರುವುದೆಂದರೆ ಸಾವಿನ ಬಾಯಲ್ಲಿ ಬಿದ್ದಂತೆಯೇ. ಬೇಸಗೆಯಲ್ಲಾದರೆ ಗಿಡ ಪೊದರುಗಳ ಹಿಂದೆ ಅಡಗಿ ಬೇಕಾದಲ್ಲಿಗೆ ಹೋಗಬಹುದು ಎಲೆಗಳೆಲ್ಲಾ ಉದುರಿ ಮರಗಳೆಲ್ಲಾ ಎಲುಬು-ಗೂಡುಗಳಂತಾದ ಈ ಚಳಿಗಾಲದಲ್ಲಿ ಗ್ಯುರಿಲ್ಲಾಗಳಿಗೆ ಎದುರು ಬೀಳಲು ಸಾಧ್ಯವಿಲ್ಲ.

"ಸೈನ್ಯವಾದರೆ ?"

"ಅವರ ಪ್ರಶ್ನೆ ಬೇರೆ. ಅವರು ಪ್ರತ್ಯಕ್ಷವಾಗಿ ಯುದ್ಧ ಮಾಡುವವರು."

ಹೊರಗಡೆ ಜೋರಾಗಿ ಗಾಳಿಯು ಸುಯ್ಯುಗುಟ್ಟುತ್ತಲಿತ್ತು. "ಮುದಿ ರಕ್ಕಸನಂತೆ ಒದರುತ್ತದಲ್ಲಾ, ಈ ಗಾಳಿ" ಗ್ರೊಖಾಚನಂದ

"ಇಂತಹ ರಾತ್ರಿಯಲ್ಲಿ ಮೃತ್ಯುದೇವತೆ ಹೊಂಚುಹಾಕುತ್ತಿರುತ್ತಾಳಂತೆ. ಅಲ್ಲಾ ?" ಎವ್ನೊಕಿಮನು ಹೇಳಿದನು.

"ಅದು ನಿಜ" ಚೆಚೋರಾ ಸಮ್ಮತಿಸಿದಳು. "ನಮ್ಮ ನಾಡಿನಲ್ಲಂತೂ ಈಗ ಸಾವಿನ ಸಾಮ್ರಾಜ್ಯವೇ ನಡೆದಿದೆ."

ಮೃತ್ಯುವಿನ ಹೆಜ್ಜೆಗೆ ಕಿವಿಗೊಡಲೆಂಬಂತೆ ಎಲ್ಲರೂ ನಿಶ್ಶಬ್ದರಾದರು. ಅಂಜಿಕೆಯಿಂದ ನೀನಾಳು ಬೆನ್ನೆಲುಬಿನಲ್ಲಿ ಹಿಮ ಚೆಲ್ಲಿದಂತೆ ನಡುಗಿದಳು. ಆ ಕತ್ತಲುಕೋಣೆಯ ಪರಿಸ್ಥಿತಿಯು ಮೊದಲೇ ಭಯಾನಕವಿತ್ತು. ಅದರ ಮೇಲೆ ಈ ಮುದುಕ ಇನ್ನೂ ಅಂಜಿಕೆಯನ್ನು ಹೆಚ್ಚಿಸಲಿಕ್ಕೆ ಮೃತ್ಯುವಿನ ಮಾತು ತೆಗೆಯುತ್ತಿದ್ದನು.

ಮುದುಕನು ಆ ವಿಷಯ ಬಿಡಲಿಲ್ಲ. ಅದರಲ್ಲೇ ಅವನು ಆನಂದಿಸುವಂತೆ ತೋರಿತು

"ಈಗಿನ ದಿವಸಗಳಲ್ಲಿ ಎರಡು ಮೃತ್ಯುಗಳಿವೆ."

"ಅದು ಹ್ಯಾಗೆ ಅಜ್ಜಾ ?"

"ಸರಳ. ಒಂದು ನಮ್ಮನ್ನೆಲ್ಲಾ ಕೊಂಡು ಹೋಗಲಿರುವ ಜರ್ಮನ ಮೃತ್ಯು ಎರಡನೇದು ಜರ್ಮನರಿಗಾಗಿ ಕಾದಿರುವ ನಮ್ಮವರ ಮೃತ್ಯು."

ನೀನಾಳಿಗೆ ಮೃತ್ಯುವಿನ ಸುದ್ದಿ ಅಸಹನೀಯವಾಯಿತು. ಎವ್ಡೊಕಿಮುನನ್ನು ಕುರಿತು, "ಇಂತಹ ಭಯಂಕರ ವಿಷಯ ಬೇಡ ಅಜ್ಜಾ !" ಎಂದು ಬಿನ್ನವಿಸಿದಳು.

"ಭಯಂಕರ ಅಂತ ಹೆದರಬಾರದು" ಗ್ರೊಖಾಚನು ಕಠಿಣ ಸ್ವರದಲ್ಲಿ ನುಡಿದನು "ಈಗೀಗ ಜಗತ್ತೇ ಭಯಂಕರವಾಗಿದೆ, ಜನರೂ ಭಯಂಕರರಾಗಿದ್ದಾರೆ. ನಿಮಗೆ ಬೇಕಾದದ್ದೇನೆಂಬುದರ ಬಗ್ಗೆ ಸ್ಪಷ್ಟವಾದ ಅರಿವು ಇರಬೇಕು, ಹಾಗೂ ಯಾವುದಕ್ಕೂ ಹೆದರಬಾರದು. ನಿಮ್ಮನ್ನು ಹೆದರಿಸಬಹುದೆಂದು ಅವರಿಗೆ ಒಮ್ಮೆ ತಿಳಿದರೆ ಸರಿ, ಅವರು ನಿಮ್ಮನ್ನು ಬೇಕಾದ ರೀತಿಯಲ್ಲಿ ಉಪಯೋಗಿಸುತ್ತಾರೆ."

"ಅವರು ಅಂದರೆ ಯಾರು ?"

"ಯಾರು, ಜರ್ಮನರು .........ಅವರು ಈಗ ಒಂದೇ ಪ್ರಯತ್ನದಲ್ಲಿದ್ದಾರೆ. ಅದೇನೆಂದರೆ ಜನರಲ್ಲಿ ಹೆದರಿಕೆಯನ್ನು ಹುಟ್ಟಿಸುವುದು. ಒಮ್ಮೆ ನೀವು ಹೆದರಹತ್ತಿದಿರೆಂದರೆ ಮುಗಿಯಿತು. ನಿಮ್ಮ ಇತಿಶ್ರೀ ಆಯಿತೆಂದೇ ತಿಳಿಯಿರಿ. ಅದೇ ನೀವು ಹೆದರಿಕೆಗೆ ಎಡೆ ಕೊಡದೆ ಧೈರ್ಯದಿಂದ ಎದುರಿಸಿದರೆ, ಜರ್ಮನರು ನಿಮಗೆ ಏನನ್ನೂ ಮಾಡಲಾರರು."

"ಏನೊ ಅಪ್ಪಾ, ವಾಸ್ಯಾನು ಜರ್ಮನರಿಗೆ ಎಳ್ಳಷ್ಟೂ ಅಂಜಲಿಲ್ಲ. ಆದರೂ, ಅಂಜಿದವರಿಗೆ ಗುಂಡಿಕ್ಕಿದಂತೆಯೇ ಅವನಿಗೂ ಗುಂಡಿಕ್ಕಿ ಕೊಂದರು. ಪಾಶ್ಕಕನಿಗೂ ಹಾಗೆಯೇ...."

"ಅವರು ಗುಂಡಿಕ್ಕಲಾರರೆಂದು ನಾನು ಹೇಳಿದೆನೇ ? ಗುಂಡಿಕ್ಕುವುದಕ್ಕಾಗಿಯೇ ಅವರ ಕೈಯಲ್ಲಿ ಕೋವಿ ಕೊಟ್ಟಿದ್ದಾರೆ. ನಾನು ಅದರ ಕುರಿತು ಹೇಳಿದ್ದಲ್ಲ. ನಮ್ಮ ನಿಜವಾದ ಶಕ್ತಿಯು ಅಲ್ಲಿಲ್ಲ."

"ಮತ್ತೆಲ್ಲಿ ?"

"ಗೊತ್ತಿಲ್ಲವೇ ನಿನಗೆ ? ನಿಜವಾದ ಶಕ್ತಿಯು ಗೊತ್ತುಪಡಿಸಿದ ಗುರಿಯಿಂದ ಕದಲದಿರುವುದರಲ್ಲಿದೆ. ನಮ್ಮ ಗುಟ್ಟನ್ನು ಹೊರಗೆಡಹಲು ಅವರು ಎಲ್ಲಾ ವಿಧದಿಂದ ಪ್ರಯತ್ನಿಸುವ ವೇಳೆಯಲ್ಲಿ ಅವರು ಒಡ್ಡುವ ಯಾವ ಮೋಸದ ಹಾಗೂ ಮೋಹದ ಬಲೆಯಲ್ಲಿ ಬೀಳದಿರುವುದರಲ್ಲಿದೆ. ಎಂತಹ ಚಿತ್ರಹಿಂಸೆ ಕೊಟ್ಟರೂ ಬಾಯಿಯಿಂದ ಪಿಟ್ಟೆನ್ನದೆ ನಾಡಿನ ಹಿತವನ್ನು ನೆನೆದು ಮೌನವನ್ನು ತಾಳುವುದರಲ್ಲಿದೆ ಇದಕ್ಕೆಲ್ಲಾ ಕೊನೆಯಿದೆ, ಈ ನೆತ್ತರು ಹೀರುವ ಜರ್ಮನ ಪಿಶಾಚಿಗಳಾರೂ ಇಲ್ಲಿಂದ ಜೀವ ಸಹಿತ ಹೋಗಲಾರರು, ಎಂಬುದನ್ನು ಎಂದೂ ಮರೆಯಬಾರದು ಅವರು ನಮ್ಮನ್ನು ಗುಂಡು ಹಾರಿಸಿ ಕೊಂದರೆ . . ? ಹಿಂದಿನ ಯುದ್ಧದಲ್ಲಿ ಎಷ್ಟು ಜನ ಸತ್ತಿಲ್ಲ ? ಸೋವಿಯೆಟ್ ರಾಜ್ಯಸ್ಥಾಪನೆಯ ಹೋರಾಟದಲ್ಲಿ ಎಷ್ಟು ಜನರ ಬಲಿಯಾಗಿಲ್ಲ ? ಹಿಂದಿನ ಮಹಾಯುದ್ಧದಲ್ಲಿ ಜರ್ಮನ ತುಪಾಕಿಗಳು ಆಹುತಿಗೊಂಡ ನಮ್ಮವರ ಸಂಖ್ಯೆ ಏನು ಕಡಿಮೆಯೇ ? ಆದರೆ ಪರಿಣಾಮವೇನಾಯಿತು ? ಜರ್ಮನರ ಚಿಕ್ಕ ಕುರುಹು ಕೂಡಾ ಇಲ್ಲಿ ಉಳಿಯಲಿಲ್ಲ. ನಮ್ಮ ನಾಡು ಉಳಿಯಿತು. ನಾಡಿನ ಜನತೆ ಉಳಿಯಿತು."

"ಹಿಂದಿನ ಯುದ್ಧದಲ್ಲಿ ಕಾಳಗಗಳಲ್ಲಷ್ಟೇ ಜನ ಸತ್ತಿರಬಹುದು. ಆದರೆ ಈಗ ಹಾಗಲ್ಲ ಕೊಲ್ಲುವುದೇ ಉದ್ದೇಶವೆಂಬಂತೆ ಊರಿನ ಜನರನ್ನೆಲ್ಲಾ ಕೊಲ್ಲುತ್ತಾರಲ್ಲಾ ?"

"ಅದು ನಿಜ. ಆದರೆ, ಇಡೀ ರಶ್ಯನ್ ಜನತೆಯನ್ನು ಕೊಲ್ಲಲು ಅವರಿಂದಲೂ ಸಾಧ್ಯವಿಲ್ಲ. ನಾಡನ್ನು ಪುನಃ ಕಟ್ಟಲು ಕೆಲವರು ಉಳಿದೇ ಉಳಿಯುವರು. ನಾವು ಬದುಕಿದರೆ ಸರ್ವಸಮೃದ್ಧ ಹಾಗೂ ಸಂಪತ್ತಿನಿಂದ ಕೂಡಿದ ಹೊಸ ನಾಡು ಹುಟ್ಟುವುದನ್ನು ಕಣ್ಣಾರೆ ಕಾಣಬಹುದು."

"ಕಾಣುವ ಆಸೆ ನನಗೆ ತುಂಬಾ ಇದೆ." ನೀನಾ ಅಂದಳು.

"ನೀನೂ ಕಾಣುವೆಯಂತೆ. ನಿನ್ನ ವಯಸ್ಸೆಷ್ಟು ? ಗ್ರೋಖಾಚನು ಕೇಳಿದನು.

“ ಹತ್ತೊಂಬತ್ತು.”

“ ಹತ್ತೊಂಬತ್ತು ! ನಾವು ಹತ್ತೊಂಬತ್ತು ದಾಟಿ ಎಷ್ಟು ವರ್ಷ ವಾಯಿತು. ಎವ್ಡೊಕಿಮ ಅಜ್ಜಾ ?”

“ ಹಃ, ಹಂ, ನನ್ನನ್ನೂ ನಿನ್ನ ಸಾಲಿಗೇ ಸೇರಿಸುತ್ತಿಯಾ ? ನೀನು ಮೇಜಿನ ಕೆಳಗೆ ಓಡ್ಯಾಡುವಾಗ ನನ್ನ ಗಡ್ಡ ಹಣ್ಣಾಗಿತ್ತು.” ಎವ್ಡೊಕಿಮ ಅಂದನು.

“ ಇದಿರಬಹುದು. ಆದರೆ, ಇವಳಿಗೆ ಹೋಲಿಸಿದರೆ ನಾನೂ ಮುದುಕನೇ ಹತ್ತೊಂಬತ್ತು ! ನೀನಾ, ನೀನು ಆ ವೈಭವದ ದಿನಗಳನ್ನು ನೋಡಿಯೇ ನೋಡುವೆ. ಮುದುಕರಾದ ನನಗೂ ಎವ್ಡೊಕಿಮ ಅಜ್ಜನಿಗೂ ಕೂಡಾ ಅದನ್ನು ನೋಡಬೇಕೆಂದು ಆತುರವಿದೆ ”

“ ಜನಜೀವನದಲ್ಲಿ ಆಗುವ ಮಾರ್ಪಾಟವನ್ನು ಅಲ್ಲವೇ ?” ನೀನಾ ಕೇಳಿದಳು.

“ ಮಾರ್ಪಾಟವನ್ನಷ್ಟೇ ಅಲ್ಲ. ಕೊನೆಯ ಜರ್ಮನನು ಸಾಯುವು ದನ್ನೂ ನೋಡಬೇಕೆಂದಿರುವೆ. ಕೀವ್ ಶಹರದಲ್ಲಿ ಜರ್ಮನರ ಕೊನೆಯ ಫಾಶಿಯನ್ನು ನೋಡಬೇಕೆಂದಿರುವೆ. ಮತ್ತು ಈಗ ನಮ್ಮ ಕೊರಳಿಗೆ ಬಿಗಿಯಲು ಹಗ್ಗ ಹೆಣೆಯುತ್ತಿರುವವರನ್ನು ತಂದು, ನೆಲಸಮವಾದ ನಮ್ಮ ಮನೆ ಮಠಗಳನ್ನು ಅವರಿಂದ ಕಟ್ಟಿಸುವುದನ್ನು ನಾನು ಕಣ್ಣಾರೆ ಕಾಣ ಬೇಕೆಂದಿರುವೆ ” ಇದನ್ನು ಹೇಳುವಾಗ ಗ್ರೊಖಾಚನು ಒಳಗೊಳಗೆ ಏಳುತ್ತಿದ್ದ ಕೋಪಾಗ್ನಿಯಿಂದ ಕಿಡಿಕಿಡಿಯಾದನು.

ಮಾಲಾನ್ಯಾಳ ಹೃದಯದಲ್ಲಿ ಇವೇ ಭಾವನೆಗಳು ಹುದುಗಿದ್ದುವು. ಅದನ್ನೇ ಗ್ರೊಖಾಚನು ವ್ಯಕ್ತಪಡಿಸಿದ್ದನ್ನು ಕೇಳಿ ಅವಳಿಗೆ ಕ್ಷಣಕಾಲ ಒಂದು ರೀತಿಯ ಹರ್ಷವಾಯಿತು. ಕೊನೆಯ ಜರ್ಮನನು ಗಲ್ಲಿಗೇರಿಸಲ್ಪ ಡುವ ದೃಶ್ಯವು ಎಷ್ಟು ಆನಂದದಾಯಕವಾಗಬಹುದು ! ತಮಗಾದ ಹಿಂಸೆಯ ಸೇಡು ತೀರಿಸಿಕೊಳ್ಳುವುದರಿಂದ ಮನಸ್ಸಿಗೆ ತುಸುವಾದರೂ ಸಮಾಧಾನವಾಗದಿರದು. ಅದೆಲ್ಲಾ ಬೇರೆಯವರ ಮಟ್ಟಿಗೇನೊ ಸರಿ ಇರಬಹುದು. ಆದರೆ ತನ್ನ ದುರವಸ್ಥೆಯು ಸೇಡಿನ ಮೇರೆಯನ್ನೂ

ಮೀರಿದುದು. ಭ್ರಷ್ಟವಾದ ತನ್ನ ದೇಹ ಎಷ್ಟೇ ಜರ್ಮನ ನೆತ್ತರು ಚೆಲ್ಲಿದರೂ ಶುದ್ಧವಾಗಲಾರದು.

"ನನಗೆ ಬಾಯಾರಿಕೆಯಾಗುತ್ತಿದೆ" ನೀನಾ ಮೆಲ್ಲನೆ ಚೆಚೋರಾಳ ಕೂಡ ಅಂದಳು. ಅದು ಗ್ರೊಖಾಚನಿಗೆ ಕೇಳಿಸಿತು. "ಅದರ ವಿಚಾರವನ್ನೇ ಮಾಡಬೇಡ. ನಿನಗೆ ನೀರು ಕೊಡುತ್ತಾರೇನು ಅವರು? ಈಗೇನು ಸೆಕೆ ಇಲ್ಲ ಕೆಲಸವೂ ಇಲ್ಲ. ಮನಸ್ಸಿನಲ್ಲಿ ಆ ವಿಚಾರಕ್ಕೆ ಎಡೆಕೊಟ್ಟರೆ ಮಾತ್ರ ಬಾಯಾರಿಕೆ ಅಸಹನೀಯುವಾಗುವುದು. ಇಲ್ಲದಿದ್ದರೆ ಕೆಲಸವಿಲ್ಲದೆ ಸುಮ್ಮನೆ ಕೂತಿರುವಾಗ ಬಾಯಾರಿಕೆಯನ್ನು ಸಹಿಸುವುದು ಕಠಿಣವಲ್ಲ" ಎಂದು ಗ್ರೊಖಾಚನು ಸಹನೆಯ ಪಾಠವನ್ನು ಕಲಿಸಿದನು.

ಎಳೇ ಪ್ರಾಯದ ನೀನಾಳಿಗೆ ಅದು ಸುಲಭವೆನಿಸಲಿಲ್ಲ. "ಅಯ್ಯೋ, ಎಷ್ಟು ಕಾಲ ಹೀಗೆ ನೀರಿಲ್ಲದಿರುವುದು." ಎಂದು ಒದರಿದಳು.

"ಏನು ಯಾವಾಗಲೂ ನಿನ್ನ ಒದರಾಟ ತಪ್ಪಿದ್ದಲ್ಲ. ಹೀಗೆ ಬೊಬ್ಬಿಡಲು ನಾಚಿಕೆಯಾಗುವುದಿಲ್ಲವೇ ನಿನಗೆ?" ಚೆಚೋರಾ ನಡುವೆಯೆ ಹೇಳಿದಳು.

"ದುಃಖ, ಕಷ್ಟ ನಿನಗೊಬ್ಬಳಿಗೆ ಮಾತ್ರ ಬಂದದ್ದೇನು? ಅದು ಯಾರನ್ನು ಬಿಟ್ಟಿದೆ ಈಗ?"

"ನಮ್ಮ ಹಾಗೆ ಮೂರು ದಿವಸಗಳಲ್ಲಿ ಸಾಯುವ ಪರಿಸ್ಥಿತಿ ಯಾರಿಗೂ ಬಂದಿಲ್ಲಲ್ಲಾ."

"ಹುಚ್ಚಿ ಬರೇ. ಬೇರೆಯವರಿಗೇನೂ ಬದುಕುವ ಖಾತ್ರಿ ಇದೆಯೇ? ಒಬ್ಬರೂ ಕಾಳು ಕೊಡುವಂತಿಲ್ಲ ಅಂದಬಳಿಕ ನಮ್ಮ ಹಾಗೆ ಅವರೂ ಸಾವಿನ ದವಡೆಯೊಳಗೆ ಸಿಕ್ಕಂತೆಯೇ."

"ಯಾರೂ ಅವರಿಗೆ ಕಾಳು ಕೊಡಲಿಕ್ಕಿಲ್ಲವೆಂಬುದು ಖಂಡಿತ. ಆದರೆ ಏನು, ಜರ್ಮನರು ಎಲ್ಲರನ್ನೂ ಕೊಲ್ಲುವರೇ? ಅದು ಹೇಗೆ ಸಾಧ್ಯವಾದೀತು?" ಏವ್ಡೊಕಿಮ ಕೇಳಿದನು.

"ಅದ್ಯಾಕೆ ಆಗಲಾರದು? ಈ ಮೊದಲು ಮಾಡಿಲ್ಲೇನು ಅವರು?" ಗ್ರೊಖಾಚನು ಮುದುಕ ಏವ್ಡೊಕಿಮನ ಮೂರ್ಖ ವಿಶ್ವಾಸಕ್ಕೆ ನಕ್ಕು ಹೇಳಿದನು.

ಒಬ್ಬನೂ ಉಳಿಯದಂತೆ ನಿರ್ನಾಮವಾದ ಹಳ್ಳಿಗಳ ನೆನಪು ಅವರ ಕಣ್ಣ ಮುಂದೆ ಬಂತು. ಲೆವೆನೆವ್ಕಾ—ಅಲ್ಲಿ ಜರ್ಮನರು ಜನರನ್ನು ಮನೆಗಳಲ್ಲೇ ಬಂಧಿಸಿ ಇಡೀ ಊರಿಗೇನೇ ಬೆಂಕಿ ಕೊಟ್ಟಿದ್ದರು. ತಾಯಂದಿರ ಎದುರಿಗೆ ಸಣ್ಣ ಮಕ್ಕಳನ್ನು ಬೆಂಕಿಯಲ್ಲಿ ಒಗೆದಿದ್ದರು. ತಪ್ಪಿಸಿ ಓಡಿದವರನ್ನು ಹಿಡಿದು ತಂದು ಉರಿಯುವ ಬೆಂಕಿಯಲ್ಲಿ ದೂಡಿದ್ದರು. 'ಸಹಾದಿ'—ಹಳ್ಳಿಯ ಎಲ್ಲಾ ಜನರನ್ನು ಊರ ಹೊರಗಿನ ದೊಡ್ಡ ಹೊಂಡದಲ್ಲಿ ಕೂಡಿಸಿ ಮದ್ದು ಗುಂಡಿನಿಂದ ಎಲ್ಲರನ್ನೂ ಸುಟ್ಟಿದ್ದರು. 'ಕೊಸ್ಟಿಂಕಾ'—ಗಂಡಸರನ್ನೆಲ್ಲಾ ಗುಂಡಿಕ್ಕಿ ಕೊಂದು ಹೆಂಗಸರನ್ನು ಬತ್ತಲೆ ಮಾಡಿ ಕೊರೆಯುವ ಚಳಿಯಲ್ಲಿ ಅನ್ನ ನೀರಿಲ್ಲದೆ ಓಡಿಸಿ ಚಳಿಯಿಂದ ಮರಗಟ್ಟಿ ಸಾಯಿಸಿದ್ದರು.

"ಹೇಗಿದ್ದರೂ ಕಾಳು ಯಾರೂ ಕೊಡುವಹಾಗಿಲ್ಲ." ಎವ್ಡೊಕಿಮ ಎಂದನು.

"ಆ ಕುರಿತು ಸಂದೇಹವೇ ಇಲ್ಲ." ಚೆಚೋರಾ ಖಾತ್ರಿಪಡಿಸಿದಳು.

ಎಲ್ಲರೂ ಅದೇ ನಿರ್ಧಾರಕ್ಕೆ ಬಂದಿದ್ದರು. ಆ ವರ್ಷದ ಸುಗ್ಗಿಯಲ್ಲಿ ದೊರೆತಷ್ಟು ಕಾಳು ಹಿಂದೆ ಯಾವಾಗಲೂ ಬೆಳೆದಿರಲಿಲ್ಲ ಜರ್ಮನರ ಕಣ್ಣಿಗೆ ಬೀಳದಂತೆ ಎಲ್ಲಾ ಕಾಳನ್ನು ಊರಿನಿಂದ ದೂರ ನೆಲದಲ್ಲಿ ಹುಗಿದು ಹಾಕಿದ್ದರು ಚಳಿಗಾಲದಲ್ಲಿ ದಟ್ಟವಾಗಿ ಹಿಮ ಬಿದ್ದಾಗ ಆ ಸ್ಥಳವನ್ನು ಕಂಡುಹಿಡಿಯುವುದು ಜರ್ಮನರಿಗೆ ಎಂದೆಂದಿಗೂ ಸಾಧ್ಯವಿರಲಿಲ್ಲ.

ತಾಯಿನೆಲವು ಜನತೆಯ ಜೀವನಕ್ಕಾಗಿ ತನ್ನ ಮಡಿಲಿನಿಂದಕೊಟ್ಟ, ಹೊನ್ನಿಗೆ ಹೋಲುವ ಕಾಳನ್ನು, ಜನರ ಸ್ವಾತಂತ್ರ್ಯವನ್ನು ಹರಣಮಾಡಲು ಬಂದ ಜರ್ಮನರ ಕೈಗೆ ಕೊಡುವುದುಂಟೇ? ಅದು ಅವರ ಕೈಗೆ ಸಿಕ್ಕಿದರೆ ತಮ್ಮ ನೆತ್ತರು ಹೀರುವ ಆ ರಕ್ಕಸರಿಗೆ ನಾವೇ ಆಹಾರ ಒದಗಿಸಿದಂತೆ. ನಾಡನ್ನು ಉಳಿಸಲು ಜೀವದ ಹಂಗುದೊರೆದು ಕಾದುವ ಕೆಂಪುಸೇನೆಯ ದೇಶಬಾಂಧವರಿಗೆ ದ್ರೋಹ ಬಗೆದಂತೆ. ತಮ್ಮ ಒಲವಿನ ತಾಯ್ನಾಡು ಜರ್ಮನರಿಗೆ ಪಾದಾಕ್ರಾಂತವಾಯಿತೆಂದು ನಾವೇ ಜಗತ್ತಿಗೆ ಸಾರಿದಂತೆ. ಎಂದು ಊರಿಂದೂರಿಗೆ ಒಂದೇ ಸಂದೇಶ ಹೊರಟಿತ್ತು. ಶತ್ರುಗಳಿಗೆ ಒಂದೇ ಒಂದುಕಾಳಿನ ಕಣ ಸಿಗದಂತೆ ಮಾಡಿರಿ. ಅದೇ ತಾಯ್ನಾಡಿನ ಕರೆ. ಅದನ್ನು

ಉಲ್ಲಂಘಿಸುವುದು ಸ್ವಜನದ್ರೋಹ, ಸ್ವದೇಶದ್ರೋಹ. ಅಂತಹ ಘೋರವಾದ ದ್ರೋಹಗೈಯುವವರು, ರಶ್ಯದ ರೈತಸಮಾಜದಲ್ಲಿ ಯಾರೂ ಇರಲಿಲ್ಲ. ಜನತೆಯು ಅಸಹಕಾರದಿಂದ ನಿರಾಶೆಗೊಂಡ ಜರ್ಮನರ ರೋಷಾಗ್ನಿಗೆ ಬಲಿಯಾಗಲು ಎಲ್ಲರೂ ಸಿದ್ಧತೆಯನ್ನು ಮಾಡುತ್ತಿದ್ದರು.

ರಶ್ಯದ ಯುಕ್ರೇನ್ ಭಾಗದ ಹಳ್ಳಿಗಳಲ್ಲಿ ಮೃತ್ಯುವು ತಾಂಡವ ಮಾಡುತ್ತಿತ್ತು. ಟ್ಯಾಂಕುಗಳ ರತ್ಕಾರ ಹಾಗೂ ಸಿಡಿಮದ್ದುಗಳ ಸ್ಫೋಟದ ರೂಪದಲ್ಲಿ ಅದರ ನೃತ್ಯನಿನಾದವು ಕೃಷಿಕ ಜನತೆಯು ಕಿವಿಗಳನ್ನು ಭೇದಿಸಿತ್ತು. ಫಾಶಿಯ ಹಗ್ಗದ ಸ್ಪರ್ಶವನ್ನು ತಮ್ಮ ಕುತ್ತಿಗೆಗಳಲ್ಲಿಯೆ ಎಲ್ಲರೂ ಅನುಭವಿಸುತ್ತಿದ್ದರು. ಜರ್ಮನ ಬೆಯೊನೆಟ್ಟಿನ ತೀಕ್ಷ್ಣವಾದ ಹರಿತ ಹಾಗೂ ಅವರ ತುಪಾಕಿಗಳಿಂದ ಹೊರಬೀಳುವ ಗುಂಡಿನ ತೀವ್ರ ಗತಿ ಇವುಗಳನ್ನು ಎಲ್ಲರ ಎದೆಗಳೂ ಅನುಭವಿಸುತ್ತಿದ್ದುವು.

ಜರ್ಮನ ಮೃತ್ಯು ಎಷ್ಟೇ ಕರಾಳ ರೂಪವನ್ನು ತಾಳಿದರೂ ಎಷ್ಟೇ ಹುಚ್ಚೆದ್ದು ಕುಣಿದರೂ, ತಾಯ್ನಾಡನ್ನು ನುಗ್ಗಿದ ವೈರಿಗೆ ತಲೆಬಾಗಿಸಬಾರದೆಂಬ ಜನತೆಯು ಅಚಲನಿರ್ಧಾರವನ್ನು ಕದಲಿಸಲು ಸಾಧ್ಯವಾಗಲಿಲ್ಲ.

ರಶ್ಯದ ಸ್ವಾತಂತ್ರ್ಯವನ್ನು ಮೆಟ್ಟಿ ಮೆರೆದಾಡಲು ಯತ್ನಿಸುತ್ತಿದ್ದ ಜರ್ಮನ ಸೇನೆಗೂ ಮೃತ್ಯುವಿನ ಸಾನ್ನಿಧ್ಯದ ಅರಿವು ಆಗುತ್ತಲಿತ್ತು. ರಶ್ಯದ ಕಠಿಣ ಚಳಿಯಲ್ಲಿ, ಜೋರಾಗಿ ಬೀಸುವ ಹಿಮಗಾಳಿಯಲ್ಲಿ ಜರ್ಮನ ಸೈನಿಕರು ಅದನ್ನು ಕಾಣುತ್ತಿದ್ದರು. ಆಕ್ರಮಿಸಿದ ಊರುಗಳಲ್ಲಿ ಆಹಾರ ಸಿಗದೆ ಹೊರಗಿನಿಂದ ಬರುವುದನ್ನು ಗ್ಯೆರಿಲ್ಲಾ ತಂಡಗಳು ಅಪಹರಿಸಿದ ಕಾರಣದಿಂದ ಹೊಟ್ಟೆಯಲ್ಲಿ ಹಸಿವೆಯು ಬೆಂಕಿ ಏಳುವಾಗ ಹಾಗೂ ಕಣ್ಣಿಗೆ ಕಾಣದ, ಕಿವಿಗೆ ಕೇಳಿಸದ ರೀತಿಯಲ್ಲಿ ಆದೇ ಗ್ಯೆರಿಲ್ಲಾ ಸೈನಿಕರು ಥಕ್ಕನೆ ಮೈಮೇಲೆ ಬೀಳುವಾಗ ಜರ್ಮನ ಸೈನಿಕರು ರಶ್ಯನ ಮೃತ್ಯುವನ್ನು ಕಾಣುತ್ತಿದ್ದರು. ರಸ್ತೆಯಲ್ಲಿ ಗಸ್ತು ಹೊಡೆಯುವಾಗ, ನಿದ್ದೆಯ ಅಮಲೇರಿ ಎಚ್ಚರವಿರಲು ಸಾಧ್ಯವಾಗದೆ ಕಣ್ಣುಮುಚ್ಚಿದಾಗ, ಎಲ್ಲೆಡೆಯಲ್ಲೂ ಎಲ್ಲ ಹೊತ್ತಿನಲ್ಲಿಯೂ ಅದು ಅವರ ಬೆನ್ನು ಹತ್ತಿತ್ತು.

ಮೃತ್ಯುವಿನ ತಾಂಡವನೃತ್ಯದ ಮುಂದೆ ರಶ್ಯನ್ ಜನತೆಯು ಹೆಚ್ಚೆಚ್ಚಾಗಿ ಧೈರ್ಯ ಸ್ಥೈರ್ಯಗಳನ್ನು ತೋರಿದಂತೆ ಜರ್ಮನ ಸೈನಿಕರು ಮೃತ್ಯುವಿನ ಸಾನ್ನಿಧ್ಯದಲ್ಲಿ ಸತ್ವಹೀನರಾಗುತ್ತಾ ನಡೆದಿದ್ದರು.

೩

ಹೊರಗೆ ಭಯಂಕರ ಬಿರುಗಾಳಿ ಬೀಸುತ್ತಲಿತ್ತು. ಗಾಳಿಯಿಂದ ಒಳಗೆ ಅಟ್ಟಲ್ಪಟ್ಟ ಹಿಮಕಣಗಳು ಮೊದಲೇ ಅಸಹನೀಯವಾಗಿದ್ದ ಚಳಿಯ ತೀಕ್ಷ್ಣತೆಯನ್ನು ಇನ್ನಷ್ಟು ಹೆಚ್ಚಿಸಿದ್ದುವು. ಒಲೆನಾಳು ಮಲಗಿದ್ದ ಆ ಗುಡಿಸಲು ಈ ಗಾಳಿಯ ಹೊಡೆತಕ್ಕೆ ಈಗಲೇ ಬೀಳುವುದೊ ಎಂಬಂತೆ ಅಲ್ಲಾಡುತ್ತಿತ್ತು.

ಒಲೆನಾ ಜೋರಿನಿಂದ ಒದರಿದಳು ಕಟ್ಟನ್ನು ಒಡೆದು ಹೊರ ಹೊಮ್ಮುವ ನೀರಿನ ಪ್ರವಾಹದಂತೆ ಈವರೆಗೆ ನಿಶ್ಯಬ್ದವಾಗಿ ಸಹಿಸಿದ್ದ ದಾರುಣ ನರಕಯಾತನೆಯಿಂದಾಗಿ ಮನಸ್ಸಿನಲ್ಲೇ ಹುದುಗಿದ್ದ ವೇದನೆಯ ಪ್ರವಾಹವು ಈ ರೀತಿಯಲ್ಲಿ ಹೊರಕ್ಕೆ ಬರಲೆಣಿಸಿತು ಜರ್ಮನ ಸೈನಿಕರ ಬೆಯೊನೆಟ್ಟುಗಳ ಇರಿತ, ಅವರು ಓಡಿಸುವಾಗ ಬಿದ್ದು ಆದ ಹೊಡೆತ, ಅಸಹನೀಯ ಚಳಿಯಿಂದ ಬತ್ತಲೆದೇಹಕ್ಕಾಗುವ ಯಾತನೆ, ಇಂತಹ ಪರಿಸ್ಥಿತಿಯಲ್ಲಿ ಆದ ಪ್ರಸವದ ವೇದನೆ, ಇವೆಲ್ಲವುಗಳ ಸಮ್ಮಿಳಿತವಾದ ಸಹನಾತೀತ ನೋವನ್ನು ಅವಳ ದೇಹವು ಗಟ್ಟಿಯಾಗಿ ಒದರಿ ಕೂಗಾಡಿ ಕಡಿಮೆ ಮಾಡಿಕೊಳ್ಳಲು ಯತ್ನಿಸುತ್ತಿತ್ತು

ಅವಳ ಚೀರಾಟವನ್ನು ಕೇಳಿದ ನೆರೆಕರೆಯ ಕೆಲವರು ಅವಳಿಗೆ ಸಹಾಯ ಮಾಡಲು ಅಸಮರ್ಥರಾದುದಕ್ಕೆ ಕಣ್ಣೀರು ಸುರಿಸಿದರು. ಭಾವಿಕರು ದೇವರಲ್ಲಿ ಮೊರೆಯಿಟ್ಟರು. ಉಳಿದವರು ನಾಡನ್ನು ಗೋಳಾಡಿಸಿದ ಜರ್ಮನರಿಗೆ ಎಂದಿಗೂ ಬಗ್ಗಲಾರವೆಂಬ ತಮ್ಮ ನಿರ್ಧಾರವನ್ನು ದೃಢ ಮಾಡಿದರು.

ಒಲೆನಾಳ ಮಗು ಅವಳ ಮಗ್ಗುಲಲ್ಲೇ ಮಲಗಿತ್ತು. ಈ ಮೊದಲೇ ಸತ್ತಿದ್ದ ತಂದೆಯ, ಎಷ್ಟೋ ಸಾರೆ ಸಾಯಬೇಕಾಗಿದ್ದ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಮಗು ಅದು. ಅದರ ಜನ್ಮವು ಕೂಡ ಎಂತಹ

ಪ್ರತಿಕೂಲ ಪರಿಸ್ಥಿತಿಯಲ್ಲಿ ! ಸೂಲಗಿತ್ತಿ ಇಲ್ಲ. ಹಡೆಯುವ ಹೊತ್ತಿನಲ್ಲಿ ಮಲಗಲು ಹಾಸಿಗೆ ಕೂಡ ಇಲ್ಲ. ಬರೀ ನೆಲದಲ್ಲಿ, ತಾಯಿಯು ಜರ್ಮನರ ದವಡೆಯಲ್ಲಿ ಸಿಲುಕಿರುವಾಗ ಆ ಮಗು ಲೋಕದ ಬೆಳಕನ್ನು ಮೊದಲ ಸಾರೆ ಕಂಡದ್ದು ! ಈಗಲಾದರೂ ಅದು ಮಲಗಿದ್ದುದು ಕಡಿಯುವ ಚಳಿಯಲ್ಲಿ, ಮೈಯಲ್ಲಿ ಚಿಂದಿಬಟ್ಟೆ ಕೂಡಾ ಇಲ್ಲದೆ ಒಣ ನೆಲದಲ್ಲಿ. ಆದರೆ ಇದರ ಯಾವ ಅರಿವೂ ಅದಕ್ಕಿರಲಿಲ್ಲ. ಅದು ತನ್ನ ಆಗಮನವನ್ನು ಜಗತ್ತಿಗೆ ತಿಳಿಸಲು ತನ್ನ ಚಿಕ್ಕ ಕಂಠದಿಂದ ಎಳೇ ಸ್ವರ ತೆಗೆದು ಕೂಗುತ್ತಲಿತ್ತು. ಎಂತಹ ಮುದ್ದು ಮಗು ! ಹುಟ್ಟುವ ಮೊದಲೇ ಸಾಯಬೇಕಾಗುವಷ್ಟು ಹೊರಗಣ ಪರಿಸ್ಥಿತಿ ಕಠಿಣವಿದ್ದರೂ ಅದೆಲ್ಲವನ್ನೂ ದಾಟಿ ಹೊರಗೆ ಬಂದ ಆ ಮಗು ಎಣಿಕೆಗೆ ಮೀರಿ ದಷ್ಟಪುಷ್ಟವಾಗಿತ್ತು.

ಬಹಳ ಶ್ರಮದಿಂದ ಕೈಗಳನ್ನು ಎತ್ತಿ ಒಲೆನಾ ಮಗುವನ್ನು ಮೇಲಕ್ಕೆ ಎತ್ತಿದಳು. ಗಂಡುಮಗು ! ನಾಲ್ವತ್ತು ವರ್ಷ ಬಂಜೆಯಾಗಿದ್ದು ಮಕ್ಕಳಾಗುವ ಆಶೆಯನ್ನು ಪೂರಾ ಬಿಟ್ಟಮೇಲೆ ಹುಟ್ಟಿದುದು ಮಗುವಿನ ಮುದ್ದು ಮೊಗವನ್ನು ನೋಡುವ ಆನಂದದಲ್ಲಿ ಒಲೆನಾ ತಾನು ಎಲ್ಲಿದ್ದೇನೆಂಬುದನ್ನು ಮರೆತು " ಮಿಕೋಲಾ, ಮಗ !" ಎಂದು ಗಂಡನನ್ನು ಕೂಗಿ ಕರೆದಳು ಒಂದಾದರೂ ಮಗುವಾಗಬೇಕೆಂದು ಅವನು ಎಷ್ಟು ಆಸೆಪಟ್ಟಿದ್ದ ! ಆದರೂ ಇಷ್ಟು ವರ್ಷಗಳಲ್ಲಿ ಒಮ್ಮೆಯಾದರೂ ತನ್ನ ಬಂಜೆತನಕ್ಕಾಗಿ ತನ್ನನ್ನು ಹಳಿಯಲಿಲ್ಲ. ಬಸುರಿತನದ ಲಕ್ಷಣಗಳು ತೋರಿದಾಗ ಅವನೆಷ್ಟು ಆನಂದಪಟ್ಟಿದ್ದ !

ಆದರೆ ಜಪ್ಪರಲ್ಲಿ ಅವನಿಗೆ ಸೈನ್ಯದ ಕರೆ ಬಂದಿತು. ಒಲೆನಾಳನ್ನೂ ಅವಳ ಹೊಟ್ಟೆಯಲ್ಲಿದ್ದ ಮಗುವನ್ನೂ ಅವನು ಕಣ್ಣೀರಿನಿಂದ ಬೀಳ್ಕೊಟ್ಟಿದ್ದನು. ಮಗುವನ್ನು ಒಮ್ಮೆಯಾದರೂ ಕಾಣುವ ಸುಯೋಗವು ಅವನ ಹಣೆಯಲ್ಲಿ ಬರೆದಿರಲಿಲ್ಲ ಒಲೆನಾಳಿಗೆ ತಿಂಗಳು ತುಂಬುವ ಮೊದಲೇ ಅವನು ರಣರಂಗದಲ್ಲಿ ಮಡಿದನು. ಯಾವುದಕ್ಕಾಗಿ ಜೀವಮಾನವಿಡೀ ಹಂಬಲಿಸಿ ದಿನಗಳನ್ನು ಕಳೆದಿದ್ದನೊ ಆ ಫಲವು ಬಾಯಿಯಲ್ಲಿ ಬೀಳುವ ಸಮಯದಲ್ಲೆ ಮೃತ್ಯುವು ಅವನನ್ನು ಈ ಲೋಕದಿಂದ ಕರೆದೊಯ್ದಿತು.

ಮಗುವನ್ನು ಕೈಯಲ್ಲಿ ಎತ್ತಿ ಒಲೆನಾ-ಕಣ್ಣುತುಂಬಾ ನೋಡಿದಳು. ಈ ಅಸಾಧ್ಯ ಚಳಿಯಲ್ಲಿ ಅದು ಎಲ್ಲಿ ಮರಗಟ್ಟಿ ಹೋಗುವುದೊ ಎಂದು ಅಂಜಿದಳು. ಆದರೆ ಬೆಚ್ಚಗಾಗಿರಿಸಲು ಒಂದು ಹುಲ್ಲುಕಡ್ಡಿ ಕೂಡಾ ಅವಳಿಗೆ ಸಿಗಲಿಲ್ಲ. ಕೊನೆಗೆ ತನ್ನ ಬಾಯಿಯ ಬಳಿ ಹಿಡಿದು ಬಿಸಿಯುಸಿರನ್ನು ಅದರ ಮೈಮೇಲೆ ಬೀರಿ ಉಷ್ಣತೆಯನ್ನು ಹುಟ್ಟಿಸಲು ಯತ್ನಿಸಿದಳು.

ಹೊರಗೆ ಪಹರೆ ಮಾಡುತ್ತಿದ್ದ ಜರ್ಮನ ಸಿಪಾಯಿಗಳು ಇದನ್ನೆಲ್ಲಾ ನೋಡುತ್ತಿದ್ದರು. ಆದರೆ, ಒಂದು ಅರಿವೆಯ ಚಿಂದಿಯನ್ನಾದರೂ ಒಳಗೆ ಬಿಸಾಡುವಷ್ಟು ದಯಾಭಾವವನ್ನು ಅವರಾರೂ ತೋರಿಸಲಿಲ್ಲ ಸಾಮ್ರಾಜ್ಯ ಪಿಪಾಸೆಯು ಮನುಷ್ಯತ್ವವನ್ನೇ ಹರಣಮಾಡಿತ್ತು ಒಂದು ವೇಳೆ ಸಾಮಾನ್ಯ ಸಿಪಾಯಿಗಳಾದ ಅವರು ಮನುಷ್ಯತ್ವದ ಲಕ್ಷಣಗಳನ್ನು ತೋರಿಸಿದ್ದರೂ ಆಫೀಸರರ ದೃಷ್ಟಿಯಲ್ಲಿ ಅದೇ ದೊಡ್ಡ ಅಪರಾಧ ವಾಗುತ್ತಿತ್ತು.

ಜರ್ಮನ ಸೈನಿಕರು ಕೊಟ್ಟ ಭಯಂಕರ ನರಕಯಾತನೆಯ ಸಮಯ ದಲ್ಲೂ ಕೂಡ ಅವಳ ಕಣ್ಣಿನಿಂದ ಒಂದು ಹನಿ ಅಶ್ರು ಉದುರಿದ್ದಿಲ್ಲ. ಆದರೆ ಈಗ ತನ್ನ ಮುದ್ದು ಮಗುವಿನ ಸ್ಥಿತಿಯನ್ನು ನೆನೆಯುವಾಗ ಕಣ್ಣೀರು ಧಾರಾವಾಹಿಯಾಗಿ ಹರಿಯತೊಡಗಿತು. ಹುಟ್ಟುವಾಗಲೇ ಅದಕ್ಕೆ ಏಕಾದಶಿ! ಎರಡು ದಿನಗಳಿಂದ ಏನೂ ಆಹಾರವಿಲ್ಲದ ಅವಳ ಮೊಲೆಯಲ್ಲಿ ಒಂದು ತೊಟ್ಟು ಹಾಲಾದರೂ ಎಲ್ಲಿಂದ ಬರಬೇಕು? ತನ್ನ ಪುಟ್ಟ ಕೈಗಳನ್ನು ಚಾಚಿ ಅವಳ ಕಡೆಗೆನೇ ನೋಡುತ್ತಿದ್ದ ಆ ಮಗು ತನಗೆ ಬಾಯಾರಿಕೆ ಯಾಗಿದೆಂದು ಸನ್ನೆಯಿಂದ ಸೂಚಿಸುತ್ತಿರುವಂತೆ ಅವಳಿಗೆ ಭಾಸವಾಯಿತು. ಆದರೆ, ನೀರಿನ ಒಂದು ಹನಿಯನ್ನಾದರೂ ಅದರ ಬಾಯಿಯಲ್ಲಿ ಹಾಕುವುದು ಹೇಗೆ ಸಾಧ್ಯ? ನೀರಿಲ್ಲದಿದ್ದರೆ ಎಂಜಲನ್ನಾದರೂ ಅದರ ತುಟಿಗಳಿಗೆ ಸವರಿ ದಾಹಬಾಧೆಯನ್ನು ಕೊಂಚವಾದರೂ ಕಡಿಮೆ ಮಾಡೋಣವೆಂದರೆ ನೀರು ಸಿಗದೆ ಅವಳ ನಾಲಿಗೆ ತುಟಿಗಳೇ ಒಣಗಿದ ಮರುಭೂಮಿಯಂತಾಗಿದ್ದವು

ಮಗುವಿನ ಚಿಂತೆಯಲ್ಲಿ ಬೆಂದು ಬೇಗುದಿಗೊಂಡ ಒಲೆನಾಳಿಗೆ ಕಾವಲುಮಾಡುತ್ತಿದ್ದ ಸಿಪಾಯಿಗಳನ್ನಾದರೂ ಕರೆದು ಮಗುವಿಗಾಗಿ

ಒಂದು ಅರಿವೆ ಚಿಂದಿಯನ್ನಾಗಲಿ ಒಂದು ಗುಟುಕು ನೀರನ್ನಾಗಲಿ ಯಾಚಿ ಸೋಣವೆನಿಸಿತು ನಾಜೀತತ್ವಪ್ರಚಾರದಿಂದ ನಷ್ಟವಾಗಿದ್ದ ಅವರ ಮನುಷ್ಯತ್ವವು ಈ ಎಳೆಗೂಸಿನ ದುರವಸ್ಥೆಯನ್ನು ಕಂಡು ತುಸುವಾದರೂ ಜಾಗ್ರತವಾದೀತೆಂದು ಎಣಿಸಿದಳು. ಆದರೆ ಮರುಕ್ಷಣದಲ್ಲೇ ಗ್ಯುರಿಲ್ಲಾ ನಾಯಕ "ಮುಂಗುರುಳಿ"ನ ಆದೇಶದ ನೆನಪಾಯಿತು. "ನಾವು ಸೋಲುವುದಾದರೆ ಜರ್ಮನರ ಫಿರಂಗಿ, ಬಾಂಬುಗಳಿಂದಲ್ಲ, ನಮ್ಮ ಸ್ಥೈರ್ಯದ ಶಿಥಿಲತೆಯಿಂದ; ನಮ್ಮ ಮನಸ್ಸಿನ ದುರ್ಬಲತೆಯು ವೈರಿಗೆ ತಿಳಿಯಿತೆಂದರೆ ಸರಿ, ಅಂದೇ ನಮ್ಮ ಪರಾಜಯದ ಪ್ರಾರಂಭ" ಈಗ ತಾನು ಕೂಸಿಗಾಗಿ ಏನನ್ನಾದರೂ ಬೇಡಿದರೆ ತನ್ನ ಮನಸ್ಸಿನ ದುರ್ಬಲತೆಯ ಸೂಚನೆಯನ್ನು ವೈರಿಗೆ ಕೊಟ್ಟಂತಾಗಿ, ರಶ್ಯನ್ ಜನತೆಯನ್ನು ಚಿತ್ರಹಿಂಸೆ ಕೊಟ್ಟು ಹಾಗೂ ಆಸೆ ತೋರಿಸಿ ಬಗ್ಗಿಸಬಹುದೆಂದು ವೈರಿಯು ಎಣಿಸುವನು, ಎಂಬ ವಿಚಾರ ಒಲೆನಾಳ ಮನಸ್ಸಿನಲ್ಲಿ ಮೂಡಿತು. ವೈರಿಯಿಂದ ಮಗುವಿಗಾಗಿ ಸಹ ಭಿಕ್ಷೆಯನ್ನು ಬೇಡಲಾರೆನೆಂಬ ದೃಢ ನಿರ್ಧಾರವನ್ನು ಮಾಡಿದಳು. ಆದರೆ ತಿರುಗೊಮ್ಮೆ ವಿಚಾರ ಬದಲಾಯಿತು. ಯಾವುದೋ ಒಂದು ಧ್ಯೇಯಕ್ಕಾಗಿ ಈ ಅಜ್ಞಾತ ಕೂಸನ್ನು ಬಲಿಕೊಡುವುದೇ ? ಅಲ್ಲದೆ ಈ ಸಿಪಾಯಿಗಳು ನಮ್ಮಂತೆ ಸಾಮಾನ್ಯ ಜನತೆಯಿಂದ ಬಂದವರು. ನಾಜಿ ಮುಖಂಡರಂತೆ ಶೋಷಕವರ್ಗದವರಲ್ಲ. ಕೂಸಿಗಾಗಿ ಇವರಲ್ಲಿ ಏನಾದರೂ ಬೇಡಿದರೆ ಅದು ಮುಖಂಡರ ಕಿವಿವರೆಗೆ ಹೋಗಲಿಕ್ಕಿಲ್ಲ. ಜರ್ಮನರಾದರೂ ಸಾಮಾನ್ಯ ಜನರಲ್ಲಿ ಮನುಷ್ಯತ್ವವಿಲ್ಲದಿದ್ದೀತೇ ? ಏನೇ ಆಗಲಿ ಕೂಸಿನ ಜೀವ ಉಳಿಸಲು ಒಂದು ಅರಿವೆ ಚಿಂದಿಯನ್ನು ಬೇಡಿ ನೋಡುವೆ ಎಂದು ಮನಸ್ಸಿನಲ್ಲೇ ಅಂದಳು. ಶಬ್ದಗಳನ್ನು ಉಚ್ಚರಿಸಲು ಬಾಯಿ ತೆರೆದಳು. ಆದರೆ ಥಕ್ಕನೆ ಹಿಂಜರಿದಳು. ತಾನು ಮಾಡುವುದು ಸರಿಯೋ ಎಂಬ ವಿಷಯದಲ್ಲಿ ಸಂದೇಹ ಹುಟ್ಟಿತು. ತಿರುಗೊಮ್ಮೆ ವಿಚಾರಮಾಡತೊಡಗಿದಳು. ಆಕ್ರಮಿಸಿದ ಪ್ರದೇಶಗಳ ಜನರ ಮೇಲೆ ಜರ್ಮನರು ನಡೆಸುತ್ತಿದ್ದ ಅತ್ಯಾಚಾರ, ಜರ್ಮನ ಸೈನ್ಯದ ಸಾಮಾನ್ಯ ಸಿಪಾಯಿಯು ಕೂಡಾ ತೋರಿಸುತ್ತಿದ್ದ ರಾಕ್ಷಸೀ ರಕ್ತಪಿಪಾಸೆ, ಅಜ್ಞಾತ ಎಳೆಗೂಸುಗಳಿಗೆ ಅವರು

ಕೊಡುತ್ತಲಿದ್ದ ಚಿತ್ರಹಿಂಸೆ, ಇವೆಲ್ಲಾ ಅವಳ ಕಣ್ಣ ಮುಂದೆ ಬಂದವು. ವೈರಿಗಳಲ್ಲಿ ಮನುಷ್ಯತ್ವದ ಆಸೆ ಮಾಡುವುದು ಬರೀ ಹುಚ್ಚುತನವೆಂದು ಅವಳಿಗೆ ಮನವರಿಕೆಯಾಯಿತು.

ಇಂತಹ ಪರಸ್ಪರ ವಿರೋಧ ವಿಚಾರಗಳಲ್ಲಿ ಮಗ್ನಳಾಗಿದ್ದ ಒಲೆನಾಳಿಗೆ ಅಲ್ಲೇ ನಿದ್ದೆ ಹತ್ತಿತು. ಕನಸಿನಲ್ಲಿ ಒಂದು ಮಿದುವಾದ ಹಾಸಿಗೆಯನ್ನು ಕಂಡಳು. ತನ್ನ ಗಂಡನು ಅದನ್ನು ತೋರಿಸಿ ಮಗುವನ್ನು ಅದರಲ್ಲಿ ಮಲಗಿಸೆಂದು ಹೇಳುತ್ತಿದ್ದನು. ಎಂತಹ ಆನಂದದಾಯಕ ಪ್ರಸಂಗ! ಆದರೆ ಮಗುವನ್ನು ಆ ಹಾಸಿಗೆಯಲ್ಲಿ ಮಲಗಿಸುವಷ್ಟರಲ್ಲಿ ಯಾರೊ ಕಾಲಿನಿಂದ ಒದ್ದು ಅವಳನ್ನು ದೂಡಿದರು. ಮಗು ಕೆಳಕ್ಕೆ ಬಿತ್ತು. ಅದರ ಚೀರಾಟಕ್ಕೆ ಒಲೆನಾಳಿಗೆ ಎಚ್ಚರವಾಯಿತು. ಕಣ್ಣು ತೆರೆದು ನೋಡುವಾಗ ಮಗು ನಿಜವಾಗಿಯೂ ಅವಳ ಕೈಯಿಂದ ಕೆಳಗೆ ಬಿದ್ದಿತ್ತು. ಕಾವಲಿನ ಸಿಪಾಯಿಯು ಅವಳನ್ನು ಎಬ್ಬಿಸಲು ಕಾಲಿನ ಬೂಟಿನಿಂದ ಮೈಗೆ ಒದೆಯುತ್ತಿದ್ದನು.

ಒಲೆನಾ ಕಣ್ಣು ತೆರೆದಳು. ಆ ಸಿಪಾಯಿಯು ತನ್ನ ಕಡೆಗೆ ಒಗೆದ ಅರಿವೆಯಿಂದ ಮೈಯನ್ನು ಮುಚ್ಚಿಕೊಂಡು ಅವನು ಸನ್ನೆಯಿಂದ ಹೇಳಿದಂತೆ ಮಗುವನ್ನು ತಗೊಂಡು ಅವನನ್ನು ಹಿಂಬಾಲಿಸಿದಳು.

ಕರ್ಟನು ತನ್ನ ಆಫೀಸಿನಲ್ಲಿ ಕೂತಿದ್ದನು. ಅಸಮಾಧಾನವನ್ನು ಸೂಚಿಸುವ ಅವನ ಮೇಜಿನ ಬಡಿತವು ಜೋರಾಗುತ್ತಾ ನಡೆದಿತ್ತು. ಗ್ವೆರಿಲ್ಲಾಗಳ ಪತ್ತೆಹಚ್ಚಲು ಅಸಮರ್ಥನಾದುದರಿಂದ ಮೇಲಧಿಕಾರಿಗಳ ಮುಂದೆ ಅವನ ಪರ್ಚಸ್ಸು ಇಳಿಮುಖವಾಗಿತ್ತು. ಅದರಿಂದ ಅವನ ಚಿತ್ತಸ್ವಾಸ್ಥ್ಯವು ಎಂದೊ ಮಾಯವಾಗಿತ್ತು. ಒಲೆನಾಳನ್ನು ಅವನ ಮುಂದೆ ನಿಂದಿರಿಸಲಾಯಿತು. ನಿಲ್ಲುವ ಶಕ್ತಿ ಕೂಡ ಅವಳಲ್ಲಿ ಎಳ್ಳಷ್ಟೂ ಉಳಿದಿರಲಿಲ್ಲ; ನಿಲ್ಲಿಸಿದೊಡನೆ ಮುಗ್ಗರಿಸಿ ಬೀಳುವಂತಾದಳು. ಕರ್ಟನು ಒಂದು ಖುರ್ಚಿಯನ್ನು ತರಿಸಿ ಅವಳಿಗೆ ಕೂಡಲು ಹೇಳಿದನು.

ಸೋತು ಸುಣ್ಣವಾಗಿದ್ದ ಅವಳ ಕಾಲುಗಳು ಖುರ್ಚಿಯನ್ನು ಕಂಡೊಡನೆ ತಾವಾಗಿ ದೇಹವನ್ನು ಅದರ ಬಳಿ ಕೊಂಡುಹೋದುವು

ಹಸಿವು, ನೋವುಗಳಿಂದ ಜರ್ಜರಿತವಾದ ಅವಳ ದೇಹವು, ಕರ್ಟನು ಕೂಡ್ರಲು ಹೇಳುವ ಮೊದಲೇ ತಾನಾಗಿ ಖುರ್ಚಿಯ ಮೇಲೆ ವಿಶ್ರಮಿಸಿತು. ಶೂನ್ಯದೃಷ್ಟಿಯಿಂದ ಅವಳು ಕರ್ಟನ ಕಡೆಗೆ ನೋಡಹತ್ತಿದಳು. ಕರ್ಟನು ಮಗುವನ್ನೊಮ್ಮೆ ದಿಟ್ಟಿಸಿ ನೋಡಿ "ಗಂಡೋ, ಹೆಣ್ಣೋ?" ಎಂದು ಅಕಸ್ಮಾತ್ತಾಗಿ ಕೇಳಿದನು.

ಒಣಗಿ ಒಡೆದುಹೋಗಿದ್ದ ತುಟಿಗಳ ನಡುವಿನಿಂದ ಕ್ಷೀಣಸ್ವರದಲ್ಲಿ ಅವಳು ಉತ್ತರವಿತ್ತಳು. "ಗಂಡು." ಅವಳಲ್ಲಿ ಸರಿಯಾಗಿ ಮಾತಾಡುವಷ್ಟು ಕೂಡಾ ಶಕ್ತಿ ಇಲ್ಲವೆಂಬುದನ್ನು ಕರ್ಟನು ಮನಗಂಡನು ಗ್ಯಿರಿಲ್ಲಾ ತಂಡದ ಗುಟ್ಟಿನ ಮಾಹಿತಿಯನ್ನು ಅವಳ ಬಾಯಿಯಿಂದ ಹೊರಪಡಿಸಲು ಇದು ಕೊನೆಯ ಪ್ರಯತ್ನವಾಗಿತ್ತು ಕಲ್ಪನಾತೀತವಾದ ಯಾವತ್ತೂ ಚಿತ್ರಹಿಂಸೆಯನ್ನು ಅವಳಿಗೆ ಕೊಡಲು ಕರ್ಟನು ಸಿದ್ಧತೆಯನ್ನು ಮಾಡಿದ್ದರೂ ಕೇಳಿದ ಪ್ರಶ್ನೆಗಳಿಗೆ ಉತ್ತರಕೊಡುವಷ್ಟರ ಮಟ್ಟಿನ ದೇಹಶಕ್ತಿಯನ್ನು ಅವಳಲ್ಲಿ ಇರಗೊಡುವುದು ಅವನ ಉದ್ದೇಶಸಾಧನೆಗೆ ಅಗತ್ಯವಿತ್ತು. ಅದಕ್ಕಾಗಿ ಸಿಪಾಯಿಗೆ ಸ್ವಲ್ಪ ಹಾಲು ತರಲು ಹೇಳಿದನು. ಸಿಪಾಯಿಯು ಒಂದು ಲೋಟದಲ್ಲಿ ಹಾಲು ತಂದನು. ಅವಳ ಬುದ್ಧಿಯ ನಿಗ್ರಹವನ್ನು ಮೀರಿದ ಅವಳ ಕೈಗಳು ಹಾಲನ್ನು ಕಂಡ ಕೂಡಲೇ ಅವಳ ಮಿದುಳಿನ ಸೂಚನೆಯ ದಾರಿ ನೋಡದೆ ಆ ಲೋಟವನ್ನು ಹಿಡಿದು ಬಾಯ ಬಳಿ ಕೊಂಡುಹೋದುವು. ಒಂದೆರಡು ದೊಡ್ಡ ಗುಟುಕುಗಳನ್ನು ಕುಡಿದಳು. ಹೋದ ಚೈತನ್ಯ ಕೆಲಮಟ್ಟಿಗೆ ಬಂದಂತಾಯಿತು. ಇನ್ನು ಮಗುವಿಗೆ ಒಂದು ಗುಟುಕು ಕುಡಿಸಬೇಕೆಂದು ಹಾಲಿನ ಲೋಟವನ್ನು ಅದರ ಬಾಯಿಗೆ ಇಟ್ಟಳು. ಅಷ್ಟರಲ್ಲಿ ಕರ್ಟನ "ಸಾಕು" ಎಂಬ ಗರ್ಜನೆಯಾಯಿತು. ಸಿಪಾಯಿಯು ಲೋಟವನ್ನು ಅವಳ ಕೈಯಿಂದ ಎಳೆದು ತೆಗೆದನು. ಅವಳ ದೃಷ್ಟಿಯು ನಿರಾಶೆಯಿಂದ ಆ ಲೋಟವನ್ನೇ ಹಿಂಬಾಲಿಸಿದುವು.

"ಎಷ್ಟು ಮುದ್ದಾಗಿದೆ ನಿನ್ನ ಮಗು! ನಿನಗೆ ತಿಳಿದಿರುವುದನ್ನು ಒಮ್ಮೆ ಹೇಳಿಬಿಡು. ನಿನ್ನ ಮಗುವಿಗೆ ಉತ್ತಮವಾದ ಆಹಾರ ತರಿಸಿ ಕೊಡುವೆ." ಕರ್ಟನೆಂದನು.

ಒಲೆನಾ ಮಾತೆತ್ತಲಿಲ್ಲ ಅವಳ ಕಳೆಗುಂದಿದ ಮುಖದಲ್ಲಿ ಸ್ಥೈರ್ಯ ನಿರ್ಧಾರಗಳ ಭಾವ ಒಂದು ವ ೂಡಿತು. "ನೋಡು, ಈಗ ನಿನ್ನೊಬ್ಬಳ ಪ್ರಶ್ನೆಯೊಂದೇ ಅಲ್ಲ. ನಿನ್ನ ಈ ಮುದ್ದು ಮಗುವನ್ನು ಕೊಲ್ಲುತ್ತೀಯೊ ಉಳಿಸುತ್ತಿಯೋ ವಿಚಾರಮಾಡು. ತಾಯಿತನದ ಹೊಣೆಗಾರಿಕೆ ನಿನ್ನ ಮೇಲಿದೆ, ಮರೆಯಬೇಡ" ಕರ್ಟನು ಅವಳ ಹತ್ತಿರ ಬಂದು ಹೇಳಿದನು. ಒಲೆನಾ ಮೌನವನ್ನು ಬಿಡಲಿಲ್ಲ ಅವಳ ದೃಢವಾದ ಮನೋನಿರ್ಧಾರವು ಮುಖದಲ್ಲಿ ಸ್ಪಷ್ಟವಾಗಿ ಕಾಣಸಹತ್ತಿತು. ತನ್ನ ಮಗುವನ್ನು ಇನ್ನೂ ಬಲವಾಗಿ ಅಪ್ಪಿಕೊಂಡಳು.

ಕರ್ಟನು ತನ್ನ ಖುರ್ಚಿಗೆ ಹಿಂತಿರುಗಿದನು. ಪ್ರಶ್ನೆಗಳ ಸುರಿಮಳೆ ಸುರುವಾಯಿತು "ನಿನ್ನೆ ರಾತ್ರಿ ಯಾರೊ ನಿನಗೆ ರೊಟ್ಟೀ ತುಂಡು ಕೊಡಲು ಪ್ರಯತ್ನಮಾಡಿದರು ಅದು ಯಾರು?"

"ನನಗೆ ಗೊತ್ತಿಲ್ಲ"

"ಏನೂ, ನಿನಗೆ ಗೊತ್ತಿಲ್ಲ?"

"ಇಲ್ಲ"

ಒಂದು ವೇಳೆ ಈ ಉತ್ತರ ನಿಜವಿದ್ದರೂ ಇರಬಹುದೆಂದು ಕರ್ಟನಿಗೆ ತೋರಿತು.

ಖತ್ರೀದಾರೀ ಯೋಚನೆಯಿಂದ ಪ್ರಶ್ನೆ ಮುಂದರಿಸಿದನು.

"ನಿನ್ನ ನೆರೆಯುವರಲ್ಲಿ ಯಾರಿಗೆ ಮಕ್ಕಳಿವೆ?"

"ಮಕ್ಕಳು!" ಒಲೆನಾ ಆಶ್ಚರ್ಯದಿಂದ ಉದ್ಗರಿಸಿದಳು. "ಎಲ್ಲರಿಗೂ ಇವೆ"

"ನಿನಗೆ ರೊಟ್ಟೀ ಕೊಡಲು ಬಂದ ಹುಡುಗ ಹತ್ತು ಹನ್ನೆರಡು ವಯಸ್ಸಿನವ. ಆ ವಯಸ್ಸಿನ ಹುಡುಗನನ್ನು ಯಾರು ಕಳಿಸಿರಬಹುದು?"

ಒಲೆನಾ ಮನಸ್ಸಿನಲ್ಲೇ ಯೋಚಿಸಿದಳು. ನೆರೆಕರೆಯ ಎಲ್ಲರ ನೆನಪು ಮಾಡಿದಳು. ಕರ್ಟನಿಗೆ ತಿಳಿಸುವದಲ್ಲವಾದರೂ ಜರ್ಮನ ಗುಂಡನ್ನು ಲೆಕ್ಕಿಸದೆ ಅವಳಿಗೆ ಸಹಾಯ ಮಾಡಲು ಬಂದವರ್‍ಯಾರೆಂದರೆ ತಿಳಿಯಲು ಅವಳಿಗೂ ಆತುರವಿತ್ತು. ಆದರೆ ಎಷ್ಟೊ ಮನೆಗಳಲ್ಲಿ ಹತ್ತು, ಹನ್ನೆರಡು

ವರ್ಷದ ಹುಡುಗರಿದ್ದರು. ಅವರ ಪೈಕಿ ರೊಟ್ಟೀ ಕೊಡಲು ಬಂದವರ್ಯಾರೆಂದು ಊಹಿಸುವುದು ಸಾಧ್ಯವೇ ಇರಲಿಲ್ಲ.

"ನಾನು ಅರಿಯೆನು. ಊರಲ್ಲಿ ಎಲ್ಲ ಮನೆಗಳಲ್ಲೂ ಹುಡುಗರಿದ್ದಾರೆ." ಎಂದು ಸ್ಪಷ್ಟವಾದ ಸ್ವರದಲ್ಲಿ ಹೇಳಿದಳು.

ಕರ್ಟಿಸನಿಗೆ ಅವಳು ಹೇಳಿದ್ದು ನಿಜವೆನಿಸಿತು. ಆ ವಿಷಯದಲ್ಲಿ ಪ್ರಶ್ನೆ ಮಾಡುವುದನ್ನು ಬಿಟ್ಟು ಮುಖ್ಯ ವಿಷಯದ ಕಡೆಗೆ ಹೊರಳಿದನು.

"ಮುಂಗುರುಳು ಈಗ ಎಲ್ಲಿರಬಹುದು ?"

ಒಲೆನಾಳ ವೈ ತಣ್ಣಗಾಯಿತು. ಈ ಚೌಕಶಿಗೆ ಕೊನೆ ಯಾವಾಗ ಎಂದೆನಿಸಿತವಳಿಗೆ. ನಕಾರಸೂಚಕವಾಗಿ ತಲೆಯನ್ನು ಅಲ್ಲಾಡಿಸಿದಳು. "ನನಗೆ ತಿಳಿದಿಲ್ಲ."

"ನಿನಗೆ ತಿಳಿದಿಲ್ಲ ? ಇರಲಿ ನೀನು ಮನೆಗೆ ಮರಳಿದಾಗ ಅವನು ಎಲ್ಲಿದ್ದ ?"

"ಒಂದು ಅಡವಿಯಲ್ಲಿದ್ದ."

"ಯಾವ ಅಡವಿ ?"

"ಯಾವುದೆಂದು ನನಗೆ ಗೊತ್ತಿಲ್ಲ ಒಂದು ಅಡವಿ"

"ಇಲ್ಲಿ ಸುತ್ತಲೂ ಅಡವಿಗಳಿವೆ. ನೀನು ಯಾವ ದಿಕ್ಕಿನಿಂದ ಊರಿಗೆ ಬಂದೆ ?"

"ನನಗೆ ನೆನಪಿಲ್ಲ ಗೊತ್ತೂ ಇಲ್ಲ ಎಲ್ಲಾ ಕಡೆಗಳಲ್ಲೂ ದಪ್ಪವಾಗಿ ಹಿಮ ಬಿದ್ದಿತ್ತು. ನನ್ನನ್ನು ಮನೆಯ ರಸ್ತೆಯಲ್ಲಿ ತಂದು ಬಿಟ್ಟರು, ಅಷ್ಟು ಮಾತ್ರ ನನಗೆ ಗೊತ್ತು."

"ಯಾವ ಕಡೆಯಿಂದ ರಸ್ತೆಗೆ ತಂದರು ?"

"ಯಾರಿಗೆ ನೆನಪಿದೆ ?"

"ಇಷ್ಟು ಬೇಗ ಮರೆಯುವುದು ಸಾಧ್ಯವೇ ? ನೀನು ಮರಳಿ ನಾಲ್ಕು ದಿವಸವಾಯಿತಷ್ಟೆ ?"

ಒಲೆನಾ ಬಾಯಿ ತೆರೆಯಲಿಲ್ಲ.

"ನೋಡು, ಈಗ ನೀನು ಒಬ್ಬಳೇ ಅಲ್ಲ. ಈಗ ನೀನು ತಾಯಿ."

ಈ ನರಕಯಾತನೆಯ ಮಧ್ಯದಲ್ಲೂ ತಾಯಿತನದ ಕಲ್ಪನೆಯು ಮನಸ್ಸಿಗೆ ಒಂದು ರೀತಿಯ ಹುರುಪನ್ನು ಕೊಟ್ಟಿತು. ಅಭಿಮಾನ ಹಾಗೂ ಆನಂದದಿಂದ ಮಗುವಿನ ಮುದ್ದು ಮೊಗವನ್ನೊಮ್ಮೆ ನೋಡಿದಳು ತನಗೆ ತಿಳಿಯದಂತೆಯೇ ಅವಳ ಮುಖದಲ್ಲಿ ನಗೆಯೊಂದು ಮೂಡಿತು.

ಕರ್ಟಿಸು ಮುಂದರಿಸಿದನು. "ನಿನ್ನ ಮಗು ಆರೋಗ್ಯವಂತನಾಗಿ ಸುಖದಲ್ಲಿ ಬೆಳೆಯಬೇಕೆಂದು ನಿನಗೆ ಆಸೆ ಇಲ್ಲವೇ ?"

ಕರ್ಟಿಸು ಈ ರೀತಿಯ ಸಹಾನುಭೂತಿಯ ಮಾತುಗಳನ್ನೇಕೆ ಆಡುತ್ತಾನೆಂದು ಒಲೆನಾಳಿಗೆ ತಿಳಿಯಲಿಲ್ಲ. ಮಗು ಸುಖದಲ್ಲಿ ಬೆಳೆಯ ಬೇಕೆಂದು ಯಾವ ಮಾತೆಗೆ ತೋರದಿರಲಿಕ್ಕಿಲ್ಲ?

ಮಗುವಿನ ಭಾವೀ ಬಾಲಲೀಲೆಗಳ ಸವಿಯನ್ನು ಒಲೆನಾ ಮನಸ್ಸಿನಲ್ಲೇ ಉಂಡಳು ಅವಳ ಮುಖವು ಮುಂದೆ ಬರಬಹುದೆಂದೆಣಿಸಿದ, ಸುಖದ ಕಲ್ಪನೆಯಿಂದ ಅರಳಿತು ತನ್ನ ಮಗು ಅಂಬೆಗಾಲು ಹಾಕುವನು, ತೊದಲ್ನುಡಿ ಯಾಡುವನು. ನಿಲ್ಲಲು ಯತ್ನಿಸಿ ಮುಗ್ಗರಿಸಿ ಬೀಳುವನು. ಸ್ವಲ್ಪ ದೊಡ್ಡವನಾದ ಮೇಲೆ ತೋಟದಲ್ಲೆಲ್ಲಾ ಅಡ್ಡಾಡುವನು ಸಿಟ್ಟಿನಿಂದ ಆಟದ ಸಾಮಾನುಗಳನ್ನೆಲ್ಲಾ ಒಗೆಯುವನು. ಹೀಗೆ ಮುಂದಾಗ ಬಹುದಾದ ಘಟನೆಗಳೆಲ್ಲ ಚಲಚ್ಚಿತ್ರದಂತೆ ಅವಳ ಮನಶ್ಚಕ್ಷುವಿನ ಮುಂದೆ ನಲಿಯತೊಡಗಿದುವು.

"ನೋಡು, ಒಲೆನಾ. ನಿನ್ನ ಮುಂಗುರುಳಿನ ಪತ್ತೆ ನಮಗೆ ಇಂದಲ್ಲ, ನಾಳೆ ಹತ್ತಿಯೇ ಹತ್ತುವುದು. ನಿಮ್ಮ ಕೆಂಪು ಸೇನೆಯ ಗೋಣು ಮುರಿದದೆ. ಇನ್ನು ಈ ಹಟವೇಕೆ ? ಅಡವಿಗಳೆಲ್ಲಾ ನಮ್ಮ ಸೈನ್ಯಗಳಿಂದ ಸುತ್ತಲ್ಪಟ್ಟಿವೆ. ಅವುಗಳಲ್ಲಿ ಅವಿತಿದ್ದ ಗ್ಯುರಿಲ್ಲಾ ತಂಡಗಳಿಗೆ ಪಲಾಯನ ಮಾಡಲು ಎಡೆಯೇ ಇಲ್ಲ. ಹೆಚ್ಚೆಂದರೆ ಇನ್ನು ನಾಲ್ಕು ಐದು ದಿನಗಳ ಮಾತು. ಅವರೆಲ್ಲರೂ ನಮ್ಮ ಕೈಯೊಳಗೆ ಬಿದ್ದೇ ಬೀಳುವರು. ನೀನು ಮಾಡಿದ್ದೆಲ್ಲವನ್ನೂ ಕ್ಷಮಿಸುವೆ. ಸೇತುವೆ ಹಾರಿಸಿದ್ದನ್ನೂ ಕ್ಷಮಿಸುವೆ. ಅದನ್ನೆಲ್ಲಾ ನೀನು ಸ್ವಯಂಪ್ರೇರಣೆಯಿಂದ ಮಾಡಿದ್ದಲ್ಲ. ಗ್ಯುರಿಲ್ಲಾಗಳ ದುರ್ಬೋಧನೆಯಿಂದ ಮಾಡಿದ್ದಾಗಿರಬೇಕು. ನೀನು ಈ ವರೆಗೆ ಮಾಡಿದ

ಯಾವ ಕೃತ್ಯಕ್ಕಾಗಿಯೂ ನಿನ್ನನ್ನು ಶಿಕ್ಷಿಸುವದಿಲ್ಲ. ನೀನು ನಿಶ್ಚಿಂತಳಾಗಿ ಊರಲ್ಲಿದ್ದು ನಿನ್ನ ಮಗುವಿನ ಪಾಲನೆ ಮಾಡು."

ಕರ್ಟನ ಮಾತುಗಳ ಇಂಗಿತವೇನೂ ಒಲೆನಾಳಿಗೆ ತಿಳಿಯಲಿಲ್ಲ. ಶೂನ್ಯದೃಷ್ಟಿಯಿಂದ ಅವನನ್ನೇ ನೋಡಹತ್ತಿದಳು.

ಕರ್ಟನು ಮುಂದೆ ಹೇಳಿದನು: "ನೋಡು, ನಾನೇನು ಹಿಂಸ್ರಪಶು ಅಲ್ಲ. ಆದರೆ, ನನ್ನ ಕರ್ತವ್ಯ ನಾನು ಮಾಡಬೇಕು. ಸೈನಿಕನಾಗಿ ವರಿಷ್ಠರ ಅಜ್ಞೆಯಂತೆ ನನ್ನ ತಂದೆನಾಡಿನ ಹಿತಕ್ಕಾಗಿ ನಾನು ವರ್ತಿಸಲೇಬೇಕು ನಿನಗಾಗಿ, ನಿನ್ನ ಮಗುವಿಗಾಗಿ ನನಗೆ ಸಹಾನುಭೂತಿ ಇದೆ. ನಿನ್ನ ಮಗುವಿನ ವಿಷಯದಲ್ಲಾದರೂ ನಿನಗೆ ಕನಿಕರ ಹುಟ್ಟುವುದಿಲ್ಲವೇ? ಒಂಬತ್ತು ತಿಂಗಳು ಹೊಟ್ಟೆಯಲ್ಲಿ ಹೊತ್ತು ಈಗ ಹುಟ್ಟಿದೊಡನೆ ಅದರ ಕೊಲೆ! ನೀನೇ ಮಾಡುವೆಯಾ?"

"ಕೊಲೆ" ಏನೂ ತಿಳಿಯದೆ ಅಜ್ಞಾತ ವಿಸ್ಮಯದಿಂದ ಒಲೆನಾ ಅವನು ಹೇಳಿದ ಶಬ್ದವನ್ನೇ ಉಚ್ಚರಿಸಿದಳು.

"ಹೌದು, ಕೊಲೆಯೇ. ನಾನು ಕೇಳಿದ ಪ್ರಶ್ನೆಗಳಿಗೆ ನೀನು ಸರಿಯಾಗಿ ಉತ್ತರ ಕೊಡದಿದ್ದರೆ ನಿನ್ನ ಮಗುವಿಗೆ ನೀನೇ ಮರಣದಂಡನೆ ವಿಧಿಸಿದಂತಾಗುವುದು, ತಿಳಿಯಿತೇ? ಚೆನ್ನಾಗಿ ಯೋಚಿಸು ನಾನು ಒಂದೆರಡು ತಾಸು ಕಾಯಲು ಸಿದ್ಧನಿದ್ದೇನೆ. ವೃಥಾ ಬುದ್ಧಿಗೇಡಿಯಾಗಬೇಡ. ಹೇಗೂ ಗ್ಯುರಿಲ್ಲಾಗಳನ್ನು ರಕ್ಷಿಸಲು ಯಾರಿಂದಲೂ ಸಾಧ್ಯವಿಲ್ಲ. ನೀನು ಸುಮ್ಮನೆ ಈ ಮುದ್ದು ಮಗುವನ್ನೇಕೆ ಬಲಿಗೊಡುವೆ?"

ತನ್ನ ಕಿಸೆಯಿಂದ ಸಿಗರೇಟೊಂದನ್ನು ತೆಗೆದು ಬಾಯೊಳಗಿಟ್ಟು ಕಡ್ಡಿ ಹಚ್ಚಿ ಅದನ್ನು ಹೊತ್ತಿಸಿದನು ಒಲೆನಾ, ಮುಗಿಲಿನಂತೆ ವೃತ್ತಾಕಾರದಲ್ಲಿ ಮೇಲೇಳುವ ಅದರ ಹೊಗೆಯ ರಾಶಿಯನ್ನು ನೋಡುತ್ತಾ ನಿಂತಳು. ತುಸು ಹೊತ್ತು ಈ ರೀತಿ ಹೊಗೆ ಬಿಟ್ಟ ಮೇಲೆ ಕರ್ಟನು ಪುನಃ ಕೇಳಿದನು:

"ಏನನ್ನುವೆ?"

ಒಲೆನಾ ಮಾತಾಡಲಿಲ್ಲ.

"ಪ್ರಶ್ನೆಗೆ ಉತ್ತರ ಕೊಡುವುದಿಲ್ಲವೇ?"

" ನನಗೆ ಒಂದೂ ಗೊತ್ತಿಲ್ಲ "

ಈ ಉತ್ತರವನ್ನು ಕೇಳಿ ಕರ್ಟನು ರೌದ್ರಾವತಾರವನ್ನೇ ತಾಳಿದನು. "ನಿನ್ನೊಡನೆ ಮನುಷ್ಯರಂತೆ ಸಹಾನುಭೂತಿಯಿಂದ ವರ್ತಿಸಿದರೂ ಪರಿಣಾಮ ಇಷ್ಟೆ ಅಲ್ಲವೇ ? ತೋರಿಸುತ್ತೇನೆ ನಿನಗೆ, ನಿನ್ನ ತಿಳಿಗೇಡಿತನದ ಫಲವೇನೆಂದು "

ಇಷ್ಟು ಹೇಳಿ ಕರ್ಟನು ಇಬ್ಬರು ಸಿಪಾಯಿಗಳನ್ನು ಕರೆದನು. ಅವನ ಅಪ್ಪಣೆಯಂತೆ ಸಿಪಾಯಿಗಳು ಅವಳನ್ನು ಹಿಡಿದರು. ಏನಾಯಿತೆಂಬ ಅರಿವಾಗುವ ಮೊದಲೇ ಕರ್ಟನು ಮಗುವನ್ನು ಅವಳಕೈಯಿಂದ ಎಳೆದು ತೆಗೆದನು. ಒಲೆನಾಳಿಗೆ ವಜ್ರಾಘಾತವಾದಂತಾಯಿತು ಮಗುವನ್ನು ರಕ್ಷಿಸುವ (Instinct)ನೈಸರ್ಗಿಕ ಪ್ರೇರಣೆಯಿಂದ ಕರ್ಟನ ಮೈಮೇಲೆ ಹಾರಲು ಯತ್ನಿಸಿದಳು. ಆದರೆ ಯಮಪಾಶದಂತೆ ಹಿಡಿದುಕೊಂಡಿದ್ದ ಅವರಿಬ್ಬರ ಕೈಯಿಂದ ಬಿಡಿಸಿಕೊಳ್ಳುವುದು ಅವಳಿಗೆ ಹೇಗೆ ಸಾಧ್ಯವಾಗಬೇಕು ?

ಕರ್ಟನು ಮಗುವನ್ನು ಮೇಜಿನ ಮೇಲೆ ಮಲಗಿಸಿದನು. ಭಯ-ಭೀತ ದೃಷ್ಟಿಯಿಂದ ಒಲೆನಾ ಮಗುವನ್ನೇ ನೋಡುತ್ತಿದ್ದಳು ಮುಂದೆ ಮಾಡಲಿರುವ ಕೃತ್ಯದ ವಿಚಾರದಿಂದ ಅಸ್ವಸ್ಥನಾದ ಕರ್ಟನೂ ಅದನ್ನೇ ನೋಡುತ್ತಿದ್ದನು. ಆ ಎಳೇ ಮುದ್ದು ಮಗು ಮಾತ್ರ ಇಂದು, ಮುಂದು ಯಾವುದನ್ನೂ ಅರಿಯದೆ ಆರಾಮವಾಗಿ ನಿದ್ರಿಸುತ್ತಲಿತ್ತು ಇವರು ನೋಡುತ್ತಿರುವಂತೆ, ಮಗುವಿನ ಮುಚ್ಚಿದ್ದ ಕಣ್ಣರೆಪ್ಪೆಗಳು ಮೆಲ್ಲನೆ ಕಂಪಿಸಿದಂತಾಗಿ ತೆರೆದುವು. ಅದರ ಕಣ್ಣಿನ ನೀಲಮಣಿಗಳು ಉಕ್ಕಿ ಬರುತ್ತಲಿದ್ದ ಕಣ್ಣೀರಿನಲ್ಲಿ ಅಲುಗಾಡುತ್ತಿದ್ದಂತೆ ತೋರಿತು ತುಟಿಗಳು ನಡುಗಹತ್ತಿದುವು. ಮಗು ಕೂಗಲು ತೊಡಗಿತು. ಅದರ ರೋದನವನ್ನು ಕೇಳಿ ಒಲೆನಾ ಎಲ್ಲವನ್ನೂ ಮರೆತಳು ಮಾತೃಸಹಜವ್ಯಾಕುಲದಿಂದ ಅದಿದ್ದೆಡೆಗೆ ಧಾವಿಸಲು ತಿರುಗೊಮ್ಮೆ ಉರುಳಾಡಿದಳು. ಆದರೆ ಹಿಡಿದಿದ್ದ ಸಿಪಾಯಿಗಳ ಬಿಗಿತ ಬಲವಾಗಿಯೇ ಇತ್ತು.

" ಸಾಕಾಯಿತು ಹಿತೋಪದೇಶ " ಕರ್ಟನು ಕರ್ಕಶಸ್ವರದಲ್ಲಿ ಮಾತಾಡಿದನು

" ಈಗಾದರೂ ಹೇಳುವೆಯೊ ಇಲ್ಲವೊ,ಕೊನೆಯ ಸಾರಿ ಕೇಳುತ್ತೇನೆ?"

ಒಲೆನಾ ಮಗುವಿನ ಮೇಲೆ ನೆಟ್ಟ ತನ್ನ ದೃಷ್ಟಿಯನ್ನು ಅಲ್ಲಿಂದ ತೆಗೆಯದೆ ಸ್ತಬ್ಧಳಾಗಿ ನಿಂತಿದ್ದಳು. ಬೇರೆ ಯಾವ ಕಡೆಗೂ ಅವಳ ಲಕ್ಷ್ಯವಿರಲಿಲ್ಲ.

" ಏನು ಕೇಳಿಸುವದಿಲ್ಲವೇ ?" ಕರ್ಟನು ಇನ್ನೂ ಗಟ್ಟಿಯಾಗಿ ಒದರಿದನು.

" ನನಗೇನೂ ಹೇಳಲಿಕ್ಕಿಲ್ಲ " ಮಗುವಿನ ಕಡೆಯಿಂದ ಕಣ್ಣನ್ನು ಕದಲಿಸದೆ ಒಲೆನಾ ಉತ್ತರವಿತ್ತಳು.

" ನೋಡು ಹಾಗಿದ್ದರೆ " ಎಂದು ಗರ್ಜಿಸಿ ನಾಯಿ-ಮರಿಯನ್ನು ಎತ್ತಿದಂತೆ ಮೇಜಿನ ಮೇಲಿದ್ದ ಕೂಸನ್ನು ಕರ್ಟನು ಸಟಕ್ಕನೆ ಮೇಲಕ್ಕೆತ್ತಿದನು ಗಾಳಿಯಲ್ಲಿ ಹಾರ್‍ಯಾಡುತ್ತಿದ್ದ ಅದರ ಕಾಲುಗಳ ಕೆಂಪು ಉಗುರುಗಳು ಹೂವಿನ ಎಸಳುಗಳಂತೆ ಸುಂದರವಾಗಿ ಕಂಡವು.

ಕರ್ಟನು ಪಿಸ್ತೂಲನ್ನು ಹೊರಗೆ ತೆಗೆದನು. ಮಗುವನ್ನು ಕೊಲ್ಲುವ ಭೀತಿಯನ್ನು ಹಾಕುತ್ತಾ ಇದ್ದರೂ ಪ್ರತ್ಯಕ್ಷ ಆ ಕೃತ್ಯವನ್ನು ಮಾಡಲು ಕರ್ಟನು ಉದ್ಯುಕ್ತನಾದಾನೆಂದು ಒಲೆನಾ ಎಂದೂ ಎಣಿಸಿರಲಿಲ್ಲ. ಈಗ ಅದಕ್ಕೂ ಹಿಂಜರಿಯದ್ದನ್ನು ಕಂಡು ಅವಳಿಗೆ ಆಕಾಶವೇ ಕಳಚಿ ಬಿದ್ದಂತಾಯಿತು. ಅವಳ ದೃಷ್ಟಿಯಲ್ಲಿ ಕರ್ಟನು ಸಾಮಾನ್ಯ ಜರ್ಮನ ಆಫೀಸರನಾಗಿರದೆ ಎಳೆ ಮಕ್ಕಳನ್ನು ಹರಿದು ತಿನ್ನುವ ರಕ್ಕಸನಂತೆ ಕಂಡನು.

" ನೀನು ಮಾತೆಯೊ, ಬೊಲ್ಶೆವಿಕ್ ನಾಯಿಯೋ ಹೇಳು ?"

ತನ್ನ ಕೂಸಿನ ಸನ್ನಿಹಿತವಾದ ಕೊಲೆಯ ಯೋಚನೆಯಿಂದ ನಿಂತು ಹೋಗಿದ್ದ ಅವಳ ಹೃದಯಕ್ರಿಯೆಯು ಈ ಅವಮಾನಕರ ವಾಕ್ಯಗಳಿಂದ ಥಟ್ಟನೆ ಪುನಃ ಚೇತನಗೊಂಡಿತು.

" ಹೇಳು!" ಎಂದು ಕರ್ಟನು ಪುನಃ ಗರ್ಜಿಸಿದಾಗ " ನಾನು ರಶ್ಯನ್ ಮಾತೆ " ಎಂದು ಧೈರ್ಯಯುಕ್ತ ಸ್ಪಷ್ಟ ಸ್ವರದಲ್ಲಿ ನುಡಿದಳು. ಕರ್ಟನು ಪಿಸ್ತೂಲನ್ನು ಕೂಸಿನ ಮೇಲೆಯೆ ಸಮೀಪಕ್ಕೆ ಕೊಂಡುಹೋದನು. ಅವಳ ದೃಢಸಂಕಲ್ಪವನ್ನು ಸಡಿಲಿಸುವ ಕೊನೆಯ ಪ್ರಯತ್ನವಾಗಿತ್ತು ಅದು.

"ನಿನಗೆ ಇರುವುದು ಇದೊಂದೇ ಮಗುವಲ್ಲವೇ ?"

ಅಲ್ಲವೆಂದು ಸೂಚಿಸಲು ಒಲೆನಾ ತಲೆ ಅಲ್ಲಾಡಿಸಿದಳು.

"ಏನು ? ನಿನಗೆ ಬೇರೆ ಮಕ್ಕಳಿದ್ದಾರೆಯೇ ? ಹುಡುಗರೊ ಹುಡುಗಿಯರೊ ? ಎಲ್ಲಿದ್ದಾರೆ ಅವರೆಲ್ಲಾ ?" ಕರ್ಟನು ಆಶ್ಚರ್ಯಚಕಿತನಾಗಿ ಕೇಳಿದನು

"ಹುಡುಗರು, ಎಲ್ಲಾ ಹುಡುಗರು. ಅಡವಿಯಲ್ಲಿದ್ದಾರೆ ಎಲ್ಲರೂ. ಮುಂಗುರುಳು ಅವರಲ್ಲಿ ಹಿರಿಯುವ"

ಮುಂಗುರುಳಿನ ಹೆಸರು ಉಚ್ಚರಿಸಿದ್ದೇ ತಡ ಕರ್ಟನು ಪಿಸ್ತೂಲಿನ ಕುದುರೆ (Triger) ಯನ್ನು ಎಳೆದನು.

ಪಿಸ್ತೂಲು ಹೊಡೆದ ಶಬ್ದವು ಎಲ್ಲರ ಕರ್ಣರಂಧ್ರಗಳನ್ನು ಭೇದಿಸಿತು. ಒಲೆನಾಳನ್ನು ಹಿಡಿದಿದ್ದ ಸಿಪಾಯಿಗಳು ಕೂಡ ನಡುಗಿದರು.

"ನಿನ್ನ ಮಗುವನ್ನು ನೀನೇನು ಮಾಡಿರುವೆ ನೋಡು" ಎಂದು ಹೇಳಿ ಕರ್ಟನು ಕೂಸಿನ ಮೃತದೇಹವನ್ನು ಎತ್ತಿ ತೋರಿಸಿದನು. ಗುಂಡು ನೇರವಾಗಿ ಮುಖಕ್ಕೆನೇ ನಾಟಿತ್ತು ನೀಲಮಣಿಗಳಂತೆ ಹೊಳೆಯುವ ಕಣ್ಣುಗಳಿಂದ ಹಾಗೂ ಗುಲಾಬಿ ವರ್ಣದ ಗಲ್ಲಗಳಿಂದ ಅತ್ಯಂತ ಮೋಹಕವಾಗಿ ಕಾಣುತ್ತಿದ್ದ ಮುದ್ದುಮೊಗವು ಈಗ ಇರಲಿಲ್ಲ ಅದರ ಬದಲು ನೆತ್ತರು ಸುರಿಯುತ್ತಲಿದ್ದ ಗುಂಡಿನ ದೊಡ್ಡ ಗಾಯವೊಂದಷ್ಟೇ ಕಾಣುತ್ತಿತ್ತು.

ಒಲೆನಾಳಿಗೆ ಇದು ಯಾವುದೂ ಕಾಣುತ್ತಿರಲಿಲ್ಲ ಅವಳು ಆಗ ಗ್ಯುರಿಲ್ಲಾದಳದವರ ಜೊತೆಯಲ್ಲಿ ಅಡವಿಯಲ್ಲಿದ್ದಳು.

"ಇನ್ನಾದರೂ ನಿನಗೆ ಗೊತ್ತಿದ್ದದ್ದನ್ನು ಹೇಳು. ಇಲ್ಲದಿದ್ದರೆ ನಿನ್ನನ್ನೂ ನಿನ್ನ ಮಗುವಿನಂತೆಯೇ ಕೊಲ್ಲುವೆನು." ಕರ್ಟನು ಜೋರಾಗಿ ಒದರಿದನು. ಅವಳು ಅದಕ್ಕೂ ಉತ್ತರ ಕೊಡಲಿಲ್ಲ. ಅದು ಅವಳಿಗೆ ಕೇಳಿಸಲೂ ಇಲ್ಲ. ಇನ್ನು ಜಗತ್ತಿನಲ್ಲಿ ಅವಳಿಗೆ ಏನೂ ಉಳಿದಿರಲಿಲ್ಲ. ಶೂನ್ಯದ ಸಮಾಧಾನವೊಂದು ಅವಳನ್ನು ಆವರಿಸಿತ್ತು. ಅದರಲ್ಲಿ ಆಸೆಗಾಗಲಿ ಅಂಜಿಕೆಗಾಗಲಿ ಎಡೆ ಇರಲಿಲ್ಲ.

"ಹೊಳೆ ದಂಡೆಗೆ ಕೊಂಡುಹೋಗಿ ಇವಳನ್ನೂ ಮುಗಿಸಿಬಿಡಿ." ಎಂದು ಕರ್ಟನು ಸಿಪಾಯಿಗಳಿಗೆ ಆಜ್ಞಾಪಿಸಿ ಅಲ್ಲಿಂದ ಹೊರಟುಹೋದನು.

ಸಿಪಾಯಿಗಳು ಅವಳನ್ನು ದೂಡಿಕೊಂಡು ಹೊಳೆಯ ಕಡೆಗೆ ಕೊಂಡು ಹೋದರು. ಸ್ವಯಂಪ್ರೇರಣೆಯನ್ನು ಸಂಪೂರ್ಣವಾಗಿ ಕಳಕೊಂಡಿದ್ದ ಒಲಿನಾ ಅವರು ದೂಡಿದಷ್ಟೇ ಮುಂದೆ ಹೋಗುತ್ತಿದ್ದಳು. ಅರ್ಧ ದಾರಿ ದಾಟಿದ ಮೇಲೆ ತನ್ನ ಮಗುವಿನ ಕಳೇಬರವು ಒಬ್ಬ ಸಿಪಾಯಿಯ ಕೈಯಲ್ಲಿ ಇರುವುದನ್ನು ನೋಡಿದಳು. ಅವನು ಕಾಲುಗಳಿಂದಅದನ್ನು ಹಿಡಿದ್ದಿದ್ದರಿಂದ ಕೆಳಗೆ ಜೋಲುತ್ತಿದ್ದ ಗಾಯಗೊಂಡ ಮುಖವು ಭೀಭತ್ಸವಾಗಿ ಕಾಣುತ್ತಿತ್ತು. ಮಾತೃಪ್ರೇಮ ಎಷ್ಟು ಅಗಾಧವೊ ಅಷ್ಟೆ ಅಂಧ. ಒಲಿನಾ ಮಗುವಿಗಾಗಿ ಕೈಯನ್ನು ನೀಡಿದಳು ಸಿಪಾಯಿಯು ಮಗುವನ್ನು ಅವಳ ಕೈಗೆ ಕೊಡಲು ಕೊಂಚ ಅನುಮಾನಿಸಿದನು. ಆದರೆ, ಮೃತದೇಹವನ್ನು ಒಯ್ಯುವುದು ಆನಂದದಾಯಕ ಕೆಲಸವಾಗಿರಲಿಲ್ಲ. ಹಾಗಾಗಿ ಕೊನೆಯಲ್ಲಿ ಅವಳ ಕೈಗೆ ಕೊಟ್ಟನು. ಒಲಿನಾ ಅದನ್ನು ತನ್ನ ಎದೆಗೆ ಅಪ್ಪಿ ಹಿಡಕೊಂಡಳು. ಅದರ ಮೈಯ ಬಿಸಿಯು ಇನ್ನೂ ಆರಿರಲಿಲ್ಲ. ಒಲಿನಾಳ ಸುಖಕರವಾಗಿದ್ದ ದಾಂಪತ್ಯಜೀವನದಲ್ಲಿ ಕೂಸಿನದೊಂದೇ ಕೊರತೆ ಇತ್ತು. ಇಪ್ಪತ್ತು ವರ್ಷಗಳ ಕಾಲ ಕಾದು ಕಾದು ಆಮೇಲೆ ಬಂದ ಆ ಮಗು ಕೆಲವೇ ತಾಸು ಗಳಲ್ಲಿ ಹೊರಟುಹೋಯಿತು. ಅವಳೆ, ಅದನ್ನು ಸಾವಿನ ಉಡಿಯಲ್ಲಿ ಹಾಕಿದಳು. ಒಂದು ಶಬ್ದವನ್ನು ಹೇಳಿದರೆ ಅದನ್ನು ಉಳಿಸಬಹುದಿತ್ತು. ಎದೆಗೆ ಅಪ್ಪಿಕೊಂಡಿದ್ದ ಆ ಮಗು ಆ ಶಬ್ದವನ್ನು ಯಾಕೆ ಹೇಳಲಿಲ್ಲ, ಎಂತ ಕೇಳುತ್ತಿರುವಂತೆ ಅವಳಿಗೆ ಭಾಸವಾಯಿತು. "ಇಲ್ಲ, ನನ್ನ ಮುದ್ದು, ಹೇಳಲು ಸಾಧ್ಯವಿರಲಿಲ್ಲ" ಎಂಬ ಶಬ್ದಗಳು ತಿಳಿಯದೇನೇ ಅವಳ ಬಾಯಿ ಯಿಂದ ಹೊರಟವು

ಸಿಪಾಯಿಗಳಿಗೆ ರಶ್ಯನ್ ಮಾತು ಬರುತ್ತಿದ್ದಿಲ್ಲ. ಅವಳು ಯಾರಿಗೊ ಏನಾದರೂ ಸೂಚನೆ ಕೊಡುತ್ತಿರಬಹುದೆಂದು ಎಣಿಸಿ ಅವರಲ್ಲೊಬ್ಬನು 'ಮಾತಾಡಬೇಡ' ಎಂದು ಗಟ್ಟಿಯಾಗಿ ಒದರಿದನು. ಅವರು ತನ್ನನ್ನು ಎಲ್ಲಿಗೆ ಕೊಂಡುಹೋಗುತ್ತಾರೆಂದು ಒಲಿನಾಳಿಗೆ ತಿಳಿದಿರಲಿಲ್ಲ. ಆದರೆ ತಾನು

ನಡೆಯುವುದು ತನ್ನ ಅಂತ್ಯದ ಹಾದಿ ಎಂಬುದು ಅವಳಿಗೆ ಅರಿವಾಗಿದ್ದಿತು. ಆದರಿಂದ ಅವಳಿಗೇನೂ ಅಂಜಿಕೆ ಆಗಲಿಲ್ಲ. ಮಗುವಿನ ಮೃತ್ಯುವಿನ ಮೇಲೆ ಅವಳ ಮಟ್ಟಿಗೆ ಈಗಾಗಲೇ ಎಲ್ಲವೂ ಅಂತ್ಯವಾಗಿತ್ತು.

ಹಿಮಗಾಳಿಯು ಜೋರಾಗಿ ಬೀಸುತ್ತಲಿತ್ತು. ಗಡ್ಡೆಗಟ್ಟಿದ ಮಂಜು ಸೃಷ್ಟಿಯನ್ನೆಲ್ಲಾ ಮುಸುಕಿತ್ತು ಆ ಕಠಿಣ ಚಳಿಯಲ್ಲಿ ಯಾವ ಬಾಗಿಲೂ ತೆರೆದಿರಲಿಲ್ಲ ಹೊರಗೆ ಯಾವ ಮನುಷ್ಯಪ್ರಾಣಿಯೂ ಕಾಣುತ್ತಿರಲಿಲ್ಲ. ಸಾವಿನ ದಾರಿಯಲ್ಲಿ ಒಲೆನಾ ಒಬ್ಬಳೇ ನಡೆದಿದ್ದಳು

ಹೊಡೆತ ಹಾಗೂ ಹಿಮ ಕಡಿತದಿಂದ ಚರ್ಮ ಒಡೆದು ಹೊರ ಸೂಸುವ ನೆತ್ತರಿನಿಂದಾಗಿ ಸರಿಯಾಗಿ ನಡೆಯಲಾರದೆ ಮುಗ್ಗರಿಸಿ ಬೀಳುವ ಅವಳನ್ನು ಹಿಂದಿನಿಂದ ದೂಡುತ್ತಾ ಕೋವಿಯ ಬುಡದಿಂದ ಹೊಡೆಯುತ್ತಾ ಆ ಸಿಪಾಯಿಗಳು ಹೇಗೊ ಹೊಳೆದಂಡೆಗೆ ತಂದರು.

ಇದುವರೆಗೆ ಒಲೆನಾ ಮಗುವನ್ನು ಅಪ್ಪಿಕೊಂಡೇ ಇದ್ದಳು. ಅದರ ಮೈಯ ಬಿಸಿಯು ಆರಿತ್ತು ಒಳಗಿನ ರಕ್ತವೆಲ್ಲಾ ಗಾಯದಿಂದ ಹೊರಗೆ ಹರಿದು ಹೋದುದರಿಂದ ಅದರ ಮುಖದ ಗುಲಾಬಿ ವರ್ಣವು ಕಪ್ಪುಗಟ್ಟಿತ್ತು. ಆದರೆ ಆ ನೊಂದ ಮಾತೃಹೃದಯಕ್ಕೆ ಅದು ಜೀವದಿಂದಿದೆಯೆಂಬ ಭ್ರಾಮಕ ಭಾವನೆಯು ಇನ್ನೂ ಹೋಗಿರಲಿಲ್ಲ ಹೊಳೆಯ ದಡಕ್ಕೆ ತಲುಪಿದೊಡನೆ ಸಿಪಾಯಿಯು ಅದನ್ನು ಕಿತ್ತುಕೊಳ್ಳಲು ಕೈಯಿಂದ ಎಳೆದನು. ಮರಿಯ ರಕ್ಷಣೆಗಾಗಿ ಆಗಂತುಕರ ಮೇಲೆ ಹಾರುವ ಸಿಂಹಿಣಿಯಂತೆ ಒಲೆನಾ ಆ ಸಿಪಾಯಿಯ ಮೇಲೆ ಏರಿ ಹೋಗಿ ಕೂಸನ್ನು ಅವನ ಕೈಯಿಂದ ಪುನಃ ಎಳೆದಳು ಈ ಎಳೆದಾಟದಿಂದ ಮೊದಲೇ ಶಕ್ತಿ ಏನೂ ಇಲ್ಲದ ಅವಳ ತೋಲ ತಪ್ಪಿ, ಅವಳು ಧೊಪ್ಪನೆ ಬಿದ್ದುಬಿಟ್ಟಳು. ಕೂಸು ಅವಳೊಡನೆಯೇ ಕೆಳಗೆ ಬಿತ್ತು. ಒಲೆನಾ ಬಿದ್ದಲ್ಲಿಂದಲೇ ಮಗುವನ್ನು ಎತ್ತಲು ಕೈಚಾಚಿದಳು. ಅವಳು ಎತ್ತುವುದರೊಳಗೆ ಅವಳನ್ನು ತಂದ ಸಿಪಾಯಿಗಳಲ್ಲೊಬ್ಬನು ಬಯೊನೆಟ್ಟನ್ನು ಮಗುವಿನ ದೇಹದಲ್ಲಿ ಕುತ್ತಿ ಅದನ್ನು ಮೇಲಕ್ಕೆತ್ತಿ ನೀರಿಗೆ ಎಸೆದನು. ಆದರೆ ಬಲವಾಗಿ ಬೀಸುತ್ತಿದ್ದ ಗಾಳಿಯಿಂದ ಅವನ ಗುರಿ ತಪ್ಪಿ, ನದಿದೇವತೆಯ ಮಡಿಲನ್ನು ಸೇರುವ ಮೊದಲು ನಿಸರ್ಗವು ಮಾತೆಗೆ

ಮಾಡಿಸುವ ವಂದನೆಯೊ ಎಂಬಂತೆ ಮಗು ಒಲೆನಾಳ ಕಾಲಮೇಲೆ ಬಂದು ಬಿತ್ತು. ಒಲೆನಾ ಸಟಕ್ಕನೆ ಅದನ್ನು ಮೇಲಕ್ಕೆತ್ತಿ ಮುದ್ದಿಟ್ಟಳು. ಅಷ್ಟರಲ್ಲಿ ಎರಡನೇ ಸಿಪಾಯಿಯು ಅದನ್ನು ಎಳೆದು ಪುನಃ ಬೋಯೊನೆಟ್ಟಿಗೆ ಸಿಕ್ಕಿಸಿ ನೇರಾಗಿ ನೀರಿಗೆ ಎಸೆದನು. ಈ ಸಾರೆ ಗುರಿತಪ್ಪಲಿಲ್ಲ. ನೀರಿನ ಪ್ರವಾಹವು ಒಲೆನಾಳ ಕೂಸನ್ನು ತೇಲಿಸಿಕೊಂಡು ಹೋಯಿತು.

ಒಲೆನಾಳಿಗೆ ಸಾಂಘಿಕ ಕೃಷಿಕ್ಷೇತ್ರದಲ್ಲಿ ಆ ನದಿಯ ನೀರನ್ನು ಹಾಯಿಸಿ ಬೆಳೆಸುತ್ತಿದ್ದ ಹುಲುಸಾದ ಬೆಳೆಗಳ ನೆನಪಾಯಿತು. ಕೆಲವೇ ತಾಸುಗಳ ಜೀವಿತವನ್ನು ಪಡೆದು ಬಂದಿದ್ದ ಅವಳ ಮುದ್ದು ಕುವರನನ್ನು ಅನ್ನದಾತೆಯಾದ ನದಿಯು ತನ್ನ ಕೋಮಲ ಆಲಿಂಗನದಿಂದ ಸ್ವಾಗತಿಸಿ ಅವನ ಮೈಯ ಗಾಯಗಳನ್ನು ಸ್ವಚ್ಛವಾಗಿ ತೊಳೆದು ಯಾವ ಜರ್ಮನ ಸೈನ್ಯವು ಹೋಗಲಾರದ ದೂರದ ತನ್ನ ವಿರಾಮಸ್ಥಳಕ್ಕೆ ಒಯ್ಯುತ್ತಿದ್ದಳು.

ತಮ್ಮ ಪಾಲಿನ ಒಂದು ಕೆಲಸವನ್ನು ಮಾಡಿ ಕೃತಕೃತ್ಯರಾದ ಸಿಪಾಯಿಗಳು ತಮ್ಮೊಳಗೆ ಏನೊ ಮಾತಾಡಿಕೊಳ್ಳುತ್ತಿದ್ದರು. ಅಷ್ಟರಲ್ಲಿ ದಾರಿಯ ಮೇಲೆ ಬಿದ್ದಿದ್ದ ಮಂಜುಗಡ್ಡೆಯಲ್ಲಿ ಯಾರೊ ಮೆಟ್ಟಿದ ಶಬ್ದವಾಯಿತು. ಕರ್ಟನು ತೀವ್ರಗತಿಯಿಂದ ಆ ಕಡೆಗೆ ಬರುತ್ತಿದ್ದನು. ಸಿಪಾಯಿಗಳು ನೆಟ್ಟಗೆ ನಿಂತು ಸಲಾಮು ಮಾಡಿದರು. ಒಲೆನಾ ನದಿಯ ಪ್ರವಾಹವನ್ನೇ ಎವೆ ಇಕ್ಕದೆ ನೋಡುತ್ತಿದ್ದಳು. ಕರೆದರೂ ಅವನ ಕಡೆ ನೋಡಲಿಲ್ಲ

ಕರ್ಟನು ಕೋಪಾವೇಶದಿಂದ ನಡುಗುತ್ತಿದ್ದನು. ಸೈನ್ಯದ ಮುಖ್ಯ ಕೇಂದ್ರದಿಂದ ಈಗಾಗಲೇ ಧ್ವನಿಯಂತ್ರ (Telephone) ದ ಮುಖಾಂತರ ಒಂದು ಸಂದೇಶ ಬಂದಿತ್ತು. ಯಾವ ರೀತಿಯಿಂದಾದರೂ ಗ್ಯುರಿಲ್ಲಾಗಳ ವಿಷಯದಲ್ಲಿ ಮಾಹಿತಿ ದೊರಕಿಸಲೇಬೇಕೆಂತ ಕೇಂದ್ರಕಚೇರಿಯ ಸ್ಪಷ್ಟವಾದ ಆದೇಶವಾಗಿತ್ತು. ಗ್ಯುರಿಲ್ಲಾದಳದೊಡನೆ ಇದ್ದ ಒಬ್ಬ ಸ್ತ್ರೀ ಅದೂ ತುಂಬಿದ ಬಸುರಿಯನ್ನು ಹಿಡಿದಿರುವಾಗ ಅವಳಿಂದ ಏನನ್ನೂ ಹೊರಗೆಡಹಲು ಸಾಧ್ಯವಾಗಲಿಲ್ಲವೆಂಬುದನ್ನು ಕೇಂದ್ರದ ಅಧಿಕಾರಿಗಳು ನಂಬಿರಲಿಲ್ಲ. ಬಂಧಿತರಿಂದ ಗುಟ್ಟನ್ನು ರಟ್ಟಿಸಲು ಕರ್ಟನು ತೀರಾ ಅಯೋಗ್ಯನೆಂದು ಅವರು ಅಭಿಪ್ರಾಯಪಟ್ಟಿದ್ದರು. ಕೊನೆಯ ಸಾರಿ ಎಲ್ಲಾ ಉಪಾಯ ಮಾಡಿ

ತುಸುವಾದರೂ ಸುದ್ದಿ ದೊರಕಿಸಲಿಕ್ಕೇಬೇಕೆಂಬ ಕಟ್ಟಪ್ಪಣೆಯು ಕರ್ಟನಿಗೆ ಈಗಾಗಲೇ ಬಂದಿತ್ತು.

ಗ್ಯುರಿಲ್ಲಾಗಳ ಕುರಿತು ಸ್ವಲ್ಪವಾದರೂ ಮಾಹಿತಿಯನ್ನು ದೊರಕಿಸದಿದ್ದರೆ ತನಗಾಗುವ ಹಾನಿಯನ್ನು ಕರ್ಟನು ಚೆನ್ನಾಗಿ ಮನಗಂಡಿದ್ದನು. ಆದರೆ ಗ್ಯುರಿಲ್ಲಾ ದಳದವರ ಗುಟ್ಟನ್ನು ರಟ್ಟುಮಾಡುವುದೆಂದರೆ ಹೇಗೆ? ಕಲ್ಪನಾತೀತವಾದ ಕ್ರೂರತನದಿಂದ ವರ್ತಿಸಿ ಆಯಿತು. ಸಹನಾತೀತವಾದ ಚಿತ್ರಹಿಂಸೆಯನ್ನು ಮಾಡಿಯಾಯಿತು. ಯಾವುದಕ್ಕೂ ಈ ಹೆಂಗಸು ಬಗ್ಗಲಿಲ್ಲ. ಒಲೆನಾ ಕೈಗೆ ಸಿಕ್ಕಿದ ಸುದ್ದಿಯನ್ನು ಕೇಂದ್ರಕಚೇರಿಗೆ ತಿಳಿಸಿದ ಮೂರ್ಖತನಕ್ಕಾಗಿ ತನ್ನನ್ನು ತಾನೇ ಹಳಿದುಕೊಂಡನು

ಕರ್ಟನಿಗೆ ತಾನು ಒಲೆನಾಳ ಮಗುವನ್ನು ಒಂದೇ ಗುಂಡಿನೇಟಿಗೆ ಕೊಲ್ಲಬಾರದಿತ್ತೆಂದು ಅನಿಸಿತು. ಒಂದೊಂದಾಗಿ ಅದರ ಕಿವಿ ಕಡಿದು, ಕಣ್ಣು ಕುಕ್ಕಿ, ತೊಗಲು ಸ್ವಲ್ಪ ಸ್ವಲ್ಪ ಸುಲಿದು ಒಲೆನಾಳ ಮೇಲೆ ಈ ಒಂದೊಂದೇ ಕೃತ್ಯದಿಂದ ಆಗುವ ಪರಿಣಾಮವನ್ನು ನೋಡಬೇಕಾಗಿತ್ತು. ಆಗ ಒಲೆನಾ ಒಂದು ವೇಳೆ ಅನುಮಾನಿಸಿ ಅನುಮಾನಿಸಿ ಕೊನೆಗೆ ಹೇಳಿಬಿಡುತ್ತಿದ್ದಳೊ ಏನೋ. ಆದರೆ, ಈಗ ಅದೂ ಕೈಮೀರಿ ಹೋಗಿತ್ತು. ಈ ವಿಚಾರ ತಲೆಯಲ್ಲಿ ಮೊದಲೇ ಬಾರದುದಕ್ಕಾಗಿ ಕರ್ಟನು ತನ್ನ ಮೇಲೆಯೇ ಸಿಟ್ಟಿಗೆದ್ದನು.

ಕೋಪ ಹಾಗೂ ನಿರಾಶೆಗಳ ಉನ್ಮಾದಾವಸ್ಥೆಯಲ್ಲೇ ಕರ್ಟನು ಹೊಳೆಯಬದಿಗೆ ಬಂದಿದ್ದನು ಹೆಸರೆತ್ತಿ ಕರೆದಾಗ ಒಲೆನಾ ಕಣ್ಣೆತ್ತಿ ಕೂಡಾ ಅವನ ಕಡೆ ನೋಡದೆ ಇದ್ದುದನ್ನು ಕಂಡು ಅವನ ಉನ್ಮಾದಾವಸ್ಥೆ ವಿಕೋಪಕ್ಕೇರಿತು. "ಗ್ಯುರಿಲ್ಲಾಗಳು ಎಲ್ಲಿದ್ದಾರೆ? ಹೇಳು" ಎಂದು ಗರ್ಜಿಸಿದನು. ಗರ್ಜನೆಯನ್ನು ಕೇಳಿಯೂ ಒಲೆನಾ ಕಣ್ಣೆತ್ತಲಿಲ್ಲ. ನದಿಯ ತೀರದಲ್ಲಿದ್ದ ದಟ್ಟವಾದ ವೃಕ್ಷಸಮೂಹದಿಂದ ಕರ್ಟನ ಗರ್ಜನೆಯ ಪ್ರತಿಧ್ವನಿಯೊಂದು ಅವನನ್ನು ಅಣಕಿಸುವಂತೆ ಕೇಳಿಸಿತು. ಕರ್ಟನು ಪೂರಾ ಹುಚ್ಚನಂತಾದನು. ಸಿಪಾಯಿಯ ಕೈಯಿಂದ ಕೋವಿಯನ್ನು ಎಳಕೊಂಡು ಅದಕ್ಕೆ ಸಿಕ್ಕಿಸಿದ ಬಯೊನೆಟ್ಟನ್ನು ತೆಗೆದು ಒಲೆನಾಳ ಬೆನ್ನಿಗೆ ಚುಚ್ಚಿದನು.

ರಕ್ತವು ಧಾರಾವಾಹಿಯಾಗಿ ಹರಿದು ಸುತ್ತಲಿನ ಮಂಜುಗಡ್ಡೆಗೆ ಕೆಂಬಣ್ಣ ವನ್ನು ಕೊಟ್ಟಿತು. ಆದರೆ ಒಲೆನಾಳ ಬಾಯಿಯಿಂದ ಒಂದು ನೊರೆಯ ಉಸಿರು ಕೂಡಾ ಹೊರಡಲಿಲ್ಲ. ಹೊಳೆಯಮ್ಮನ ಮಡಿಲಲ್ಲಿ ಆಡುತ್ತಿದ್ದ ತನ್ನ ಮುದ್ದು ಕುವರನೊಡನೆ ಮನೋರಾಜ್ಯದಲ್ಲಿ ವಿಹರಿಸುತ್ತಿದ್ದ ಅವಳು ದೈಹಿಕ ವೇದನೆಯ ಬಂಧನವನ್ನು ಮೀರಿದ್ದಳು. ಕರ್ಟನು ತಿರುಗೊಮ್ಮೆ ಗರ್ಜಿಸಿದನು. ಪುನಃ ಅದೇ ಅಣಕಿಸುವ ಮರುಧ್ವನಿ. ಇನ್ನೊಮ್ಮೆ ಬೆಯೊ-ನೆಟ್ಟಿನಿಂದ ಬಲವಾಗಿ ತಿವಿದನು. ಒಲೆನಾಳ ದೈಹಿಕ ಬಂಧನಗಳು ಈಗಾಗಲೇ ಸಂಪೂರ್ಣವಾಗಿ ಶಿಥಿಲವಾಗಿದ್ದುವು. ಬೆಯೊನೆಟ್ಟಿನ ತಿವಿತ ದಿಂದ ಅವು ಪೂರಾ ಕಡಿದು ಹೋಗಿ ಸ್ವತಂತ್ರವಾದ ಅವಳ ಆತ್ಮವು ತನ್ನ ಪತಿ, ಪುತ್ರರ ಆತ್ಮಗಳೊಡನೆ ಅನಂತದಲ್ಲಿ ಲೀನವಾಯಿತು

ಉನ್ಮಾದಾವಸ್ಥೆಯಲ್ಲಿದ್ದ ಕರ್ಟನಿಗೆ ಅವಳ ಪ್ರಾಣಪಕ್ಷಿ ಹಾರಿ ಹೋದುದ್ದೇ ಗೊತ್ತಾಗಿಲಿಲ್ಲ. "ಗ್ಯುರಿಲ್ಲಾಗಳು ಎಲ್ಲಿದ್ದಾರೆ ಹೇಳು?" ಎಂದು ಪುನಃ ಗರ್ಜಿಸಿದನು. ಉತ್ತರ ದೊರೆಯದುದಕ್ಕೆ ಕಾಳರುದ್ರನಂತೆ ಕೋಪಾ ವೇಶದಿಂದ ಕುಣಿದಾಡಿದನು. "ನಿನ್ನನ್ನು ನೀರಲ್ಲಿ ಹೆಪ್ಪುಗಟ್ಟಿಸಿ ಸಾಯಿಸು ತ್ತೇನೆ!" ಎಂತ ಒದರಿ ಅವಳನ್ನು ನೀರಿನಲ್ಲಿ ಮುಳುಗಿಸಲು ಸಿಪಾಯಿಗಳಿಗೆ ಆಜ್ಞೆ ಇತ್ತನು. ನದಿಯ ನೀರು ಹಿಮಗಟ್ಟಿತ್ತು. ಊರ ಜನರಿಗಾಗಿ ನೀರು ತೆಗೆಯಲು ಒಂದೆಡೆ ಮಂಜುಗಡ್ಡೆಯನ್ನೊಡೆದು ಒಂದು ಹೊಂಡ ಮಾಡಿ ದ್ದರು. ಒಲೆನಾಳ ಸ್ಥೂಲದೇಹವು ಆ ಹೊಂಡದಲ್ಲಿ ಸುಲಭವಾಗಿ ಕೆಳಗೆ ಹೋಗಲಿಲ್ಲ. ಸಿಪಾಯಿಗಳು ಕೋವಿಗಳಿಂದ ಮಂಜುಗಡ್ಡೆಗೆ ಬಡಿದು ಹೊಂಡದ ಬಾಯಿಯನ್ನು ದೊಡ್ಡದಾಗಿ ಮಾಡಿದರು. ಒಲೆನಾಳ ದೇಹವನ್ನು ಅದರಲ್ಲಿ ನುಗ್ಗಿಸಿ ಕೋವಿಗಳಿಂದ ತಲೆಯನ್ನು ಒತ್ತಿ ಕೆಳಗೆ ಅಟ್ಟಿದರು. ನಿದಾನವಾಗಿ ಅದು ಕೆಳಕ್ಕೆ ·ಹೋಯಿತು. ಮಗುವಿಗೆ ಆಶ್ರಯ ಕೊಟ್ಟ ನದಿಯು ತಾಯಿಯನ್ನೂ ತನ್ನ ಮಡಿಲಲ್ಲಿ ಸೇರಿಸಿಕೊಂಡಿತು.

೭

ರಾತ್ರಿಯಾಗಿತ್ತು. ಉಡುಪನ್ನು ಬದಲಿಸುವ ನೆವದಿಂದ ಫುಸ್ಯಾಳು ತನ್ನ ಸುಂದರ ದೇಹದ ಲಾವಣ್ಯವನ್ನು ಕರ್ಟನಿಗೆ ತೋರಿಸುವ ಪ್ರಯತ್ನದಲ್ಲಿ

ನಿರತಳಾಗಿದ್ದಳು. ಆದರೆ ಅವನು ಏನನ್ನೂ ನೋಡುತ್ತಿರಲಿಲ್ಲ. ಅವನ ಮನಸ್ಸು ಯಾವುದೋ ಗಹನವಿಚಾರದಲ್ಲಿ ಮಗ್ನವಾಗಿತ್ತು. ಮನೆಯೊಳಗೆ ಬಂದ ಮೇಲೆ ಒಂದೂ ಮಾತಾಡಿದ್ದಿಲ್ಲ. ಪುಸ್ಪಾ ಬೇಸತ್ತು "ಕರ್ಟಿಸ" ಎಂದು ಗಟ್ಟಿಯಾಗಿ ಕರೆದಳು. ಆ ಕರೆಯಿಂದ ಅವನು ಎಚ್ಚತ್ತನು.

"ಏನು ?"

"ಒಳಗೆ ಬಂದ ಮೇಲೆ ಬಾಯಿಯೇ ತೆರೆಯಲಿಲ್ಲ ! ನಾನು ಇಲ್ಲಿ ಇಲ್ಲವೆಂಬಂತೆ ವರ್ತಿಸುತ್ತಿರುವೆ"

"ನನಗೆ ಬಹಳ ಆಯಾಸವಾಗಿದೆ"

"ದಿನವಿಡೀ ಒಬ್ಬಂಟಿಗಳಾಗಿಯೇ ಇರಬೇಕು. ರಾತ್ರಿ ನೀನು ಮನೆಗೆ ಬಂದ ಮೇಲೆಯೂ ನನ್ನ ಪಾಲಿಗೆ ಒಂಟಿತನವೇ"

ಕೇಂದ್ರಕಚೇರಿಯಿಂದ ಕಳಿಸಿದ ಸಂದೇಶವು ಕರ್ಟಿಸನ ತಲೆಯನ್ನು ಕೊರೆಯುತ್ತಿತ್ತು ಮರುದಿನದೊಳಗೆ ಕೇಂದ್ರಕ್ಕೆ ವರದಿಯನ್ನು ಕಳಿಸ ಬೇಕಿತ್ತು. ಕೈಗೆ ಸಿಕ್ಕಿದ ಗ್ಯುರಿಲ್ಲಾದಳದ ಸ್ತ್ರೀಯಳ ಬಾಯಿಯಿಂದ ಒಂದಕ್ಷರವನ್ನೂ ಹೊರಡಿಸಲು ಸಾಧ್ಯವಾಗಲಿಲ್ಲವೆಂದು ಅವರಿಗೆ ತಿಳಿಸಿದರೆ ನಿಸ್ಸಂಶಯವಾಗಿ ತನ್ನನ್ನು ಅಯೋಗ್ಯರ ಸಾಲಿನಲ್ಲಿ ಸೇರಿಸುವರು. ಸದ್ಯದಲ್ಲೇ ತನಗೆ ಸಿಕ್ಕಲಿದ್ದ ಮೇಲಿನ ಹುದ್ದೆಯೂ ತಪ್ಪುವುದು. ತನ್ನ ಕಾರ್ಯದಕ್ಷತೆ ಯಲ್ಲಿ ಏನೂ ತಪ್ಪಿಲ್ಲವೆಂಬುದನ್ನು ಕೇಂದ್ರ ಅಧಿಕಾರಿಗಳಿಗೆ ಮುಂದಟ್ಟು ಮಾಡುವುದು ಹೇಗೆ ? ಈ ವಿಚಾರವೊಂದೇ ಮಿದುಳಿನಲ್ಲಿ ಸುತ್ತಾಡುತ್ತಿದ್ದ ಸ್ಥಿತಿಯಲ್ಲಿ ಕರ್ಟಿಸನಿಗೆ ಆ ರಾತ್ರಿ ಪುಸ್ಪಾಳ ರೂಪಲಾವಣ್ಯಗಳ ಅಗತ್ಯವಿರಲಿಲ್ಲ.

ಗ್ಯುರಿಲ್ಲಾ ರಾಣ್ಯಗಳ ಕುರಿತು ತುಸುವಾದರೂ ಸುದ್ದಿ ದೊರಕಿಸದಿದ್ದರೆ ಅವನ ಭವಿತವ್ಯಕ್ಕನೇ ಧಕ್ಕೆ ಹತ್ತುವಂತಿತ್ತು. ಆ ದಿಶೆಯಲ್ಲಿ ಬೇರೆ ಉಪಾ ಯಗಳನ್ನು ಯೋಚಿಸುತ್ತಲಿರುವಾಗ ಕರ್ಟಿಸನಿಗೆ ಪುಸ್ಪಾಳ ಅಕ್ಕನ ನೆನಪಾ ಯಿತು. ಈವರೆಗೆ ಮೌನವಾಗಿದ್ದವನು ಪುಸ್ಪಾಳನ್ನು ಕರೆದು "ನಿನ್ನ ಅಕ್ಕ ನೊಡನೆ ಮಾತಾಡಲು ಸಾಧ್ಯವಿಲ್ಲವೇ ನಿನಗೆ ?" ಎಂದು ಕೇಳಿದನು.

"ಅಕ್ಕನೊಡನೆ ಮಾತಾಡುವುದು ?"

"ಹೌದು. ಸರಿಯಾಗಿ ಕೇಳಿಸುವುದಿಲ್ಲವೇನು ನಿನಗೆ ?"

" ನಾನೇಕೆ ಅವಳೊಡನೆ ಮಾತಾಡಲಿ ?'' ಅಪಹಾಸ್ಯದ ಸ್ವರದಿಂದ ಕೇಳಿದಳು.

" ನನಗೆ ನೀನು ಸಹಾಯ ಮಾಡಬೇಕು. ನಗುವಂತಹದೇನೂ ಇಲ್ಲ ಅದರಲ್ಲಿ ನನಗೆ ತಿಳಿಯಬೇಕಾಗಿದ್ದ ಎಷ್ಟೊ ವಿಷಯಗಳು ಅವಳಿಗೆ ಗೊತ್ತಿವೆ."

" ಆದರೆ ಅವಳು ನನಗೆ ಏನೂ ಹೇಳಲಿಕ್ಕಿಲ್ಲ."

" ಅವಳು ಹೇಳುವ ರೀತಿಯಲ್ಲಿ ನೀನು ಅವಳೊಡನೆ ಮಾತಾಡಬೇಕು. ನಮ್ಮೊಡನೆ ಸಹಕರಿಸಿದರೆ ಒಳಿತೆಂಬುದನ್ನು ಅವಳಿಗೆ ಬಿಡಿಸಿ ಹೇಳು. ಈ ಯುದ್ಧದಲ್ಲಿ ರಶ್ಯವು ವಿಜಯಿಯಾಗುವುದು ತೀರಾ ಅಸಾಧ್ಯವೆಂಬುದನ್ನು ಅವಳಿಗೆ ಖಾತ್ರಿಮಾಡಿಕೊಡು. ತನ್ನ ಹಿತವನ್ನು ಮರೆತು ಮೃಗಜಲದ ಹಿಂದೆ ಓಡುವಷ್ಟು ಮೂರ್ಖಳಲ್ಲವಷ್ಟೆ ಅವಳು.''

'' ಅವಳು ನನ್ನೊಡನೆ ಮಾತೇ ಆಡುವುದಿಲ್ಲ."

'' ಯಾಕೆ ?''

'' ನಿನಗೆ ಇನ್ನೂ ಗೊತ್ತಾಗುವುದಿಲ್ಲವೇ ? ಇಲ್ಲಿ ಯಾರೂ ನನ್ನೊಡನೆ ಮಾತಾಡುವುದಿಲ್ಲ. ಮಹಾರೋಗ ಹಿಡಿದವಳನ್ನು ಕಾಣುವಂತೆ ನನ್ನನ್ನು ಕಾಣುತ್ತಾರೆ ಇಲ್ಲಿ ಎಲ್ಲರೂ. ನಿನಗೇನು ? ನೀನು ಇಡೀ ದಿನ ಆಫೀಸಿನಲ್ಲಿ ಮಜಾ ಮಾಡುತ್ತಿ. ಇಲ್ಲಿ ನಾನೊಬ್ಬಳೇ ಕೊಳೆಯಬೇಕು."

ಕರ್ಟನು ಹುಬ್ಬುಗಂಟಿಕ್ಕಿದನು. '' ಸಾಕು, ನಿನ್ನ ಕಿಸಬಾಯಿ ದಾಸನ ಹಾಡು. ನಾನು ಹೇಳುತ್ತಿರುವುದು ಗಂಭೀರವಿಚಾರ "ಲಕ್ಷ್ಯದಲ್ಲಿರಲಿ."

ಪುಷ್ಕಾಳಿಗೆ ತುಸು ಗಾಬರಿಯಾಯಿತು. " ಆಗಲಿ, ಮಾತಾಡುತ್ತೀನೆ. ಆದರೆ, ಯಾವ ವಿಷಯದಲ್ಲಿ ?"

'' ಈಗ ದಾರಿಗೆ ಬಂದಿ. ನೋಡು, ಗ್ಯುರಿಲ್ಲಾದಳದವರಿಗೂ ನಿನ್ನ ಅಕ್ಕನಿಗೂ ಸಂಪರ್ಕವಿದೆಯೆಂದು ನಮಗೆ ಸುದ್ದಿ ಹತ್ತಿದೆ. ಅವರಗುಪ್ತ ಠಾಣ್ಯವೆಲ್ಲಿ ಎಂಬುದನ್ನು ನಮಗೆ ಅವಳು ತಿಳಿಸಬೇಕು.''

'' ಅವಳು ನನ್ನೊಡನೆ ಚಕಾರ ಶಬ್ದ ಹೇಳಲಿಕ್ಕಿಲ್ಲ."

"ಮಾತಾಡುವ ಮೊದಲೇ ಅದು ನಿನಗೆ ಹೇಗೆ ಗೊತ್ತು? ನೀನು ಸ್ವಲ್ಪ ಕುಶಲಬುದ್ಧಿಯನ್ನು ಉಪಯೋಗಿಸಿದರೆ, ಅವಳು ಖಂಡಿತವಾಗಿ ಬಾಯಿ ಬಿಡುವಳು."

ಪುಷ್ಪ್ಯಾಳು ಉಡುಪನ್ನು ಬದಲಿಸಿ ನಿದ್ದೆಯ ಗೌನನ್ನು ಧರಿಸಿದಳು. ನೀಲವಾದ ಸುಂದರ ರೇಶ್ಮೆಯದಾಗಿತ್ತು ಅದು. ಕರ್ಟನು ಅದನ್ನು ತನ್ನ ಹೆಂಡತಿಗಾಗಿ ಫ್ರಾನ್ಸ್ ದೇಶದಿಂದ ತಂದಿದ್ದನು. ಆದರೆ ಫ್ರಾನ್ಸಿನಿಂದ ಮರಳುವಾಗ ಊರಿಗೆ ಹೋಗಲು ಬಿಡುವು ದೊರೆಯದ್ದರಿಂದ ಇಲ್ಲಿಗೆ ತರಬೇಕಾಯಿತು. ಮಿದುವಾದ ಅದರ ಸ್ಪರ್ಶವು ಇನಿಯಳ ಆಲಿಂಗನ ದಂತೆ ಕೋಮಲವಾಗಿತ್ತು. ಹಾಗಾಗಿ ಅದು ಪುಷ್ಪ್ಯಾಳ ಅಚ್ಚುಮೆಚ್ಚಿನ ಉಡುಪಾಗಿತ್ತು. ಕರ್ಟನು ತನ್ನ ಲಷ್ಕರೀ ಪೋಷಾಕನ್ನು ಇನ್ನೂ ಬಿಟ್ಟಿರಲಿಲ್ಲ

"ಏನು, ನೀನು ಮಲಗುವುದಿಲ್ಲವೇ?" ಪುಸ್ಸ್ಯಾ ಅಸ್ವಸ್ಥತೆಯಿಂದ ಕೇಳಿದಳು

"ಮಲಗಲು ಸಮಯವಿಲ್ಲ ಈಗ. ನೋಡು, ಗ್ಯುರಿಲ್ಲಾಗಳ ಸುದ್ದಿ ನನಗೆ ತಿಳಿಯಲೇಬೇಕು"

ಪುಸ್ಸ್ಯಾ ಮೋಹಕ ನಗುವೊಂದನ್ನು ಬೀರಿ ಕರ್ಟನ ಕೈಯನ್ನು ಮುದ್ದಿಡಹೋದಳು. ಕರ್ಟನು ಸಿಟ್ಟಿನಿಂದ ಹಿಂದೆ ಸರಿದನು. ಹಾಗೂ ತೀರ ಅಸಮಾಧಾನದಿಂದ, "ಗಂಭೀರವಿಷಯ ನಿನ್ನೊಡನೆ ಮಾತಾಡುವುದೇ ಅಸಾಧ್ಯ." ಎಂದನು.

"ಗಂಭೀರ ವಿಷಯಗಳಿಗೆ ಇದು ವೇಳೆಯಲ್ಲ." ಎಂದಳು ಪುಸ್ಸ್ಯಾ ಅಷ್ಟೇ ಅತೃಪ್ತಿಯನ್ನು ಸೂಚಿಸಿ. ಆದರೆ, ಮರುಕ್ಷಣದಲ್ಲೇ ಕರ್ಟನ ಕೋಪಕ್ಕೆ ಹೆದರಿ ಅಕ್ಕನೊಡನೆ ಖಂಡಿತ ಮಾತಾಡುತ್ತೇನೆಂದು ಆಶ್ವಾಸನ ಕೊಟ್ಟಳು.

ಅಕ್ಕನೊಡನೆ ಮಾತಾಡುವ ಪ್ರಯತ್ನ ಮಾಡಲು ಪುಸ್ಸ್ಯಾ ಸರ್ವಥಾ ಸಿದ್ಧಳಿರಲಿಲ್ಲ. ಅಲ್ಪ ಸುಖಕ್ಕಾಗಿ ತನ್ನ ಮಾನವನ್ನೇ ಮಾರಿದ ಅವಳಿಗೆ ಅಷ್ಟು ನೈತಿಕಧೈರ್ಯವಾದರೂ ಹೇಗೆ ಬರಬೇಕು? ಅಕ್ಕನೊಡನೆ

ಮಾತಾಡುವ ಪ್ರಸಂಗವನ್ನು ಹೇಗಾದರೂ ತಪ್ಪಿಸುವುದಕ್ಕಾಗಿ '' ಗ್ಯಿರಲ್ಲಾ ದಳಕ್ಕೂ ಅವಳಿಗೂ ಸಂಪರ್ಕವಿರುವುದು ನಿನಗೆ ಹೇಗೆ ತಿಳಿಯಿತು ? ಅದು ನಿಜವಲ್ಲದಿರಬಹುದು." ಎಂದಳು

'' ಆ ಯೋಚನೆ ಬೇಡ ನಿನಗೆ. ನನಗೆ ಎಲ್ಲಾ ಗೊತ್ತಿದೆ. ಅವಳು ನಮಗೆ ಮಾಹಿತಿ ಪೂರಯಿಸದಿದ್ದರೆ ಅವಳನ್ನು ದಸ್ತಗಿರಿ ಮಾಡಲಾದೀತು. ಇದನ್ನು ತಿಳಿಸು, ಅವಳಿಗೆ."

'' ಆಂ!''

" ಏನೆಂತ ತಿಳಿದೆ ನೀನು, ಮತ್ತ್ರಿ ! ನಿನ್ನ ಅಕ್ಕನಾದುದರಿಂದ ನಮಗೆ ವಿರೋಧವಾಗಿ ಬೇಕಾದ್ದನ್ನು ಮಾಡಿದರೂ ನಾವು ತಣ್ಣಗೆ ಕೂಡ್ರುವೆವೆಂದು ಎಣಿಸಿದೆಯೊ ?''

'' ನನಗೇನೂ ಬಿದ್ದಿಲ್ಲ, ಅದರಲ್ಲಿ. ದಸ್ತಗಿರಿ ಮಾಡಿರಿ, ತಲೆ ಹಾರಿಸಿರಿ, ಬೇಕಿದ್ದರೆ ನನಗೇನು ? ನೀನು ಹೇಳಿದಂತೆ ನಾನು ಮಾತಾಡಿ ನೋಡುತ್ತೇನೆ. ಆದರೆ, ಅವಳು ನನ್ನನ್ನು ಕಂಡ ಕೂಡಲೇ ಕದವನ್ನು ಇಕ್ಕಿಬಿಡುವಳು.''

'' ಪ್ರಯತ್ನವನ್ನಾದರೂ ಮಾಡಿ ನೋಡು ''

'' ಆಯಿತು ನೋಡುವೆ.'' ಎಂದಳು ಪುಸ್ಯಾ. ಹೇಗಿದ್ದರೂ ಅದು ನಾಳಿನ ಸುದ್ದಿ. ಆಗಲೇ ಏಕೆ ಒಲ್ಲೆನೆಂದು ಹೇಳಿ ರಾತ್ರಿಯ ಸವಿ, ಸುಖ ಗಳನ್ನು ಕಳೆದುಕೊಳ್ಳಬೇಕು ?

''ಖಂಡಿತವಾಗಿ ಅಕ್ಕನಿಂದ ಸುದ್ದಿ ತಿಳಿದುಕೊಳ್ಳಲು ಪ್ರಯತ್ನಿಸುವೆ." ಎಂದು ಮತ್ತೊಮ್ಮೆ ಹೇಳಿ ಪುಸ್ಯಾಳು ಕರ್ಟನನ್ನು ಶಯ್ಯಾಗ್ರಹಕ್ಕೆ ಒಲಿಸುವ ಪ್ರಯತ್ನದಲ್ಲಿ ಯಶಸ್ವಿಯಾದಳು

* * * *

ಫೆಡೋಸ್ಯಾ ರಾತ್ರಿಯ ಊಟದ ಕೆಲಸವೆಲ್ಲಾ ಮುಗಿದ ಮೇಲೆ ಪಾತ್ರೆ ಗಳನ್ನು ತೊಳೆದ ನೀರನ್ನು ಹೊರಚೆಲ್ಲಲು ಹಿಂದಿನ ಅಂಗಳದ ಅಂಚಿನಲ್ಲಿದ್ದ ಹೂಗಿಡಗಳೆಡೆಗೆ ಹೋಗಿದ್ದಳು. ನೀರನ್ನು ಗಿಡಗಳಡಿಯಲ್ಲಿ ಚೆಲ್ಲಿ ಹಿಂತಿರುಗು ವಷ್ಟರಲ್ಲಿ " ಅಮ್ಮಾ!'' ಎಂದು ಮೆಲುದನಿಯಲ್ಲಿ ಯಾರೋ ಉಸುರಿದಂತಾ

ಯಿತು. ಫೆಡೋಸ್ಯಾ ಗಾಬರಿಗೊಂಡಳು. ಕೈಯಲ್ಲಿದ್ದ ಪಾತ್ರೆ ಕೆಳಗೆ ಬಿತ್ತು. ಅವಳನ್ನು ತಾಯಿಯೆಂದು ಸಂಬೋಧಿಸಿದ ವ್ಯಕ್ತಿಯು ಮೆಲ್ಲನೆ ಅವಳ ಬಳಿಗೆ ಬಂದಿತು. ನಕ್ಷತ್ರಗಳ ಅಸ್ಪಷ್ಟ ಬೆಳಕಿನಲ್ಲಿ ಕೂಡಾ ಆಗಂತುಕನ ಶಿರಸ್ತ್ರಾಣದಲ್ಲಿದ್ದ ಕೆಂಪು ತಾರೆಯು ಎದ್ದು ಕಾಣುತ್ತಿತ್ತು. ಕೆಂಪು ಸೈನಿಕ ನೆಂದು ತಿಳಿದೊಡನೆ ಅವಳ ಮನಸ್ಸಿನಲ್ಲಿ ಶೋಕ ಸಂತೋಷಗಳ ಭಾವೋ ದ್ರೇಕ ಉಂಟಾಯಿತು. ಹೃದಯವು ಹಾರಾಡತೊಡಗಿತು. "ನೀನು.... ....ನೀ........ನು" ಕಂಠವು ತುಂಬಿ ಬಂದು ಮುಂದೆ ಮಾತು ಹೊರಡಲಿಲ್ಲ.

ಆಗಂತುಕನಿಗೆ ತುಸು ದಿಗಿಲಾಯಿತು. "ಏನಾಯಿತಮ್ಮ ನಿನಗೆ ?" ಎಂತ ಗಡಿಬಿಡಿಯಿಂದ ಕೇಳಿದನು.

"ಏನೂ ಇಲ್ಲ, ಏನೂ ಇಲ್ಲ." ಫೆಡೋಸ್ಯಾ ಉಕ್ಕಿ ಬರುತ್ತಿದ್ದ ಅಳು ವನ್ನು ಬಿಗಿ ಹಿಡಿದು ಹೇಳಿದಳು. ಆಗಂತುಕನು ತೀರ ಹತ್ತಿರ ಬಂದು ಅವಳ ಮುಖವನ್ನು ನೋಡಿದನು. ಸ್ವಾತೀ ನಕ್ಷತ್ರದ ಮಳೆಯ ನಡುವೆ ಬೀಳುವ ಬಿಸಿಲಿನಂತೆ ಕಣ್ಣೀರಿನಿಂದ ತೊಯ್ದ ಅವಳ ಮುಖದಲ್ಲಿ ಎಳೀ ನಗುವೊಂದು ಮೂಡಿತ್ತು.

ಫೆಡೋಸ್ಯಾಳಿಗೆ ಫಕ್ಕನೆ ಮನೆಯ ಮುಂದೆ ಪಹರೆ ಮಾಡುತ್ತಿದ್ದ ಜರ್ಮನ ಸಿಪಾಯಿಯ ನೆನಪಾಯಿತು. ಆಗಂತುಕನ ಕೈಹಿಡಿದು "ಊರಲ್ಲಿ ಜರ್ಮನರಿದ್ದಾರೆ, ನಮ್ಮ ಮನೆಯಲ್ಲೇ ಇದ್ದಾರೆ." ಎಂದು ಮೆಲ್ಲನೆ ಉಸುರಿದಳು.

"ಅದು ನನಗೆ ಗೊತ್ತು. ಈಗ ನಿನ್ನೊಡನೆ ಸ್ವಲ್ಪ ಮಾತಾಡಬೇಕು. ನೀನು ಇಲ್ಲಿಯವಳೇ ತಾನೆ ?"

"ಹೌದು, ನಾನು ಇದೇ ಊರವಳು."

"ನನಗೆ ಸ್ವಲ್ಪ ಮಾಹಿತಿ ಕೊಡು, ಇಲ್ಲಿ........"

ಇಷ್ಟು ಹೇಳುವಷ್ಟರಲ್ಲಿ ಫೆಡೋಸ್ಯಾ ಅವನನ್ನು ತಡೆದಳು.

"ಕೇಳು, ತಮ್ಮಾ, ಮನೆಯ ಮುಂದೆ ಪಹರೆಯವನಿದ್ದಾನೆ. ನಾನು ಹೊರಗೆ ಬಂದವಳು ಹೆಚ್ಚು ಹೊತ್ತು ಇಲ್ಲಿ ನಿಂತರೆ, ಅವನು ನನ್ನನ್ನು ಹುಡುಕಹತ್ತುತ್ತಾನೆ. ನಾನು ಮನೆಗೆ ಹೋಗಿ ಬೇರೊಂದು ದಾರಿಯಿಂದ

ಅವನಿಗೆ ತಿಳಿಯದಂತೆ ಬರುತ್ತೇನೆ. ನೀನು ನೋಡು, ಆ ಹಟ್ಟಿಯಲ್ಲಿ ಕೂಡು ಅಲ್ಲಿ ಬೆಚ್ಚಗೆ ಹುಲ್ಲು ಇದೆ. ನಾನು ಒಂದು ಕ್ಷಣದಲ್ಲಿ ಬರುವೆ ''

ಬಂದವನು ಒಂದು ತರದ ತೀಕ್ಷ್ಣದೃಷ್ಟಿಯಿಂದ ಅವಳನ್ನು ನೋಡ ಹತ್ತಿದನು ಅವನ ಮನಸ್ಸಿನಲ್ಲಿ ಸಂಶಯ ಹುಟ್ಟಿದೆಯೆಂಬುದನ್ನು ಫೆಡೋಸ್ಯಾ ಅರಿತಳು

"ತಮ್ಮಾ, ಏನೂ ಯೋಚನೆ ಮಾಡಬೇಡ. ನಾನು ಇದೇ ಊರಿನ ಸಾಂಘಿಕ ಕೃಷಿಕ್ಷೇತ್ರದವಳು. ನನ್ನ ಮಗ ಕೆಂಪು ಸೇನೆಯಲ್ಲಿದ್ದ ಅವನ ಮೃತ ಕಳೇಬರ ಇಲ್ಲೇ ಹೊಳೆಯದಂಡೆಯ ಕಂದರದಲ್ಲಿದೆ ಶವಸಂಸ್ಕಾರ ವನ್ನು ಕೂಡ ಈ ನರಾಧಮರು ಮಾಡಗೊಡುವುದಿಲ್ಲ ''

ಅವಳ ಮಾತು, ಅದಕ್ಕಿಂತಲೂ ಅವಳ ಸ್ವರ, ಅವಳ ನಿರ್ವಂಚನೆ ಯನ್ನು ನಿಸ್ಸಂದೇಹವಾಗಿ ಸೂಚಿಸುತ್ತಿತ್ತು. ಬಂದವನಿಗೆ ಇಂಥವಳ ವಿಷಯದಲ್ಲಿ ಸಂಶಯಪಟ್ಟಿದ್ದಕ್ಕಾಗಿ ನಾಚಿಕೆಯಾಯಿತು.

'' ಎಲ್ಲಾ ತರದ ಜನರಿದ್ದಾರೆ, ತಾಯಿ. ಅದಕ್ಕಾಗಿ ನಾವು ಸ್ವಲ್ಪ ಜಾಗರೂಕತೆಯಿಂದ ಇರಬೇಕಾಗುತ್ತದೆ " ಎಂದನು.

'' ನೀನು ಆ ಹಟ್ಟಿಗೆ ಹೋಗು. ನಾನು ಬೇಗನೆ ಬರುವೆ.''

ಇಷ್ಟು ಹೇಳಿ ಅವಳು ಕೆಳಗೆ ಬಿದ್ದ ಪಾತ್ರೆಗಳನ್ನು ಎತ್ತಿಕೊಂಡು ಮನೆಯೊಳಗೆ ಹೋದಳು. ಪಹರೆಯವನನ್ನು ನೋಡಿ ಅವಳಿಗೆ ನಗು ತಡೆಯಲಾಗಲಿಲ್ಲ. '' ಚೆನ್ನಾಗಿ ಪಹರೆ ಮಾಡು. ಇನ್ನು ಎಷ್ಟು ದಿನ ಮಾಡುವಿ. ಕೆಂಪು ಸೇನೆಯು ಬರುತ್ತಿದೆ, ಬೇಗನೇ. ನಿನಗೆ ಅದು ತಿಳಿಯುವ ಮೊದಲೇ ನಿನ್ನ ಅಂತ್ಯವಾಗುವುದು. ಒಬ್ಬ ಕೆಂಪು ಸೈನಿಕನು, ಈಗಲೇ ಬಂದಿದ್ದಾನೆ ಅದು ನಿನಗೆ ಹೇಗೆ ತಿಳಿಯಬೇಕು, ಮೂರ್ಖಾ !'' ಅವ ನನ್ನುದ್ದೇಶಿಸಿ ಈ ಮಾತುಗಳನ್ನು ತನ್ನೊಳಗೇನೇ ಅಂದಳು.

ಒಳಗೆ ಹೋಗಿ ಪಾತ್ರೆಗಳನ್ನಿಟ್ಟು ಮಲಗುತ್ತೇನೆಂದು ತೋರಿಸಲು ಚಾಪೆ ಬಿಡಿಸಿದಳು. ಆಮೇಲೆ ಹಟ್ಟಿಯ ದಿಶೆಯಲ್ಲಿ ಉಪಯೋಗದಲ್ಲಿಲ್ಲದ ಹಿಂಬಾಗಿಲನ್ನು ಸದ್ದಿಲ್ಲದೆ ತೆಗೆದು ಯಾರಿಗೂ ತಿಳಿಯದಂತೆ ಕೈಕಾಲು ಗಳಿಂದ ಹರಿದಾಡಿ ಹಟ್ಟಿಗೆ ಹೋದಳು. ಹಟ್ಟಿಯ ಮಾಡಿಗೆ ಹೊದಿಸಿದ

ಹುಲ್ಲಿನೊಳಗಿಂದ ಗಾಳಿಯು ಬೀಸುವಾಗ ಆಗುತ್ತಿದ್ದ ಸರಸರ ಶಬ್ದದಿಂದಾಗಿ ಹಟ್ಟಿಯೊಳಗೆ ಪಿಸುಮಾತಾಡಿದರೆ ಮನೆಯ ಮುಂದಿನ ಪಹರೆಯವನಿಗೆ ಏನೂ ಕೇಳಿಸುವಂತಿದ್ದಿಲ್ಲ. ಫೆಡೋಸ್ಯಾ ಮೆಲ್ಲನೆ ಹಟ್ಟಿಯಲ್ಲಿ ಇಣಿಕಿ ನೋಡಿದಳು. ಒಳಗೆ ಯಾರೂ ಕಾಣಿಸಲಿಲ್ಲ. ಗಾಬರಿಗೊಂಡಳು ಅಷ್ಟರಲ್ಲಿ ಹುಲ್ಲಿನಲ್ಲಿ ಹರಿದಾಡಿದ ಶಬ್ದವಾಯಿತು. ಅವಳನ್ನು ಮೊದಲು ಸಂಬೋಧಿಸಿದವನಲ್ಲದೆ ಅವನ ಜೊತೆಗಾರರು ಬೇರಬ್ಬರೂ ಅಲ್ಲಿಗೆ ಬಂದಿದ್ದರು

"ನಿಮಗಾಗಿ ಇಡೀ ಊರೇ ಎಷ್ಟು ದಿನಗಳಿಂದ ಕಾಯುತ್ತಿದೆ ನೀವು ಬರುವ ವರೆಗೆ ನಾನು ಬದುಕುವೆನೊ ಇಲ್ಲವೊ ಎಂತ ಅನಿಸುತ್ತಿತ್ತು," ಎಂದಳು ಫೆಡೋಸ್ಯಾ ಆನಂದದ ಅತಿರೇಕದಲ್ಲಿ.

"ಅದು ಸರಿ ತಾಯಿ. ಆದರೆ ಈಗ ನಾವು ಬಂದ ಕೆಲಸ ಬೇಗನೆ ಮಾತಾಡಿ ಮುಗಿಸಬೇಕು. ಹೆಚ್ಚು ಹೊತ್ತು ಕೂಡಲು ವೇಳೆಯಿಲ್ಲ."

"ಮಾತಾಡೋಣವಂತೆ. ನಿಮಗೆ ಹಸಿವಾಗಿರಬಹುದಲ್ಲಾ ?"

ಬಂದವರು ನಕ್ಕರು "ನಾವು ಊಟಮಾಡಲು ಬಂದಿಲ್ಲ, ಇಲ್ಲಿ. ಮಾಹಿತಿ ಕೂಡಿಸಲು ಬಂದಿದ್ದೇವೆ ನೀನು ಮಾಹಿತಿ ಕೊಟ್ಟರೆ ಊಟ ಕೊಟ್ಟದ್ದಕ್ಕಿಂತಲೂ ಹೆಚ್ಚೇ"

"ಆಯಿತಪ್ಪಾ, ನಿಮಗೆ ಏನೆಲ್ಲಾ ಮಾಹಿತಿ ಬೇಕು, ಹೇಳಿರಿ."

"ನಿನಗೆ ಈ ಊರಿನ ಪೂರ್ಣ ಪರಿಚಯವಿದೆಯಷ್ಟೇ ?"

"ಇಲ್ಲದೆ ಏನು ?" ಫೆಡೋಸ್ಯಾ ಆಶ್ಚರ್ಯದಿಂದ ಕೇಳಿದಳು. "ನಾನು ಇದೇ ಊರವಳು ಹುಟ್ಟಿದ್ದು ಇಲ್ಲೇ, ಬೆಳೆದದ್ದೂ ಇಲ್ಲೇ."

"ಸರಿ. ನಮಗೆ ಇಷ್ಟು ಮಾಹಿತಿ ಬೇಕು. ಜರ್ಮನರು ಎಲ್ಲೆಲ್ಲಿ ಇದ್ದಾರೆ ? ಇಲ್ಲಿ ಅವರ ಬಳಿ ಏನೇನೆಲ್ಲಾ ಇದೆ."

"ನಮ್ಮ ದಂಡು ಇಲ್ಲಿಗೆ ಬರುತ್ತದೆಯೇ ?" ಫೆಡೋಸ್ಯಾ ಆನಂದೋತ್ಸಾಹಗಳಿಂದ ಕೇಳಿದಳು.

"ಅವರು ಬಂದೇಬರುತ್ತಾರೆ. ಆದರೆ, ಅದರ ಮೊದಲು ನಮಗೆ ಎಲ್ಲಾ ಮಾಹಿತಿ ಕೂಡಿಸಬೇಕಾಗಿದೆ"

" ಒಳ್ಳೇದು. ನಮ್ಮದು ಸ್ವಲ್ಪ ದೊಡ್ಡ ಹಳ್ಳಿ ಮುನ್ನೂರು ಮನೆ ಇವೆ. ಎರಡು ದಾರಿಗಳು ಈ ಊರ ಮಧ್ಯದಲ್ಲೇ ಒಂದನ್ನೊಂದು ದಾಟುತ್ತವೆ. ಆ ನಡುವಣ ಚೌಕದಲ್ಲಿ ದೇವಾಲಯವಿತ್ತು. ಈಗ ಅದರ ಅವಶೇಷ ಮಾತ್ರ ಇದೆ. ಅಲ್ಲಿ ಜರ್ಮನರು ಈಗ ಫಿರಂಗಿಗಳನ್ನಿಟ್ಟಿದ್ದಾರೆ."

" ಸ್ವಲ್ಪ ತಾಳು ತಾಯಿ."

ಅವರು ಒಂದು ನಕಾಶೆಯನ್ನು ಹೊರಗೆ ತೆಗೆದು ವಿದ್ಯುತ್ ಬೆಟರಿ (Eletric torch) ದೀಪದ ಪ್ರಕಾಶವನ್ನು ಅದರ ಮೇಲೆ ಬಿಟ್ಟು ಅದನ್ನು ನೋಡಹತ್ತಿದರು.

" ಇಲ್ಲಿದೆ, ನೋಡಿರಿ, ಎರಡು ದಾರಿ, ನಡುವಿನ ಚೌಕ." ಒಬ್ಬನು ತನ್ನ ಇಬ್ಬರು ಜೊತೆಗಾರರಿಗೆ ನಕಾಶೆಯಲ್ಲಿ ಒಂದು ಕಡೆಗೆ ತನ್ನ ಬೆರಳು ತೋರಿಸಿದನು.

" ಎಷ್ಟು ಫಿರಂಗಿಗಳಿವೆ ?"

" ನಿಲ್ಲಿರಿ,......... ..ಒಂದು, ಎರಡು, ಮೂರು.. ...ಸರಿ, ನಾಲ್ಕು." ಹೌದು ನಾಲ್ಕು ಅವೆ. ದೇವಾಲಯದ ಬಲಬದಿಗೆ ಒಂದು ಕಟ್ಟಡವಿದೆ. ಅದು ಗ್ರಾಮ ಸೊವಿಯಟದ ಕೇಂದ್ರವಾಗಿತ್ತು. ಜರ್ಮನರು ಈಗ ಅದನ್ನು ತಮ್ಮ ಕಚೇರಿಯಾಗಿ ಮಾರ್ಪಡಿಸಿದ್ದಾರೆ. ಅದರಲ್ಲೇ ಒಂದು ಸೆರೆಮನೆ ಯನ್ನೂ ಮಾಡಿಕೊಂಡಿದ್ದಾರೆ ಈಗ ಅಲ್ಲಿ ನಮ್ಮವರು ಐವರು ಇದ್ದಾರೆ "

" ಜರ್ಮನರು ಬೇರೆ ಎಲ್ಲೆಲ್ಲಿ ಇದ್ದಾರೆ ?"

" ಚೌಕದ ಸಮೀಪವಿರುವ ಎಲ್ಲಾ ಮನೆಗಳಲ್ಲೂ ಇದ್ದಾರೆ. ದೂರದ ಮನೆಗಳಲ್ಲೂ ಕೆಲವೆಡೆ ಇದ್ದಾರೆ."

" ತೋಪಿ, ಫಿರಂಗಿ ಬೇರೆ ಎಲ್ಲಿಯಾದರೂ.... .. ?

" ಊರ ಅಂಚಿನ ಹೊರಗೆ ಮರಗಳಿದ್ದಲ್ಲಿ ಕೆಲವು ಅವೆ "

" ವಿಮಾನ ವಿರೋಧಿ ತೋಪಿಗಳೇನು? (Auto air-craft guns)"

" ಇರಬಹುದು, ಯಾರಿಗೆ ಗೊತ್ತು. ಸಪೂರವಾಗಿ ಉದ್ದವಾಗಿವೆ ತುದಿಮೇಲೆ ಮಾಡಿ ಇಟ್ಟಿದ್ದಾರೆ.''

" ಮಶಿನ್‌ಗನ್ನು."

" ಅವು ಊರಿನ ಇನ್ನೊಂದು ಅಂಚಿನಲ್ಲಿವೆ ಮನೆಗಳ ಗೋಡೆಗಳಲ್ಲಿ ತೂತುಮಾಡಿ ಅವುಗಳಲ್ಲಿ ಮಶಿನ್‌ಗನ್ನುಗಳನ್ನು ಇಟ್ಟಿದ್ದಾರೆ "

ಬಂದ ಕೆಂಪುದಳದವರು ಫೆಡೋಸ್ಯಾ ಹೇಳಿದ್ದನ್ನು ಕೇಳಿ ನಕಾಶೆಯಲ್ಲಿ ಅಲ್ಲಲ್ಲಿ ಗುರುತುಮಾಡಿದರು.

" ಜರ್ಮನರು ಒಟ್ಟು ಎಷ್ಟು ಇದ್ದಾರೆ ?''

" ಹೇಳಬರುವಂತಿಲ್ಲ. ಅವರು ಬರುತ್ತಾ ಹೋಗುತ್ತಾ ಇದ್ದಾರೆ ಅವರ ಕಮಾಂಡರನೊಬ್ಬ ಮಾತ್ರ ಇಲ್ಲೇ ಇರುತ್ತಾನೆ..........ಅಂದಾಜಿನಲ್ಲಿ ಹೇಳುವುದಾದರೆ ಸುಮಾರು ಇನ್ನೂರು ಜನ ಇರಬಹುದು."

'' ಪಹರೆಯುವರು ಹೆಚ್ಚಿದ್ದಾರೆಯೋ ?"

" ಅವರರದೇನೂ ದೊಡ್ಡದಲ್ಲ ಹೆದರಿಕೆಯಿಂದ ಸಾಯುತ್ತಾರೆ, ಅವರು. ರಾತ್ರಿ ನಾವು ಯಾರೂ ಮನೆಯು ಹೊರಗೆ ಹೋಗಬಾರದೆಂದು ಸುಗ್ರೀವಾಜ್ಞೆ ಇದೆ ಆದರೂ ಅವರು ಎರಡು ಹೆಜ್ಜೆ ಹೋಗಲು ಹಿಂಜರಿಯುತ್ತಾರೆ ರಾತ್ರಿ ಯಾರನ್ನಾದರೂ ಹೊರಗೆ ಕಂಡರೆ ಅವನೊಡನೆ ಏನೂ ಕೇಳುವುದಿಲ್ಲ ನೇರಾಗಿ ಗುಂಡಿಕ್ಕುವುದೇ."

" ಸೇತುವೆಗಳು ಎಷ್ಟಿವೆ ಇಲ್ಲಿ ಹತ್ತಿರದಲ್ಲಿ ?"

" ಸೇತುವೆ ಯಾವುದೂ ಇಲ್ಲ."

" ಅಡವಿ ?"

" ಇಲ್ಲಿ ಹೇಳುವಂತಹ ಅಡವಿಗಳೇನೂ ಇಲ್ಲ. ತೋಟಗಳಲ್ಲಿ ಇರುವ ಮರಗಳಷ್ಟೇ. ಅವುಗಳಲ್ಲೂ ಈಗ ಹೆಚ್ಚು ಉಳಿದಿಲ್ಲ. ಜರ್ಮನರು ಎಲ್ಲಾ ಕಡಿದು ಉರಿಸಲು ಉಪಯೋಗಿಸಿದ್ದಾರೆ."

ಹಟ್ಟಿಯು ಹೊರಗೆ ಏನೊ ಶಬ್ದವಾದಂತಾಯಿತು. ಫೆಡೋಸ್ಯಾ ಅಸ್ವಸ್ಥತೆಯಿಂದ ನಾಲ್ಕೂ ಕಡೆಗೆ ನೋಡಹತ್ತಿದಳು. ಏನಾಯಿತೆಂದು ಬಂದವರು ಕೇಳಿದರು

'' ಏನೂ ಇಲ್ಲ. ಪಹರೆಯುವನು ಮನೆಯು ಮುಂದೆಯೇ ಇದ್ದಾನೊ ಎಲ್ಲಿಯಾದರೂ ಸಂಶಯ ಬಂದು ಈ ಕಡೆ ಬರುತ್ತಿದ್ದಾನೊ ನೋಡಿ ಬರುತ್ತೇನೆ." ಎಂತ ಹೇಳಿ ಮೆಲ್ಲನೆ ಹಟ್ಟಿಯ ಹೊರಗೆ ಹೋಗಿ ಕಿವಿಗೊಟ್ಟು

ಕೇಳಿದಳು. ಪಹರೆಯುವವನು ಎಂದಿನಂತೆ ಮನೆಯ ಮುಂದೆಯೇ ಅಡ್ಡಾಡು ತ್ತಿದ್ದನು. ಅವನ ಬೂಟಿನ ಸಪ್ಪಳ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಫೆಡೋಸ್ಯಾ ಹಟ್ಟಿಗೆ ಹಿಂತಿರುಗಿದಳು.

"ಗಾಬರಿ ಇಲ್ಲ. ಪಹರೆಯವನು ಮನೆಯ ಮುಂದೆ ಹೆಜ್ಜೆ ಹಾಕು ತ್ತಿದ್ದಾನೆ. ಹಾಕುತ್ತಾ ಇರಲಿ" ಎಂದಳು.

ಬಂದವರು ನಕಾಶೆಯನ್ನು ಮಡಚಿದರು.

"ನಾವು ಈಗ ಹೊರಡುತ್ತೇವೆ. ತುಂಬಾ ಉಪಕಾರವಾಯಿತು, ತಾಯಿ."

"ಉಪಕಾರವೇನು ಇದರಲ್ಲಿ. ನನ್ನ ಮಗನೂ ನಿಮ್ಮ ದಂಡಿನಲ್ಲಿದ್ದ. ಅವನ ದೇಹ ಇಲ್ಲೇ ಹೊಳೆಯುಬದಿಯ ಕೊರಕಲಿನಲ್ಲಿದೆ."

ದೀಪದ ಗುಂಡಿಯು ಒತ್ತಲ್ಪಟ್ಟಿತು. ಪ್ರಕಾಶಿಸುತ್ತಿದ್ದ ಜ್ಯೋತಿಯು ಮಾಯವಾಯಿತು. ಬಂದವರು ಹೊರಟರು.

"ನೀವು ಎಂದು ಬರುತ್ತೀರಿ?" ಫೆಡೋಸ್ಯಾ ಕುತೂಹಲದಿಂದ ಕೇಳಿದಳು.

"ಅದು ಈಗ ಹೇಳಬರುವುದಿಲ್ಲ. ನಿರ್ಧಾರ ಮಾಡುವ ಮೊದಲು ಹಲವು ವಿಷಯುಗಳನ್ನು ವಿಚಾರ ಮಾಡಬೇಕಾಗುತ್ತದೆ."

"ಬೇಗನೆ ಬನ್ನಿರಿ. ಒಂದು ತಿಂಗಳಾಯಿತು, ಪ್ರತಿದಿನ ನಿಮ್ಮ ದಾರಿ ನೋಡುತ್ತಾ ಇದ್ದೇವೆ."

"ಹಾಗೆ ಬರುವುದೆಂದರೆ ಅಷ್ಟೊಂದು ಸುಲಭವಲ್ಲ, ತಾಯಿ"

"ಅದು ನನಗೆ ಗೊತ್ತಿದೆ ಆದರೆ ಸಾಧನೆ ಮಾಡಿರಿ, ಮಕ್ಕಳೇ. ನಮ್ಮ ಸ್ಥಿತಿ ಇಲ್ಲಿ ಬಹಳ ಕಠಿಣವಾಗಿದೆ. ಇನ್ನೆಷ್ಟು ದಿನ ಇದನ್ನು ಸಹಿಸಿ ಕೊಂಡಿರುವುದು?"

ಫಕ್ಕನೆ ಒಂದು ಯೋಜನೆ ಹೊಳೆಯಿತು ಫೆಡೋಸ್ಯಾಳ ತಲೆಯಲ್ಲಿ. "ಒಂದು ಕ್ಷಣ ನಿಲ್ಲಿ. ನಿಮಗೆ ಒಂದು ವಿಷಯ ಹೇಳುತ್ತೇನೆ." ಎಂದು ಉತ್ಸಾಹದಿಂದ ಹೇಳಿದಳು.

"ಅದೇನು ತಾಯಿ?"

" ಅವರ ಕಮಾಂಡರನು ನನ್ನ ಮನೆಯಲ್ಲೇ ಠಾಣ್ಯಾಹಾಕಿದ್ದಾನೆ. ಮನೆಮುಂದಿನ ಒಬ್ಬ ಪಹರೆಯುವನಲ್ಲದೆ ಬೇರೆ ಯಾರೂ ಇಲ್ಲಿಲ್ಲ. ಒಳಗೆ ತನ್ನ ಇನಿಯಳೊಡನೆ ಮಲಗಿದ್ದ ಇವನು ಗೂಡಿನಲ್ಲಿ ಬೀಳುವ ಇಲಿಯಂತೆ ನಿಮ್ಮ ಕೈಯಲ್ಲಿ ಬೀಳುತ್ತಾನೆ. ಅವನನ್ನೊಂದು ಸುಲಭವಾಗಿ ಮುಗಿಸ ಬಹುದು."

ಬಂದ ಮೂವರಲ್ಲಿ ಚಿಕ್ಕವನಾದ ಒಬ್ಬನಿಗೆ ಈ ಯೋಜನೆಯು ಬಹಳೇ ಯೋಗ್ಯವೆನಿಸಿತು. " ಒಂದು ಕೈ ನೋಡೋಣ." ಅಂದನು

" ಹಾಗೆಲ್ಲಾ ದುಡುಕಬಾರದು ಸ್ವಲ್ಪ ವಿಚಾರಮಾಡಬೇಕು." ಇನ್ನೊಬ್ಬ ಬುದ್ಧಿ ಹೇಳಿದನು.

" ವಿಚಾರವೇನು ಇದರಲ್ಲಿ ? ನಾಯಿಯನ್ನು ಎಳೆದಂತೆ ಹೊರಗೆ ತೆಗೆದ ರಾಯಿತು, ಅವನನ್ನು "

" ಹೌದು, ಬಹಳ ಸುಲಭ. ನಾಯಿಯನ್ನು ಎಳೆದಂತೆ ಹೊರಗೆ ತೆಗೆಯುವುದು, ಕುಂಬಳಕಾಯಿ ಕೊಯ್ದಂತೆ ಕುತ್ತಿಗೆ ಕೊಯ್ದುಬಿಡು ವುದು, ಅಲ್ಲವೆ ? ಆದರೆ, ಮುಂದೆ ಏನು ? ಮೂರ್ಖಾ ಸ್ವಲ್ಪ ಯೋಚಿಸು. ಮುಂಜಾನೆ ಈ ಸುದ್ದಿ ಎಲ್ಲರಿಗೂ ಗೊತ್ತಾಗುವುದು. ವೈರಿಗಳು ದೊಡ್ಡ ದಂಡನ್ನು ಇಲ್ಲಿಗೆ ಕಳಿಸುವರು. 'ಸಹಾದಿ' 'ನೆವ್ವಾ' ಈ ಊರಲ್ಲಿ ತೊಟ್ಟಿಲಿ ನಲ್ಲಿದ್ದ ಕೂಸನ್ನು ಹಿಡಿದು ಹಾಸಿಗೆಯಲ್ಲಿದ್ದ ಮುದುಕನ ವರೆಗೆ ಒಬ್ಬ ನನ್ನೂ ಬಿಡದೆ ಕೊಂದಂತೆ ಇಲ್ಲಿಯೂ ಮಾಡುವರು. ಅಂದ ಮೇಲೆ ನಾವಾ ದರೂ ಇಲ್ಲಿಗೆ ಬಂದು ಏನನ್ನು ಸಾಧಿಸಿದಂತಾಯಿತು ? ಯ�ಃಕಶ್ಚಿತ ಒಬ್ಬ ಜರ್ಮನ ಆಫೀಸರನನ್ನು ಕೊಂದ ಮಾತ್ರಕ್ಕೆ ನಮ್ಮ ಕೆಲಸ ಏನೂ ಮುಂದೆ ಹೋದಂತಾಗುವುದಿಲ್ಲ, ತಿಳಿಯಿತೇ ?"

" ಅದೇನೋ ಸರಿಯೇ. ಆದರೂ ಈ ನಾಯಿಯನ್ನು ಹೊರಗೆಳೆದು ಹಾಕಲು ಕೈಗಳು ಹಾತೊರೆಯುತ್ತವೆ."

" ಅವಸರ ಮಾಡಬೇಡ. ಅದನ್ನೂ ಇನ್ನು ಕೆಲವು ದಿನಗಳಲ್ಲಿ ಮಾಡುವೆಯಂತೆ. ಹೊರಡು, ಈಗ ಹೋಗೋಣ ಮನೆಗೆ."

" ನಿಮ್ಮ ಮನೆ ಎಲ್ಲಿ ತಮ್ಮಾ ?" ಫೆಡೋಸ್ಯಾ ಆತುರದಿಂದ ಕೇಳಿದಳು.

"ಮನೆಯೆಂದರೆ ಸಾಂಕೇತಿಕ ಅರ್ಥದಲ್ಲಿ. ನಮ್ಮ ಮನೆಗಳು ಬಹಳ ದೂರ ಅವೆ, ತಾಯಿ. ಯುದ್ಧಕಾಲದಲ್ಲಿ ನಮ್ಮ ಸೈನ್ಯದ ದಳ ಎಲ್ಲಿ ಇದೆಯೊ ಅಲ್ಲೇ ನಮ್ಮ ಮನೆ. ಹೋಗಿ ಬರುತ್ತೇವೆ, ತಾಯಿ, ನಮಸ್ತೆ."

"ಹೋಗಿ ಬನ್ನಿ, ಮಕ್ಕಳೇ, ಬೇಗನೆ ಬನ್ನಿ, ವಿಜಯಿಗಳಾಗಿ ಬನ್ನಿ."

ದೂರವಾದಂತೆ ಅಸ್ಪಷ್ಟವಾಗುತ್ತಾ ಅದೃಶ್ಯವಾಗುತ್ತಿರುವ ಮೂರು ಮೂರ್ತಿಗಳನ್ನು ಫೆಡೋಸ್ಯಾ ನೋಡುತ್ತಾ ನಿಂತಳು. ಅವರೊಡನೆ ಮಾತಾಡುವಾಗ ಸ್ವಾತಂತ್ರ್ಯದ ನಿರ್ಮಲ ನೀರಿನಲ್ಲಿ ಮೀಯುವ ಆನಂದ ವನ್ನು ಅನುಭವಿಸಿದಳು. ಈಗ ಪುನಃ ದಾಸ್ಯತ್ವದ ಕೊಳೆ—ನೀರಿನ ಕೊಳ್ಳ ದಲ್ಲಿ ಬೀಳುವಾಗ ಅವಳ ಹೃದಯ ಅತ್ಯಂತ ಜಡವಾಯಿತು.

ಫೆಡೋಸ್ಯಾಳಿಗೆ ಆ ರಾತ್ರಿ ಇಡೀ ನಿದ್ದೆ ಹತ್ತಲಿಲ್ಲ. ದಾಸ್ಯತ್ವದ ಹಾಗೂ ಕ್ರೂರ ದಬ್ಬಾಳಿಕೆಯನ್ನು ಅನುಭವಿಸುತ್ತಿದ್ದ ಆ ಊರಿನ ಜನರು ತಮ್ಮ ಬಿಡುಗಡೆಯು ಬೇಗನೆ ಆಗುವುದೆಂಬ ಭರವಸೆಯಿಂದಷ್ಟೇ ಮನಸ್ಸಿಗೆ ಸಮಾಧಾನವನ್ನು ತಂದುಕೊಂಡಿದ್ದರು. "ನಮ್ಮ ದಂಡು ಬರುತ್ತದೆ" ಇದೇ ಅವರ ಆಸೆ, ಆಕಾಂಕ್ಷೆ, ಹಾಗೂ ಕನಸಾಗಿತ್ತು ಅವರು ಬರುತ್ತಾರಷ್ಟೇ ಅಲ್ಲ – ಈ ವಿಷಯದಲ್ಲಿ ಯಾರಿಗೂ ಸಂಶಯವಿರಲಿಲ್ಲ – ಅವರು ಎಲ್ಲಾ ತಯಾರಿ ಮುಗಿಸಿ ಇಲ್ಲಿಗೇನೇ ಬರಲು ಹೊರಟಿದ್ದಾರೆಂಬುದು ಈಗ ಫೆಡೋಸ್ಯಾ ಮಾತ್ರ ಅರಿತಿದ್ದಳು ಅವಳಿಗೆ ಬಿಡುಗಡೆಯ ದಂಡಿನ ದಾರಿ ಕಾಯುತ್ತಾ ಕುಳಿತಿದ್ದ ಮಂದಿಗೆಲ್ಲರಿಗೆ ಈ ಸುದ್ದಿಯನ್ನು ಹೇಳೋಣ ಎನಿಸಿತು. ಆದರೆ ಮರುಕ್ಷಣದಲ್ಲೇ ಆ ಮೂವರು ತಮ್ಮೊಳಗೆ ಮಾತಾಡಿ ಕೊಳ್ಳುತ್ತಿದ್ದ ಶಬ್ದಗಳು ನೆನಪಿಗೆ ಬಂದವು. ಈ ಸುದ್ದಿ ಎಲ್ಲರಿಗೆ ತಿಳಿದರೆ ಜರ್ಮನರ ಕಿವಿವರೆಗೂ ಹೋಗಬಹುದು. ಜರ್ಮನರಿಗೆ ಅದು ತಿಳಿದರೆ ತಮ್ಮ ಬಿಡುಗಡೆ ಇನ್ನೂ ಕಠಿಣವಷ್ಟೇ ಅಲ್ಲ, ದೀರ್ಘಕಾಲದ ವರೆಗೆ ಅಸಾ ಧ್ಯವೂ ಆಗಬಹುದು.

ಫೆಡೋಸ್ಯಾ ಪ್ರಯತ್ನಪೂರ್ವಕವಾಗಿ ಬಾಯಿ ಮುಚ್ಚಿಕೊಂಡಳು. ಆದರೆ ತನ್ನಲ್ಲಿ ಬರುತ್ತಿದ್ದ ಹೊಸ ಹುರುಪನ್ನು ವರ್ತನೆಯಲ್ಲಿ ತೋರಿಸದಿರಲು ಅವಳಿಗೆ ದುಸ್ಸಾಧ್ಯವಾಯಿತು. ಮುದುಕಿಯೇನೋ ದಾರಿಗೆ ಬರಹತ್ತಿದ್ದಾಳೆ.

ರಶ್ಯವು ಗೆಲ್ಲುವ ಆಶೆ ಬಿಟ್ಟಿರಬೇಕು ಎಂದು ಕರ್ಟ, ಫುಸ್ಕಾ ಎಣಿಸಿದರು. ವಿಜಯದ ಸೊಕ್ಕಿನಿಂದ ಮತ್ತರಾದ ಅವರಲ್ಲಿ ಫೆಡೋಸ್ಯಾಳ ನವೋತ್ಸಾಹದ ನಿಜಕಾರಣವನ್ನು ಊಹಿಸುವಷ್ಟು ಧೂರ್ತತನವಿರಲಿಲ್ಲ.

೮

ಆ ದಿನ ಹಿರಿಯ ಗೆಸ್ಲಿಕನು ಕಮಾಂಡರನ ಆಫೀಸಿನಲ್ಲಿ ನಡುರಾತ್ರಿಯ ವರೆಗೆ ಕುಳಿತಿದ್ದನು. ಸಾಂಘಿಕ ಕೃಷಿಕ್ಷೇತ್ರದ ಕಾಗದ ಪತ್ರಗಳ ಸಹಾಯ ದಿಂದ ಊರಿನ ಪ್ರತಿಯೊಬ್ಬ ರೈತನು ಎಷ್ಟೆಷ್ಟು ಕಾಳು ಕೊಡಬೇಕೆಂದು ಪಟ್ಟಿಯನ್ನು ತಯಾರಿಸುವುದರಲ್ಲಿ ನಿರತನಾಗಿದ್ದನು. ಚಿಕ್ಕ ಒಂದು ಎಣ್ಣೆಯ ದೀಪ ಮಿಣಿ ಮಿಣಿ ಪ್ರಕಾಶವನ್ನು ಕೊಡುತ್ತಲಿತ್ತು. ಆ ರಾತ್ರಿಯ ಕಠಿಣ ಚಳಿಯಲ್ಲಿಯೂ ಅವನ ನೆತ್ತಿಯ ಮೇಲಿಂದ ಬೆವರ ಹನಿಗಳು ಉದುರು ತ್ತಿದ್ದುವು. ಎಷ್ಟೋ ಸಾರೆ ಕೂಡಿಸಿದನು, ಕಳೆದನು, ಗುಣಾಕಾರ ಭಾಗಾಕಾರ ಗಳ ಪ್ರಯೋಗವೂ ಆಯಿತು. ಆದರೂ ಬೇಕಾದ ಸಂಖ್ಯೆ ಬರುತ್ತಿರಲಿಲ್ಲ.

ಸರಿ ಆದ ಸಂಖ್ಯೆ ಬಂದರೂ ಅದರಿಂದ ಏನೂ ಉಪಯೋಗವಾಗು ವಂತಿರಲಿಲ್ಲ. ಲೆಕ್ಕವನ್ನು ಸರಿಪಡಿಸಿ ಇಂತಿಷ್ಟು ಕಾಳು ಕೊಡಬೇಕೆಂಬ ಆಜ್ಞಾಪತ್ರವನ್ನು ರೈತರಿಗೆಲ್ಲಾ ಕೊಡುವುದೇನೂ ಸುಲಭವಾಗಿತ್ತು. ಆದರೆ ಜರ್ಮನರಿಗೆ ಬೇಕಾದುದು ಕಾಳು, ಲೆಕ್ಕವಲ್ಲ. ಆದರೆ ಕಾಳು ಮಾತ್ರ ಯಾರೊಬ್ಬನಾದರೂ ಒಂದು ಹಿಡಿ ಕೂಡಾ ಈ ವರೆಗೆ ಕೊಟ್ಟಿದ್ದಿಲ್ಲ, ಕೊಡು ವಂತೆಯೂ ಇರಲಿಲ್ಲ.

ಹೊಣೆಯಾಗಿ ಐದು ಜನರನ್ನು ಬಂಧಿಸಿದ ಹಿರಿಯನ ಹೊಸ ಯೋಜನೆಯಿಂದಲೂ ಏನೂ ಪರಿಣಾಮವಾಗಿರಲಿಲ್ಲ. ಒಲೆನಾಳಿಗೆ ರೊಟ್ಟಿ ಕೊಡಲು ಬಂದ ಹುಡುಗನ ಸುದ್ದಿ ಕೂಡಾ ಈ ವರೆಗೆ ಏನೂ ಹತ್ತಿರಲಿಲ್ಲ. ಜರ್ಮನರು ಇದೆಲ್ಲದಕ್ಕೂ ತನ್ನನ್ನು ಹೊಣೆ ಮಾಡುವರೆಂದು ಹಿರಿಯನು ಅರಿತಿದ್ದನು. ಇದರಿಂದ ಮೊದಲೇ ಮಂದವಾಗಿದ್ದ ಅವನ ಬುದ್ಧಿಯು ಇನ್ನಷ್ಟೂ ಜಡವಾಗಿ ಲೆಕ್ಕವೆಲ್ಲಾ ತಪ್ಪುತ್ತಿತ್ತು. ಕೂಡಿಸೋಣ, ಕಳೆಯೋಣವು

ಅಂತ್ಯವಿಲ್ಲದೆ ಸಾಗಿದ್ದಿತು. ಹತ್ತಿರ ಕೂತಿದ್ದ ಫೀಲ್ಡ್ ವೆಬೆಲನಿಗೆ ಬೇಸರ ಹತ್ತಿತು. "ಈ ಜನ್ಮದಲ್ಲಿ ಮುಗಿಯುವುದೇನು ನಿನ್ನ ಲೆಕ್ಕ?" ಎಂದು ಒದರಿದನು. ಹಿರಿಯನ ತಲೆಯಲ್ಲಿನ ಗಲಿಬಿಲಿಯು ಇನ್ನೂ ಅಧಿಕ ವಾಯಿತು. ಹೇಗೂ ಬರೆದು, ೧೧:೮ ನಡುರಾತ್ರಿ ಕಳೆದ ಮೇಲೆ ಲೆಕ್ಕದ ಪಟ್ಟಿಯು ಸಿದ್ಧವಾಯಿತು.

ಹೊರಗೆ ಕಗ್ಗತ್ತಲು ಕವಿದಿತ್ತು ತೀಕ್ಷ್ಣವಾದ ಹಿಮಗಾಳಿಯೂ ಎಡೆಬಿಡದೆ ಬೀಸುತ್ತಲಿತ್ತು. ಜನತೆಯಷ್ಟೇ ನಿಸರ್ಗವೂ ಹಿರಿಯನಿಗೆ ಪ್ರತಿಕೂಲವಾಗಿತ್ತು. ಒಬ್ಬನೇ ಮನೆಗೆ ಹೋಗಲು ಹೆದರಿದನು ಆದರೆ ಸಿಪಾಯಿಯನ್ನು ಜೊತೆಗೆ ಕಳಿಸಲು ಫೀಲ್ಡ್ ವೆಬೆಲನು ಒಪ್ಪಲಿಲ್ಲ. ಕಮಾಂಡ ರನ ಅಪ್ಪಣೆ ಇಲ್ಲದೆ ಸಿಪಾಯಿಗಳನ್ನು ಎಲ್ಲಿಗೂ ಕಳಿಸಲಾಗುವುದಿಲ್ಲವೆಂದು ಜೊತೆಗೆ ಜನ ಕಳಿಸಲು ನಿರಾಕರಿಸಿದನು. ಹಿರಿಯನು ಅಂಜಿಕೆಯಿಂದ ಒಳಗೊಳಗೆ ನಡುಗುತ್ತಿದ್ದನು ಅವನಿಗೆ ಒಬ್ಬನೇ ಕತ್ತಲಲ್ಲಿ ಹೊರಬೀಳು ವಷ್ಟು ಧೈರ್ಯವಿರಲಿಲ್ಲ. ನೀನಾದರೂ ಬಾ ಎಂದು ತನ್ನೊಡನೆ ಮನೆಯ ವರೆಗೆ ಬರಲು ಫೀಲ್ಡ್ ವೆಬೆಲನನ್ನು ಯಾಚಿಸಿದನು ಫೀಲ್ಡ್ ವೆಬೆಲನು ತಿರಸ್ಕಾರದಿಂದ ನಕ್ಕು "ಕೇಂದ್ರಕಚೇರಿಯಿಂದ ಧ್ವನಿಯಂತ್ರದ ಕರೆ (Telephone call) ಯಾವಾಗ ಬಂದೀತೆಂದು ನಿಯಮ ಇಲ್ಲ. ಇಲ್ಲಿ ನನ್ನ ಕೆಲಸ ಬಿಟ್ಟು ನಿನ್ನೊಡನೆ ಬರಬೇಕೇ? ಒಳ್ಳೆಯ ಮಾತು ಹೇಳುವೆ, ನೀನು." ಎಂದನು. ಹಿರಿಯನ ಮನೆಯು ಬರೇ ಇದು ಮಾರುಗಳಷ್ಟೇ ದೂರವಿತ್ತು. ಮೂರು ನಿಮಿಷಗಳಲ್ಲಿ ಹೋಗಿ ಬರಬಹುದೆಂದು ಹಿರಿಯನು ಸೂಚಿಸಿದನು. ಫೀಲ್ಡ್ ವೆಬೆಲನಿಗೆ ಸಿಟ್ಟು ಬಂತು. ಮೇಜಿಗೆ ಮುಷ್ಟಿ ಯಿಂದ ಬಡೆದನು "ಏನು? ಚಿಕ್ಕ ಕೂಸೊ! ನೀನು ಕತ್ತಲೆಗೆ ಅಂಜಲಿಕ್ಕೇ ಸಂಜೆಯ ನಂತರ ಯಾರೂ ಹೊರಗೆ ಬೀಳಬಾರದೆಂದು ನಮ್ಮ ಕಟ್ಟಪ್ಪಣೆ ಇರುವಾಗ ಹೊರಗೆ ಯಾರೂ ಬರುವಹಾಗಿಲ್ಲ ಬೇರೆ ಯಾತರ ಅಂಜಿಕೆ ನಿನಗೆ. ನೆಟ್ಟಗೆ ಹೋಗು ಮನೆಗೆ" ಎಂದು ಗುಡುಗಿದನು.

ಫೀಲ್ಡ್ ವೆಬೆಲನು ಕತ್ತಲೆಯಲ್ಲಿ ಹೊರಬೀಳಲು ಅಂಜುತ್ತಿದ್ದನೆಂದೂ ಇದೆಲ್ಲ ತನ್ನ ಅಂಜುಬುರುಕುತನವನ್ನು ಮುಚ್ಚಲು ಒಂದು ನೆವ ಮಾತ್ರ

ವೆಂದೂ ಗೆಪ್ಲಿಕನು ತಿಳಿಯದಿರಲಿಲ್ಲ. ಆದರೆ ಜರ್ಮನರ ಮುಂದೆ ಧೈರ್ಯ ದಿಂದ ಮಾತಾಡುವ ದಿಟ್ಟತನ ಅವನಿಗೆಲ್ಲಿಂದ ಬರಬೇಕು? ಕುನ್ನಿಯಂ ಯಂತೆ ತಲೆ ತಗ್ಗಿಸಿ ಬಾಗಿಲಿನಿಂದ ಹೊರಬಿದ್ದನು. ಕವಿದ ಕಗ್ಗತ್ತಲಿನಲ್ಲಿ ಕಣ್ಣಿಗೆ ಏನೂ ಕಾಣಿಸುತ್ತಿದ್ದಿಲ್ಲ. ಆದರೆ ಊರಿನ ಎಲ್ಲಾ ಜನರ ಹಗೆಯನ್ನು ಕಟ್ಟಿಕೊಂಡ ಪರಿಸ್ಥಿತಿಯಲ್ಲಿ ಬೆಳಕು ಕೈಯಲ್ಲಿ ಹಿಡಿಯುವುದೂ ಅಪಾಯಕರ ವಾಗಿತ್ತು.

ಚಳಿಯಿಂದಲೂ ಅಂಜಿಕೆಯಿಂದಲೂ ಕೂದಲ ತುದಿಯಿಂದ ಕಾಲ ಬುಡದ ವರೆಗೂ ನಡುಗುತ್ತಾ ಗೆಪ್ಲಿಕನು ಮೆಲ್ಲಮೆಲ್ಲನೆ ಮುಂದೆ ಸಾಗಿದನು. ಹತ್ತಿಪ್ಪತ್ತು ಮಾರು ದೂರ ಹೋಗುವುದರೊಳಗೆ ಒಂದು ಮನುಷ್ಯಾಕೃತಿ ಯನ್ನು ಕಂಡಂತಾಯಿತು. ಭೀತಿಯಿಂದ ಗೆಪ್ಲಿಕನ ನಡುಕ ಇನ್ನಷ್ಟು ಹೆಚ್ಚಾಯಿತು. ಆಫೀಸಿಗೆ ಹಿಂತಿರುಗೋಣವೆನಿಸಿತು. ಆದರೆ ಅದಕ್ಕು ಕಾಲು ಬರಲಿಲ್ಲ. ನಿಂತಲ್ಲಿಯೇ ನಿಂತನು. ಅಷ್ಟರಲ್ಲಿ ಯಾರೊ ತಲೆಯ ಮೇಲೆ ಮುಸುಕು ಹಾಕಿದರು. ಏನೊ ಭಯಂಕರ ಘಟನೆ ನಡೆಯ ಲಿರುವುದೆಂದು ಗೆಪ್ಲಿಕನಿಗೆ ಖಾತ್ರಿಯಾಯಿತು. ಮುಸುಕಿನೊಳಗಿಂದ ಬೊಬ್ಬಿಡಲು ಯತ್ನಿಸಿದನು. ಆದರೆ ಬಾಯಿ ತೆರೆಯುವುದರೊಳಗೆ ತುಟಿಯ ಮೇಲೆ ಬಲವಾದ ಏಟು ಬಿತ್ತು. ಬಾಯೊಳಗೆ ಯಾರೋ ಅರಿವೆ ತುಂಡನ್ನು ತುರುಕಿದರು. ಹಾಗೂ ಹೆಡಮುರಿಗೆ ಕಟ್ಟಿ ಅವನನ್ನು ತುಸು ದೂರ ಒಯ್ದು ಒಂದು ಕೋಣೆಯಲ್ಲಿ ಒಗೆದರು ಅದು ಯಾವ ಮನೆಯೆಂದು ಗೆಪ್ಲಿಕನಿಗೆ ಗೊತ್ತಾಗಲಿಲ್ಲ. ಆದರೆ ಮುಸುಕು ತೆಗೆದಮೇಲೆ ಅಲ್ಲಿದ್ದ ಕೈದೀಪದ ಅಸ್ಪಷ್ಟ ಪ್ರಕಾಶದಲ್ಲಿ ಆ ಕೋಣೆಯಲ್ಲಿದ್ದ ಕೆಲವರ ಗುರುತು ಹತ್ತಿತು. ಒಬ್ಬನು ಕುದುರೆಕಾಸ್ತಾರ ಕುಂಟ ಅಲೆಕ್ಸಾಂಡರ. ಇನ್ನೊಬ್ಬಳು, ಗ್ರೊಖಾಚನ ಹೆಂಡತಿ ಫ್ರೊಸ್ಯಾ.

ಕೋಣೆಯಲ್ಲಿದ್ದ ಮೇಜಿನ ಹಿಂದೆ ಕುಳಿತಿದ್ದ ಒಬ್ಬ ನರೆತ ಕೂದಲಿನ ಮುದುಕಿಯು, "ಅಲೆಕ್ಸಾಂಡರ, ಕೂತು ಎಲ್ಲವನ್ನೂ ಸರಿಯಾಗಿ ಬರಿ. ನಮ್ಮ ಪ್ರತಿಯೊಂದು ಕೆಲಸಕ್ಕೂ ಲೇಖೀ ದಾಖಲೆ ಬೇಕು" ಎಂದು ಆಜ್ಞಾ

ಪಿಸುವ ಸ್ವರದಲ್ಲಿ ಹೇಳಿದಳು. ಗೆಪ್ಲಿಕನನ್ನು ಕಟ್ಟಿದ ಹಗ್ಗವು ಬಿಚ್ಚಲ್ಪಟ್ಟಿತು. ಆದರೂ ಭೀತಿಯಿಂದ ಜರಿಜೀವವಾಗಿದ್ದ ಅವನು ಬಿದ್ದಲ್ಲಿಂದ ಏಳಲಿಲ್ಲ

"ಎಲಾ, ಎದ್ದು ನಿಲ್ಲು, ನೀನು ಈಗ ನ್ಯಾಯಸ್ಥಾನದಲ್ಲಿರುವೆ, ತಿಳಿಯಿತೇ ?" ಆ ಮುದುಕಿಯ ಈ ಮಾತುಗಳನ್ನು ಕೇಳಿ ಗೆಪ್ಲಿಕನ ರಕ್ತ ಆಶ್ಚರ್ಯ, ವಿಸ್ಮಯಗಳಿಂದ ತಣ್ಣೀರಿನಂತಾಯಿತು ಒಬ್ಬ ಕುಂಟ ಕುದರೆ ಕಾಸ್ತಾರನೂ ಕೆಲವು ಹೆಂಗಸರೂ ಕೂಡಿ ತಾವೇ ನ್ಯಾಯಾಧೀಶರೆನ್ನಿಸಿ ಕೊಂಡು ಸ್ವತಃ ಜರ್ಮನರಿಂದ ನೇಮಿಸಲ್ಪಟ್ಟ ಊರ ಹಿರಿಯನಾದ ತನಗೆ, ಜರ್ಮನ ಸೈನ್ಯದ ಕಚೇರಿಯ ತೀರ ಸಮೀಪದಲ್ಲೇ ಆರೋಪಿಯಾಗಿ ನಿಲ್ಲಿಸುವುದು ಕಲ್ಪನೆಗೆ ಮೀರಿದ ವಿಷಯ. ಆದರೆ, ಈಗ ಸತ್ಯಸೃಷ್ಟಿಯಲ್ಲೇ ಆ ಕಲ್ಪನೆಗೆ ಮೀರಿದ ವಿಷಯವು ನಡೆಯುವುದರಲ್ಲಿತ್ತು.

'ಏನು, ಎದ್ದು ನಿಲ್ಲುವುದಿಲ್ಲವೇ ? ನಿನ್ನನ್ನು ರಸ್ತೆಯಲ್ಲೇ ಮುಗಿಸ ಬೇಕಾಗಿತ್ತು. ಆದರೆ, ಎಂಥ ಅಪರಾಧಿಯೇ ಆಗಲಿ, ನ್ಯಾಯವಾದ ವಿಚಾರಣೆ ಮಾಡದೆ ದಂಡಿಸುವುದು ಸರಿಯಲ್ಲವಾದ್ದರಿಂದ ನಿನ್ನನ್ನು ಇಲ್ಲಿಗೆ ತಂದೆವು. ನೋಡು, ನೀನು ಆರೋಪಿ, ನ್ಯಾಯಸ್ಥಾನದಲ್ಲಿ ಯೋಗ್ಯರೀತಿ ಯಿಂದ ವರ್ತಿಸಬೇಕು. ನ್ಯಾಯಾಧೀಶರು ಪ್ರಶ್ನಿಸುವಾಗ ಎದ್ದು ನಿಂತು ಉತ್ತರಕೊಡಬೇಕು ಹೂಂ ಎದ್ದು ನಿಲ್ಲು." ಇನ್ನೊಬ್ಬ ಹೆಂಗಸು ಹೇಳಿದಳು.

ಹಿಂದಿನ ದಿನ ತನ್ನ ಕ್ರೂರ ಕಟ್ಟಾಜ್ಞೆಯಿಂದ ಇಡೀ ಊರಿನಲ್ಲಿ ಹಾಹಾ ಕಾರವೆಬ್ಬಿಸಿದ ಗ್ರಾಮದ ಹಿರಿಯನು ಅಂದು ಅದೇ ಊರಿನ ಹೆಂಗಸರ ನ್ಯಾಯಾಸ್ಥಾನದ ಮುಂದೆ ತನ್ನ ಪಾಪಕೃತ್ಯಗಳಿಗೆ ಉತ್ತರಕೊಡಲು ಆರೋಪಿಯಾಗಿ ನಿಂತಿದ್ದನು.

"ನಿನ್ನ ಹೆಸರೇನು ?"

ಭವಿತವ್ಯದ ಅಂಜಿಕೆಯಿಂದ ಹಿರಿಯನ ನರನಾಡಿಗಳೆಲ್ಲಾ ನಿಂತಂತಾಗಿ ದ್ದುವು. ಉತ್ತರಕೊಡಲು ಪ್ರಯತ್ನಿಸಿದರೂ ಮಾತೇ ಹೊರಡದಾಯಿತು.

"ಇದು ನ್ಯಾಯಸ್ಥಾನ. ಕೇಳಿದ ಪ್ರಶ್ನೆಗಳಿಗೆ ಉತ್ತರಕೊಡಬೇಕು." ತಿರುಗೊಮ್ಮೆ ಅವನನ್ನು ಎಚ್ಚರಿಸಲಾಯಿತು.

ಗದ್ಗದ ಸ್ವರದಲ್ಲಿ ಮೆಲ್ಲನೆ ಉತ್ತರವಿತ್ತನು, "ಪ್ಯಾಟರ್ ಗೆಪ್ಲಿಕ್"

"ನಿನ್ನ ವಯಸ್ಸು?"

"ನಾಲ್ವತ್ತೆಂಟು"

"ನಾಲ್ವತ್ತೆಂಟು! ನಿನ್ನಂತಹ ದ್ರೋಹಿಯನ್ನು ಭೂಮಾತೆಯು ನಾಲ್ವತ್ತೆಂಟು ವರ್ಷಗಳ ಕಾಲ ಹೊರಬೇಕಾಯಿತೇ?" ಆ ಇನ್ನೊಬ್ಬ ಹೆಂಗಸು ಹೇಳಿದಳು.

"ಸುಮ್ಮಗಿರಿ. ವಿಚಾರಣೆ ನಡೆಯುತ್ತಿರುವಾಗ ಟೀಕೆಗೆ ಎಡೆಯಿಲ್ಲ" ಮೇಜಿನ ಹಿಂದೆ ಕುಳಿತಿದ್ದ ವೃದ್ಧಸ್ತ್ರೀಯು ಮೇಜಿನ ಮೇಲೆ ಒಂದೆರಡು ಸಾರಿ ಬಡಿದು ಹೇಳಿದಳು

"ಏನು ಕೆಲಸ ಮಾಡುತ್ತೀ?"

"ಊರ ಹಿರಿಯ"

"ಊರ ಹಿರಿಯ! ಮೊದಲು ಏನು ಮಾಡುತ್ತಿದ್ದಿ?"

ಗೆಪ್ಲಿಕನು ಇದಕ್ಕೆ ಉತ್ತರ ಕೊಡಲಿಲ್ಲ. ನೆಲವನ್ನು ನೋಡುತ್ತಾ ನಿಂತನು

"ಉತ್ತರ ಯಾಕೆ ಕೊಡುವುದಿಲ್ಲ? ನಾಚಿಕೆಯಾಗುತ್ತದೆಯೇ?" ಇನ್ನೊಬ್ಬ ಹೆಂಗಸು ಕೇಳಿದಳು

ಗೆಪ್ಲಿಕನು ಇದಕ್ಕೂ ಉತ್ತರ ಕೊಡಲಿಲ್ಲ

ಕುಂಟ ಅಲೆಕ್ಸಾಂಡರ ಈಗ ಎದ್ದನು. "ಏನು ನಾಲಿಗೆ ಮರಗಟ್ಟಿದೆಯೇ? ದವಡೆಗೆ ಒಂದು ಏಟು ಎರಿಸಿದರೆ ತಾನಾಗಿ ಸಡಿಲಾಗುತ್ತದೆ. ಮಾತಾಡುವೆಯೋ ದವಡೆಗೆ ಕೊಡಲೋ?"

ಗೆಪ್ಲಿಕನ ಬಾಯಿಯಿಂದ ಮಾತು ಹೊರಟಿತು: "ನಾನು ತುರಂಗದಲ್ಲಿದ್ದೆ."

"ತುರಂಗ! ಎಷ್ಟು ಕಾಲ ಇದ್ದೆ?"

"ದೀರ್ಘಕಾಲ."

"ನೀನು ಯಾರು? ರೈತನೋ ಮಜೂರನೋ ಅಥವಾ ಜಮೀನುದಾರನೋ?"

" ಕುಲಕ (ಸಣ್ಣ ಜಮೀನುದಾರ)"

" ಓಹೋ, ನೀನು ಕುಲಕನೊ! ತುರಂಗದಿಂದ ಎಂದು ತಪ್ಪಿಸಿದೆ?"

" ಯುದ್ಧ ಸುರುವಾದೊಡನೆ"

" ಪ್ರಶ್ನೆಗಳನ್ನು ಸ್ವಲ್ಪ ನಿಧಾನವಾಗಿ ಕೇಳಿರಿ ಬರಕೊಳ್ಳಬೇಕಲ್ಲಾ ಎಲ್ಲಾ," ಕುಂಟ ಅಲೆಕ್ಸಾಂಡರ ಒದರಿದನು

ಮೇಜಿನ ಹಿಂದಿನ ಮುದುಕಿಯು ವಿಚಾರಣೆಯನ್ನು ಒಂದು ಕ್ಷಣ ನಿಲ್ಲಿಸಿದಳು. ಅಲೆಕ್ಸಾಂಡರನು "ಸರಿ" ಎಂದೊಡನೆ ಪುನಃ ವಿಚಾರಣೆ ಸುರುವಾಯಿತು.

" ತುರಂಗದಿಂದ ತಪ್ಪಿಸಿ ನೀನು ಎಲ್ಲಿಗೆ ಹೋದೆ?"

" ಮನೆಗೆ."

" ಅದೆಲ್ಲಿ?"

" ರೊಸ್ತೋವದ ಬಳಿ"

" ಜರ್ಮನರು ನಿನಗೆ ಎಲ್ಲಿ ಗಂಟುಬಿದ್ದರು?"

" ರೊಸ್ತೋವದಲ್ಲಿ."

" ಅಲ್ಲೇ ಅವರನ್ನು ಕೂಡಿಕೊಂಡೆಯೇನು?"

" ಹೌದು."

" ತುರಂಗಕ್ಕೆ ಯಾಕೆ ಕಳಿಸಿದರೆಂತ ನಾವು ಕೇಳಲಿಲ್ಲ" ಆ ಇನ್ನೊಬ್ಬ ಹೆಂಗಸು ಹೇಳಿದಳು.

" ಅದು ಸರಿ." ಅಲೆಕ್ಸಾಂಡರ ಸಮ್ಮತಿಸಿದನು

" ಯಾವುದಕ್ಕಾಗಿ ನಿನ್ನನ್ನು ತುರಂಗಕ್ಕೆ ಕಳಿಸಿದರು?"

ಗೆಪ್ಲಿಕನು ಉತ್ತರ ಕೊಡಲಿಲ್ಲ.

ಅಲೆಕ್ಸಾಂಡರ ಪುನಃ ಎದ್ದನು. " ಹೇಳು ಬೇಗನೇ."

ಅಲೆಕ್ಸಾಂಡರನ ಏರಿದ ಸ್ವರವು ಗೆಪ್ಲಿಕನ ಮೈಯಲ್ಲಿ ನಡುಕವನ್ನು ಹುಟ್ಟಿಸಿತು.

ಅಂಜುತ್ತ ಅಂಜುತ್ತ " ಗೊತ್ತಿಲ್ಲ" ಅಂದನು.

" ನಿನಗೆ ಗೊತ್ತಿಲ್ಲ?"

" ನಿಜವಾಗಿಯೂ ಗೊತ್ತಿಲ್ಲ."

" ನೋಡಿರಿ, ಬಾಯಿ ಬಿಡುವುದಿಲ್ಲ, ಅವನು" ಆ ಇನ್ನೊಬ್ಬ ಹೆಂಗಸು ಹೇಳಿದಳು.

" ಯೋಚನೆ ಬೇಡ. ನಾನು ಎಲ್ಲವನ್ನೂ ಹೊರಪಡಿಸುತ್ತೇನೆ" ಅಲೆಕ್ಸಾಂಡರ ಅಂದನು. ಹಾಗು ಪುನಃ ವಿಚಾರಣೆಗೆ ತೊಡಗಿದನು.

" ಜಮೀನುದಾರಿ ನಿರ್ಮೂಲನದ ಮೊದಲಿನಿಂದಲೇ ನೀನು ತುರಂಗ ದಲ್ಲಿದ್ದೆಯಷ್ಟೆ ?"

" ಹೌದು."

" ಸರಿ, ಪೆಟ್ಲೂರಾನ ತಂಡದಲ್ಲಿದ್ದಿಯೇನು ನೀನು ?"

ಅಲೆಕ್ಸಾಂಡರನು ಫಕ್ಕನೆ ಕೇಳಿದ ಈ ಪ್ರಶ್ನೆಯಿಂದ ಗೆಪ್ಲಿಕನು ಚಕಿತ ನಾದನು ಆ ಮನಃಸ್ಥಿತಿಯಲ್ಲಿ ಸತ್ಯವು ತಾನಾಗಿ ಹೊರಗೆ ಬಂತು. ಪೆಟ್ಲೂರಾನ ತಂಡದಲ್ಲಿದ್ದುದನ್ನು ಒಪ್ಪಿದನು.

" ಎಲ್ಲವೂ ಸ್ಪಷ್ಟವಾಯಿತು" ಅಲೆಕ್ಸಾಂಡರ ಜಾಹೀರ ಮಾಡಿದನು.

" ಕುಲಕ, ಪೆಟ್ಲೂರಾನ ತಂಡಕ್ಕೆ ಸೇರಿದವ. ಈಗ ಜರ್ಮನರನ್ನು ಕೂಡಿಕೊಂಡವ ನ್ಯಾಯಸ್ಥಾನದಲ್ಲಿ ದಯೆಗೆ ಅರ್ಹನಾಗಲು ಇವನು ಹಿಂದಿನ ಜೀವನದಲ್ಲಿ ಏನೂ ಮಾಡಿಲ್ಲ"

" ಈಗ ಇನ್ನು ನಿನ್ನ ಮೇಲಿರುವ ಆರೋಪವೇನೆಂದು ಕೇಳು. ಲೆವೊನ್ಯೂಕನನ್ನು ಗಲ್ಲಿಗೇರಿಸಿದ್ದು. ಈಗ ಬಂಧಿತರಾಗಿರುವ ಐದು ಜನರನ್ನು ಮರಣಕ್ಕೆ ಗುರಿಮಾಡಿದ್ದು."

" ಇಷ್ಟೇ ಅಲ್ಲ, ಜರ್ಮನರೊಂದಿಗೆ ಮನೆಗಳನ್ನೆಲ್ಲಾ ನುಗ್ಗಿ ಇದ್ದ ಕಾಳು-ಕಡಿಯನ್ನೂ ದನಕರುಗಳನ್ನೂ ಕೊಳ್ಳೆಹೊಡೆದು ಮಕ್ಕಳು ಮರಿ ಗಳು ಹಾಲಿಲ್ಲದೆ ಸಾಯುವಂತೆ ಮಾಡಿದ್ದು." ಗ್ರೋಕಾಚನ ಹೆಂಡತಿ ಫ್ರೊಸ್ಯಾ ಸೇರಿಸಿದಳು.

" ಎಲ್ಲವೂ ಸೂರ್ಯಪ್ರಕಾಶದಂತೆ ಸ್ಪಷ್ಟವಾಗಿದೆ. ಅವನು ಅಪರಾಧಿ ಯೆಂಬುದರ ಬಗ್ಗೆ ಯಾರಿಗಾದರೂ ಸಂಶಯವಿದೆಯೇ ?" ಅಲೆಕ್ಸಾಂಡರ ಕೇಳಿದನು.

" ಯಾರಿಗೂ ಇಲ್ಲ." ಎಲ್ಲರೂ ಒಕ್ಕೊರಲಿನಿಂದ ಅಂದರು

" ಸರಿ, ಹಾಗಾದರೆ ಇವನಿಗೆ ಯಾವ ಶಿಕ್ಷೆ ವಿಧಿಸೋಣ?" ಮೇಜಿನ ಹಿಂದೆ ಕೂತಿದ್ದ ಮುದುಕಿಯು ಕೇಳಿದಳು

" ಮರಣದಂಡನೆ " ಫ್ರೋಸ್ಕಾ ಸೂಚಿಸಿದಳು.

ಸಮ್ಮತಿಸೂಚಕವಾಗಿ ಅದೇ ಶಬ್ದವನ್ನು ಎಲ್ಲರೂ ಉಚ್ಚರಿಸಿದರು.

" ಗೆಳೆಯರೇ, ಅಪರಾಧಿಗೆ ಮರಣದಂಡನೆ ವಿಧಿಸಬೇಕಾಗಿ ಸೂಚನೆ ಬಂದಿದೆ. ಒಪ್ಪಿಗೆ ಇದ್ದವರು ಕೈ ಎತ್ತಿರಿ." ಕೋಣೆಯಲ್ಲಿದ್ದ ಎಲ್ಲರ ಕೈಗಳೂ ಮೇಲಕ್ಕೆ ಏರಿದುವು.

" ಒಪ್ಪಿಗೆ ಇಲ್ಲದವರು ?"

" ಯಾರೂ ಇಲ್ಲ."

" ತಮ್ಮ ಮತವನ್ನೇ ಕೊಡದವರು ? "

" ಯಾರೂ ಇಲ್ಲ."

" ಅಲೆಕ್ಸಾಂಡರ, ಎಲ್ಲವನ್ನೂ ಸರಿಯಾಗಿ ಬರಿ." ಮೇಜಿನ ಹಿಂದಿನ ಮುದುಕಿಯು ಆಜ್ಞಾಪಿಸಿದಳು ಹಾಗೂ ತೀರ್ಪನ್ನು ಬಾಯಿಯಿಂದ ಹೇಳಿ ಬರೆಸಿದಳು. ಎಲ್ಲವನ್ನೂ ಬರೆದಾದ ಮೇಲೆ ಅಲೆಕ್ಸಾಂಡರನು ಎದ್ದು ನಿಂತನು. ನ್ಯಾಯಸ್ಥಾನದ ಸದಸ್ಯರ ಹೆಸರುಗಳನ್ನು ಓದಿ ಹೇಳಿ ಗಂಭೀರ ಧ್ವನಿಯಲ್ಲಿ ಕೊನೆಯ ನಿರ್ಣಯವನ್ನು ಓದಿದನು " ಮೇಲೆ ಹೆಸರು ಓದಿದ ಐವರ ಈ ಜನತಾನ್ಯಾಯಸ್ಥಾನವು ಸರ್ವಾನುಮತದಿಂದ ಆರೋಪಿಪ್ಯೊಟರ್ ಗೆಪ್ಲಿಕನು ಅಪರಾಧಿಯೆಂಬ ನಿರ್ಣಯಕ್ಕೆ ಬಂದಿದೆ ಹಾಗೂ ಈ ನಿರ್ಣಯಕ್ಕೆ ಅನುಸರಿಸಿ ಅವನಿಗೆ ಮರಣದಂಡನೆ ವಿಧಿಸುತ್ತದೆ. ತೀರ್ಪನ್ನು ಈಗಲೇ ಕಾರ್ಯರೂಪದಲ್ಲಿ ತರಲಾಗುವುದು."

ಗೆಪ್ಲಿಕನಿಗೆ ಸಿಡಿಲುಬಡಿದಂತಾಯಿತು. ವಿಚಾರಣೆಯು ಇಲ್ಲಿಯ ತನಕ ಮುಟ್ಟೀತೆಂದು ಅವನು ಎಣಿಸಿರಲಿಲ್ಲ ಗೋಳಾಡಿದನು, ನೆಲದಲ್ಲಿ ಹೊರಳಾಡಿದನು ಹೆಂಗಸರ ಕಾಲು ಹಿಡಿದು ಅತ್ತನು ಜೀವ ಒಂದು ಉಳಿಸಿದರೆ ತಾನು ಇನ್ನುಮುಂದೆ ಏನೂ ದ್ರೋಹ ಮಾಡುವುದಿಲ್ಲವೆಂದು ಆಣೆ ಮಾಡಿ ಹೇಳಿದನು.

" ನಾಯಿಮಗ. ಒಮ್ಮೆ ಹೊರಗೆ ಬಿಟ್ಟರೆ ಅವನ ಅಪ್ಪಂದಿರಾದ ಜರ್ಮನರಿಗೆ ಹೇಳಿ ನಮ್ಮನ್ನು ಗಲ್ಲಿಗೇರಿಸದೆ ಬಿಡುವವನಲ್ಲ.'' ಗೆಪ್ಲಿಕನು ಆಣೆಮಾಡುವುದನ್ನು ನೋಡಿ, ಫ್ರೊಸ್ಯಾ ಹೇಳಿದಳು.

'' ಇಲ್ಲ, ಹಾಗೆಂದಿಗೂ ಮಾಡಲಿಕ್ಕಿಲ್ಲ. ನಿಜವಾಗಿ ಹೇಳುತ್ತೇನೆ '' ಗೆಪ್ಲಿಕನು ಮರಣದಂಡನೆ ತಪ್ಪಿಸುವ ಕೊನೆಯ ಪ್ರಯತ್ನವಾಗಿ ಈ ಮಾತನ್ನು ಹೇಳಿದನು.

" ಜೀವಮಾನದಲ್ಲಿ ಮನುಷ್ಯನಂತೆ ಬದುಕಲಿಲ್ಲ. ಮನುಷ್ಯನಂತೆ ಸಾಯುವ ಯೋಗ್ಯತೆಯಾದರೂ ಎಲ್ಲಿಂದ ಬರಬೇಕು ?'' ಇವನ ಒದರಾಟವನ್ನು ಕೇಳಿ ಒಬ್ಬಳು ಅಂದಳು

" ಇನ್ನು ವಿಳಂಬ ಮಾಡಲು ಸಾಧ್ಯವಿಲ್ಲ. ಇವನ ಗೋಳಾಟ ಎಲ್ಲಾದರೂ ಜರ್ಮನರ ಕಿವಿಗೆ ಬಿದ್ದರೆ ಮುಗಿಯಿತು ನಮ್ಮ ಆಟ.'' ಈ ಸಂಭಾಷಣೆಯನ್ನು ನಿಲ್ಲಿಸುತ್ತಾ ಅಲೆಕ್ಸಾಂಡರನಂದನು. '' ತೊಡಗೋಣ ಕೆಲಸಕ್ಕೆ.''

ಒಂದು ಹಗ್ಗವನ್ನು ತಂದು ನೆಲದಲ್ಲಿ ಹೊರಳಾಡುತ್ತಿದ್ದ ಗೆಪ್ಲಿಕನ ಕುತ್ತಿಗೆಗೆ ಬಲವಾಗಿ ಬಿಗಿದು ಎಲ್ಲರೂ ಎಳೆದರು ನಾಲ್ಕೈದು ನಿಮಿಷಗಳಲ್ಲಿ ಗೆಪ್ಲಿಕನ ಜೀವನದ ಆಟವು ಅಂತ್ಯವಾಯಿತು.

ಅಲ್ಲೇ ತೋಟದಲ್ಲಿದ್ದ ಒಂದು ನೀರಿಲ್ಲದ ಬಾವಿಯೊಳಗೆ ಗೆಪ್ಲಿಕನ ಮೃತ ಕಳೇಬರವನ್ನು ಎಲ್ಲರೂ ಕೂಡಿ ಹಾಕಿದರು.

ನ್ಯಾಯಸ್ಥಾನದ ಸದಸ್ಯರೆಲ್ಲರೂ ಆ ರಾತ್ರಿ ಅಲ್ಲೇ ಮಲಗಿದರು ಮನೆಗೆ ಹೊರಟರೆ ರಸ್ತೆಯಲ್ಲಿ ಎಲ್ಲಾದರೂ ಜರ್ಮನರ ಕಣ್ಣಿಗೆ ಬಿದ್ದು ಗುಟ್ಟು ರಟ್ಟಾಗುವ ಸಂಭವವಿತ್ತು

ಜನತಾ ನ್ಯಾಯಸ್ಥಾನದ ದಫ್ತರವನ್ನು ಅಲೆಕ್ಸಾಂಡರನು ಜಾಗರೂಕತೆಯಿಂದ ಅಡಗಿಸಿಟ್ಟನು. ಜರ್ಮನ ಆಕ್ರಮಣ ಕಾಲದಲ್ಲಿ ಊರಿನ ಜನರು ಎಸಗಿದ ವಿಸ್ಮಯಕಾರಕ ಸಾಹಸಕೃತ್ಯಗಳ ಪುರಾವೆಯಾಗಿದ್ದ ಅದು ಸ್ವಾತಂತ್ರ್ಯಸಂಪಾದನೆಯ ನಂತರ ಬೆಳಕಿಗೆ ತರುವಂತಹದಾಗಿತ್ತು.

೯

ಫೆಡೋೀಸ್ಯಾ ಅಡಿಗೆಮನೆಗೆ ನೀರು ಹೊರುತ್ತಿದ್ದಳು ಆದರೆ, ಇಂದು ಅವಳ ಕೆಲಸ ಯಾವುದೂ ಸುಸೂತ್ರವಾಗಿ ಸಾಗುತ್ತಿರಲಿಲ್ಲ. ಬಿಡುಗಡೆಯ ದಂಡು ಬೇಗನೇ ಬರುವುದೆಂಬ ವಿಚಾರವು ಅವಳಲ್ಲಿ ಹುಟ್ಟಿಸಿದ ಆತುರತೆ ಯಿಂದ ಅವಳ ಮನಸ್ಸು ಅಸ್ವಸ್ಥವಾಗಿತ್ತು. ನಮ್ಮ ದಂಡು ಬರುವ ಸುದ್ದಿ ಯಾರೊಡನೆಯೂ ಹೇಳದೆ ತಾನೊಬ್ಬಳೇ ಮನಸ್ಸಿನಲ್ಲಿಟ್ಟುಕೊಳ್ಳಬೇಕಾಗಿ ಬಂದುದು ಅವಳ ಮನಸ್ಸಿಗೆ ದೊಡ್ಡ ಹೊರೆಯುಂತಾಗಿತ್ತು. ಬಿಡುಗಡೆಯ ಸಾವಿರಾಪ್ಪದ ಉತ್ಸಾಹದಿಂದ ಹಿಗ್ಗುವ ಹಾಗೂ ಗುಟ್ಟನ್ನು ತನ್ನಲ್ಲೇ ಇಟ್ಟು ಕೊಳ್ಳಲು ಮಾಡಬೇಕಾದ ಮಾನಸಿಕ ಪ್ರಯತ್ನದಿಂದ ಕುಗ್ಗುವ ವಿಲಕ್ಷಣ ಪರಿಸ್ಥಿತಿಯಲ್ಲಿ ಅವಳು ದಿನವನ್ನು ಕಳೆಯುತ್ತಿದ್ದಳು

ದೂರದಲ್ಲಿ ಏನೊ ಸದ್ದು ಕೇಳಿಸಿತು ತಮ್ಮವರು ಬಂದರೆಂದೇ ಎಣಿಸಿದಳು. ಆ ಉತ್ಸಾಹ, ಆತುರತೆಗಳಿಂದ ಅವಳ ಮೈಕೈಗಳು ನಡುಗಿ ದುವು. ಕೈಯಲ್ಲಿದ್ದ ನೀರಿನ ಕೊಡವು ಕೆಳಗೆ ಬಿತ್ತು ನೀರು ಕರ್ಟ್ ವಾರ್ನರನ ಆಗಲೇ ಪಾಲಿಶ್ ಮಾಡಿದ ಬೂಟ್ಸುಗಳ ಮೇಲೆ ಬಿದ್ದು ಅವುಗಳ ಹೊಳಪನ್ನು ಹಾಳುಮಾಡಿತು. ಆದರೆ ಈವತ್ತು ಕರ್ಟ್‌ನ ಲಕ್ಷ್ಯವು ಬೂಟ್ಸಿನ ಹೊಳಪಿನ ಕಡೆಗೆ ಇರಲಿಲ್ಲ. ಅದುವರೆಗೂ ಪತ್ತೆಹತ್ತದ ಗ್ಯುರಿಲ್ಲಾಗಳ ವಿಚಾರವೇ ಅವನ ಮನಸ್ಸನ್ನು ಕೊರೆಯುತ್ತಿತ್ತು. ಫುಸ್ಯಾಳ ಅಕ್ಕನಿಂದ ಲಾದರೂ ಸುದ್ದಿ ದೊರಕಿಸುವ ಕೊನೆಯ ಪ್ರಯತ್ನ ಮಾಡಿಸಬೇಕೆಂದಿದ್ದನು. ಆದರೆ ಫುಸ್ಯಾಳು ಅದನ್ನು ಸಾಧಿಸುವ ವಿಚಾರದಲ್ಲಿ ಅವನಿಗೆ ಹೆಚ್ಚಿನ ಆಶೆ ಇರಲಿಲ್ಲ.

ಅವನು ಆಫೀಸಿಗೆ ಹೊರಟರೂ ಫುಸ್ಯಾ ಇನ್ನೂ ಹಾಸಿಗೆ ಬಿಟ್ಟು ಎದ್ದಿರಲಿಲ್ಲ. " ನಿನ್ನ ಅಕ್ಕನೊಡನೆ ಮಾತಾಡುವ ವಿಷಯದಲ್ಲಿ ಸರಿಯಾಗಿ ಯೋಚಿಸು. ಏನಾದರೂ ಸುದ್ದಿ ತಾರದೆ ಹಿಂತಿರುಗಬೇಡ." ಎಂದು ಒದರಿ ಹೇಳಿ ಮನೆಯಿಂದ ಹೊರಬಿದ್ದನು.

ಪುಸ್ಯಾ ಸಿಟ್ಟಿನಿಂದ ಹಲ್ಲು ಕಚ್ಚಿದಳು ಒಂದಾದರೂ ಚುಂಬನ, ಪ್ರಣಯದ ಮಾತು, ಯಾವುದೂ ಇಲ್ಲ ಗ್ಯಾರಿಲ್ಲಾ, ಗ್ಯಾರಿಲ್ಲಾ, ಹಗಲು ರಾತ್ರಿ ಅದೊಂದೇ ವಿಚಾರ ಸೈನಿಕರು, ಗೂಢಚಾರರು, ಧ್ವನಿಯಂತ್ರ, ತೋಪು, ತುಪಾಕಿ ಎಲ್ಲಾ ಇದ್ದೂ ಕರ್ಟನಿಗೆ ಗ್ಯಾರಿಲ್ಲಾಗಳ ಪತ್ತೆಹಚ್ಚಲು ಸಾಧ್ಯವಾಗಿರಲಿಲ್ಲ ಹಾಗಿರುವಾಗ ಎಲ್ಲರಿಂದಲೂ ಬಹಿಷ್ಕರಿಸಲ್ಪಟ್ಟ ಯಾರೊಬ್ಬರೂ ಮಾತಾಡಿಸದಿರುವ ತಾನು ಅವರ ಸುದ್ದಿ ದೊರಕಿಸುವುದೆಂದರೆ ಹೇಗೆ ?

ಕರ್ಟನ ಇತ್ತೀಚೆಗಿನ ವರ್ತನೆಯಿಂದ ಪುಸ್ಯಾಳಿಗೆ ನಿಜವಾಗಿಯೂ ಸಿಟ್ಟು ಬಂದಿತ್ತು. ತನ್ನ ಅಕ್ಕನೊಡನೆ ಮಾತಾಡಿ ಏನೊಂದೂ ಉಪಯೋಗವಾಗುವಹಾಗಿಲ್ಲವೆಂದು ಅವಳಿಗೆ ನಿಶ್ಚಯವಿತ್ತು. ಪುಸ್ಯಾಳೊಡನೆ ಮಾತನ್ನು ಕೂಡಾ ಅವಳು ಆಡವೆ ಎಷ್ಟೋ ವರ್ಷಗಳಾಗಿದ್ದುವು ಸಭೆ, ಸಮ್ಮೇಳನ ಹಾಗೂ ಉಪಾಧ್ಯಾಯರ ಶಿಕ್ಷಣ ಶಿಬಿರಗಳಿಗೆಂದು ಅವಳು ಆಗಾಗ ಪುಸ್ಯಾಳಿದ್ದ ಊರಿಗೇನೋ ಬರುತ್ತಿದ್ದಳು. ಆದರೆ ಒಮ್ಮೆಯಾದರೂ ಅವಳಿದ್ದಲ್ಲಿಗೆ ಬಂದಿರಲಿಲ್ಲ. ಅವಳ ದೃಷ್ಟಿಯಲ್ಲಿ ಏನೊಂದೂ ಕೆಲಸ ಮಾಡದೆ ದಿನವಿಡೀ ತನ್ನ ವೇಷ ಭೂಷಣಗಳಲ್ಲೇ ನಿರತಳಾಗಿದ್ದ ಪುಸ್ಯಾ, ಸಂಸರ್ಗಕ್ಕೆ ಕೂಡಾ ಅಯೋಗ್ಯಳಾದ ಬಣ್ಣದ ಬೀಸಣಿಗೆಯಾಗಿದ್ದಳು ಪುಸ್ಯಾಳ ಗಂಡನ ವಿಷಯದಲ್ಲಿ ಕೂಡಾ ಅವಳಿಗೆ ಉತ್ತಮ ಅಭಿಪ್ರಾಯ ವಿರಲಿಲ್ಲ ಅವನು ತನ್ನ ಹೆಂಡತಿಯ ಬಾಹ್ಯಸೌಂದರ್ಯಕ್ಕೆ ಮರುಳಾಗಿ ಅವಳನ್ನು ಕರ್ತವ್ಯದ ದಾರಿಗೆ ಹಚ್ಚಲು ಅಸಮರ್ಥನಾದ ಮೂರ್ಖನೆಂದು ಅವಳು ತಿಳಿದಿದ್ದಳು. ಈಗಂತೂ ತಾನು ಜರ್ಮನ ಆಫೀಸರನೊಡನಿದ್ದೇನೆ ತನ್ನ ಮೇಲೆ ಮೊದಲೇ ಇದ್ದ ದ್ವೇಷ. ತಿರಸ್ಕಾರಗಳು ಈಗ ಇಮ್ಮಡಿಯಾಗಿರಬೇಕು. ಇಂತಹ ಪರಿಸ್ಥಿತಿಯಲ್ಲಿ ತಾನು ಹೋಗಿ ಅವಳನ್ನು ಮಾತಾಡಿಸುವುದು ಹೇಗೆ ? ಅವಳು ಖಂಡಿತವಾಗಿ ತನ್ನನ್ನು ಕಣ್ಣೆತ್ತಿ ಸಹ ನೋಡಲಾರಳು.

ಇದೆಲ್ಲಾ ತಿಳಿಯದಷ್ಟು ಕರ್ಟನೇನೂ ಮೂರ್ಖನಾಗಿರಲಿಲ್ಲ. ಆದರೂ ಅಕ್ಕನಿದ್ದಲ್ಲಿಗೆ ಹೋಗಿ ಅವಳನ್ನು ಮಾತಾಡಿಸಬೇಕೆಂದು ಒಂದೇಸವನೆ ಕಾಡ ಹತ್ತಿದ್ದನು. ಹಾಗೂ ಆ ವಿಷಯ ಎತ್ತಿದಾಗಲೆಲ್ಲಾ ತನ್ನ ಮೇಲೆ ಸಿಟ್ಟಿಗೇಳುತ್ತಿದ್ದನು ಪುಸ್ಯಾಳಿಗೆ ಇದು ತೀರಾ ದುಃಸಹವಾಗಿತ್ತು. ಅವಳಿಗೆ

ತನ್ನ ಗಂಡನ ನೆನಪಾಯಿತು. ಅವನೂ ಕರ್ಟನಂತೆಯೇ ಸೈನ್ಯದ ಅಧಿಕಾರಿಯಾಗಿದ್ದನು. ಆದರೆ ಒಮ್ಮೆ ಕೂಡಾ ತನ್ನ ಮೇಲೆ ಕೋಪಿಸಿದ್ದಿಲ್ಲ ಅಂತಹ ಚಿನ್ನದಂತಹ ಗಂಡನನ್ನು ಬಿಟ್ಟು ಈ ಜರ್ಮನ ಆಫೀಸರನೊಡನೆ ಬಂದದ್ದು ಸರಿಯೊ ಎಂಬ ಶಂಕೆಯೊಂದು ಪುಸ್ಸ್ಯಾಳ ಮನಸ್ಸಿನಲ್ಲಿ ಕ್ಷಣಕಾಲ ಮೂಡಿತು. ಆದರೆ ಬೇರೇನು ಮಾಡಲು ಬರುವಂತಿತ್ತು ? ತನ್ನ ಗಂಡನು ಯುದ್ಧರಂಗಕ್ಕೆ ಹೋಗಿ ಆರು ತಿಂಗಳಾಗಿದ್ದುವು. ಈ ಅವಧಿಯಲ್ಲಿ ಅವನ ಸುದ್ದಿಯೇ ಇರಲಿಲ್ಲ ಒಂದೇ ಒಂದು ಪತ್ರ ಕೂಡಾ ಬಂದಿರಲಿಲ್ಲ ಅವನು ಸತ್ತಿರಬೇಕು ಅಥವಾ ಸೆರೆಗೆ ಸಿಕ್ಕಿರಬೇಕು. ಯುದ್ಧ ಇನ್ನು ಎಷ್ಟು ವರ್ಷಗಳ ವರೆಗೆ ನಡೆಯಬಹುದೋ ಯಾರು ಬಲ್ಲರು ? ಗಂಡನ ಆಸೆ ಹಿಡಿದು ಕೂಡುವುದೆಂದರೆ ಸಂಕಷ್ಟ ಉಪವಾಸಗಳಲ್ಲಿ ಬಿದ್ದು ತೊಳಲಾಡಿ ತೊಳಲಾಡಿ ಸಾಯುವುದಲ್ಲದೆ ಅನ್ಯಥಾ ಇರಲಿಲ್ಲ ತನ್ನ ಅಕ್ಕಳಂತೆ ತಾನು ಸಂಕಷ್ಟ ಸಹಿಸಲು ಹುಟ್ಟಿದವಳಲ್ಲ. ಹೀಗಿರುವಾಗ, ತಾನು ಈಗ ಮಾಡಿದ್ದೇ ಸರಿ ಕರ್ಟನು ತನ್ನ ಗಂಡ ಕೊಟ್ಟಷ್ಟೇ ಸುಖವನ್ನು ಕೊಡಬಲ್ಲನು. ಅವನು ಜರ್ಮನನಾದರೇನಾಯಿತು ? ಈಗ ಅಧಿಕಾರ ಜರ್ಮನರ ಕೈಯಲ್ಲಿದೆ. ಇನ್ನು ಮುಂದೆ ಅವರೇ ಆಳುವವರು. ಅಲ್ಲದೆ ಕರ್ಟನು ತನ್ನನ್ನು ಬೇಗನೇ ತನ್ನ ಊರಿಗೆ ಕರಕೊಂಡು ಹೋಗಿ ಲಗ್ನಮಾಡಿಕೊಳ್ಳುವೆನೆಂದು ಮಾತು ಕೊಟ್ಟಿದ್ದನು

ತಾನು ಅಕ್ಕನೊಡನೆ ಮಾತಾಡಿ ಗ್ಯುರಿಲ್ಲಾಗಳ ಗುಟ್ಟು ತಿಳಿಯಬೇಕೆನ್ನುವ ಹಟ ತೊಟ್ಟಂದಿನಿಂದ ಮಾತ್ರ ಕರ್ಟನ ವರ್ತನೆಯೇ ವಿಲಕ್ಷಣವಾಗಿತ್ತು. ತನ್ನ ಅಕ್ಕನಿಗೆ ಮೋರೆ ತೋರಿಸುವಷ್ಟು ಕೂಡಾ ಮಾನಸಿಕ ಧೈರ್ಯ ಪುಸ್ಸ್ಯಾಳಿಗೆ ತುಸುವಾದರೂ ಇರಲಿಲ್ಲ. ಗ್ಯುರಿಲ್ಲಾಗಳ ಸುದ್ದಿ ಅವಳೊಡನೆ ಕೇಳುವದೆಂದರೆ ಹೇಗೆ ?

ಇದೇ ವಿಚಾರದಲ್ಲಿ ಮಗ್ನಳಾದ ಪುಸ್ಸ್ಯಾ ಮೆಲ್ಲನೆ ಹಾಸಿಗೆಯಿಂದ ಎದ್ದಳು. ವ್ಯವಸ್ಥಿತತನದ ಮಾದರಿಯಾಗಿದ್ದರೂ ಕರ್ಟನು ಇಂದು ಮನಸ್ಸಿನಲ್ಲಿ ಸುಳಿಯುತ್ತಿದ್ದ ಸಮಸ್ಯೆಗಳ ಒತ್ತಡದಿಂದಾಗಿ ತನ್ನ ಸಮವಸ್ತ್ರದ ಷರಾಯಿಯನ್ನು ಮೇಜಿನ ಮೇಲೆ ಒಗೆದು ಹೋಗಿದ್ದನು. ಒಳಗಿಡಲು

ಪುಸ್ಪಾ ಅದನ್ನು ಎತ್ತಿದಳು. ಕಿಸೆಯಲ್ಲಿ ನೀಲ ಬಣ್ಣದ ಉದ್ದ ಲಕೋಟಿ ಯೊಂದು ಕಣ್ಣಿಗೆ ಬಿತ್ತು. ಕರ್ಟನ ಟಪ್ಪಾಲೆಲ್ಲವೂ ಕಚೇರಿಗೆನೇ ಬರುತ್ತಿದ್ದುದರಿಂದ ಅವನಿಗೆ ಬಂದ ಪತ್ರವೊಂದನ್ನಾದರೂ ಪುಸ್ಪಾ ಈ ವರೆಗೆ ಕಂಡಿರಲಿಲ್ಲ ಅವು ಅವಳ ಕಣ್ಣಿಗೆ ಬೀಳದಂತೆ ಅವನು ಬಹಳ ಜಾಗರೂಕತೆ ವಹಿಸುತ್ತಿದ್ದನೆಂಬುದು ಈಗ ಅವಳ ಲಕ್ಷ್ಯಕ್ಕೆ ಬಂದಿತು. ಪುಸ್ಪಾ ಲಕೋಟಿಯನ್ನು ಒಡೆದು ನೋಡಿದಳು. ಮುದ್ದಾದ ಚಿಕ್ಕ ಅಕ್ಷರದಲ್ಲಿ ಬರೆದ ನಾಲ್ಕು ಹಾಳೆಗಳ ಪತ್ರ. ಹಾಳೆಗಳು ಮಂದ ಸುವಾಸನೆಯನ್ನು ಬೀರುತ್ತಿದ್ದವು. ಹಾಗೂ ಅವುಗಳ ನಡುವೆ ಒತ್ತಿದ ಹೂವೊಂದು ಇಡಲ್ಪಟ್ಟಿತ್ತು. ಪತ್ರವು ಜರ್ಮನ ಭಾಷೆಯಲ್ಲಿದ್ದುದರಿಂದ ಯಾರ ಪತ್ರವೆಂದೇನೂ ಪುಸ್ಪಾಳಿಗೆ ತಿಳಿಯಲಿಲ್ಲ. ಆದರೆ, ಹೆಂಗಸಿನ ಪತ್ರವೆಂಬದರಲ್ಲಿ ಏನೂ ಸಂದೇಹ ವಿರಲಿಲ್ಲ ಪುಸ್ಪಾ ಕೋಪ ಹಾಗೂ ಅಸೂಯೆಯಿಂದ ತುಟಿ ಕಚ್ಚಿದಳು ಈಗ ಗೊತ್ತಾಯಿತು ತನಗೆ ತಿಳಿಯದಂತೆ ಕರ್ಟನಿಗೆ ಜರ್ಮನಿಯಿಂದ ಯುವತಿಯೊಬ್ಬಳು ಪತ್ರ ಬರೆಯುತ್ತಿದ್ದಳು. ಆ ಸುವಾಸನೆಯುಳ್ಳ ಹಾಳೆಗಳು, ಆ ಒತ್ತಿದ, ಹೂವು ಪತ್ರವು ಯುವತಿಯದೆಂಬುವನ್ನು ನಿಸ್ಸಂಶಯವಾಗಿ ಸೂಚಿಸುತ್ತಿದ್ದವು. ಕರ್ಟನ ಪ್ರೀತಿಯ ಮಂದವಾರುತವು ಈ ವರೆಗೆ ಬಿಸುತ್ತಲಿದ್ದ ಅವಳ ಹೃದಯದಲ್ಲಿ, ಈಗ ಸಂಶಯಮಾತ್ಸರ್ಯಗಳ ಬಿರುಗಾಳಿಯ ಹಾರಾಟವು ಪ್ರಾರಂಭವಾಯಿತು. ಅವಳಿಗೆ ಕಚೇರಿಯಲ್ಲಿ ಕರ್ಟನಿದ್ದೆಡೆಗೆ ಹೋಗಿ ಅವನು ಮಾಡಿದ ಮೋಸವನ್ನು ಎಲ್ಲರೆದುರಿಗೆ ಬೈಲಿಗೆಳೆದು ತನ್ನ ದಾರಿ ಹಿಡಿದು ಹೋಗೋಣವೆನಿಸಿತು. ಆದರೆ ಇಂದ್ರಿಯಸುಖಕ್ಕಾಗಿ ಮನಸ್ಸನ್ನೇ ಮಾರಿದ ಅವಳಿಂದ ಇಂತಹ ಸ್ವಾಭಿಮಾನಿ ವರ್ತನೆಯು ಎಲ್ಲಿ ಸಾಧ್ಯ ? ಆ ಮೆತ್ತನ್ನ ಹಾಸಿಗೆ, ರೇಶ್ಮೆಯ ಅರಿವೆ, ಸಗ್ರಾಸಭೋಜನ ಇವು ಕರ್ಟನ ಪ್ರೇಯಸಿಯಲ್ಲವಾದರೆ ಈ ಯುದ್ಧಕಾಲದಲ್ಲಿ ಬೇರೆಲ್ಲಿ ಅವಳಿಗೆ ಸಿಗಬೇಕು? ವಿಷಯಲಾಲಸೆಯೇ ಸರ್ವಸ್ವವಾದ ಅವಳಿಗೆ ಕರ್ಟನೊಡನೆ ವಿಧೇಯತೆಯಿಂದ ವರ್ತಿಸುವುದಲ್ಲದೆ ಬೇರೆ ಮಾರ್ಗವಿರಲಿಲ್ಲ. ಹಾಗಾಗಿ ತನಗಾದ ಅವಮಾನ ಮೋಸವನ್ನೆಲ್ಲ ಜೀರ್ಣಿಸಿಕೊಂಡು ಕರ್ಟನ ಆಜ್ಞೆಯನ್ನು ಪಾಲಿಸಲು ತನ್ನ ಅಕ್ಕನಲ್ಲಿ ಹೋಗಲು ಸಿದ್ಧಳಾದಳು.

ಫೆಡೋಸ್ಯಾ ಚಹ ತಂದಿಟ್ಟಿರಲಿಲ್ಲ. ಅದು ಅವಳ ತಪ್ಪಾಗಿರಲಿಲ್ಲ. ಯಾಕಂದರೆ ತರಲು ಹೇಳಿದ ಮೇಲೆಯೇ ತರುವುದು ನಿತ್ಯದ ಕ್ರಮ ಈ ಹೊತ್ತು ಚಹಾ ತರಲು ಪುಸ್ಯಾ ಆ ವರೆಗೆ ಹೇಳಿರಲಿಲ್ಲ. ಆದರೂ ತಾರದ್ದಕ್ಕೆ ಫೆಡೋಸ್ಯಾಳ ಮೇಲೆ ಕೋಪಿಸಿಕೊಂಡಳು. ಮೇಲಿನವರ ಮೇಲೆ ಬಂದ ಸಿಟ್ಟನ್ನು ಕೆಳಗಿನವರ ಮೇಲೆ ಪ್ರಯೋಗಿಸುವುದು ಮನುಷ್ಯಸ್ವಭಾವ ಪುಸ್ಯಾಳು ಅದಕ್ಕನುಸರಿಸಿಯೇ ಕಾರಣವಿಲ್ಲದೆ ಫೆಡೋಸ್ಯಾಳ ಮೇಲೆ ಸಿಟ್ಟಿಗೆ ಎದ್ದಳು ಆದರೆ ಆ ದಿನ ಫೆಡೋಸ್ಯಾ ತೀರಾ ಬೇರೆಯಾಗಿದ್ದಳು. ಯಾವಾಗಲೂ ಬೈಗಳನ್ನು ಸಿಟ್ಟಿನ್ನದೆ ಸಹಿಸುತ್ತಿದ್ದ ಫೆಡೋಸ್ಯಾ ಆ ದಿನ ಮಾತ್ರ ಚಹಾ ಯಾಕೆ ತರಲಿಲ್ಲ ಎಂದು ಕೇಳಿದ ಮಾತಿಗೆ ನನಗೆ'ಮನಸ್ಸು ಬಂದಾಗ ತರುವೆ'ಎಂದು ಹೇಳಿಬಿಟ್ಟಳು. ಸನ್ನಿಹಿತವಾದ ಸ್ವಾತಂತ್ರ್ಯವು ಅವಳಲ್ಲಿ ಅಂತಹ ಧೈರ್ಯವನ್ನು ಹುಟ್ಟಿಸಿತ್ತು. ಫೆಡೋಸ್ಯಾಳ ಈ ವಿಚಿತ್ರವಾದ ಉದ್ಧಟತನದಿಂದ ಪುಸ್ಯಾ ಅವಾಕ್ಕಾದಳು.'ತರುವೆಯೋ ಇಲ್ಲವೋ ? ಎಂದು ಒದರಿದಳು. " ಸುಮ್ಮನೆ ಒದರಬೇಡ, ನನಗೆ ಇಷ್ಟ ಬಂದಾಗ ತರುವೆ ", ಎಂದು ಫೆಡೋಸ್ಯಾ ಸ್ವಲ್ಪವೂ ಕದಲದೆ ಹೇಳಿಬಿಟ್ಟಳು. ಪುಸ್ಯಾಳಿಗೆ ಏನು ಮಾಡುವುದೆಂದು ತೋಚಲಿಲ್ಲ. ಒಂದೆರಡು ಏಟಾದರೂ ಕೊಡೋಣವೆಂದರೆ ಮುದುಕಿಯಾದರೂ ಫೆಡೋಸ್ಯಾ ಅವಳಿಗಿಂತಲೂ ಸಶಕ್ತಳಿದ್ದಳು.

" ನಿಲ್ಲು, ನನ್ನ ಗಂಡನೊಡನೆ ಹೇಳುವೆ " ಎಂದಿಷ್ಟೇ ಹೇಳಿದಳು.

" ನಿನ್ನ ಗಂಡ! " ತಿರಸ್ಕಾರದಿಂದ "ಗಂಡ" ಶಬ್ದವನ್ನು ಒತ್ತಿ ನಗುತ್ತಾ ಫೆಡೋಸ್ಯಾ ನುಡಿದಳು. " ಹೇಳು, ನೂರು ಬಾರಿ ಹೇಳು ಈಗಲೇ ಅವನ ಕಚೇರಿಗೆ ಓಡಿ ಹೋಗಿ ಬೇಕಾದರೆ ಹೇಳು. ಇಲ್ಲವೇ ನಾನೇ ಹೇಳಿ ಬರುತ್ತೇನೆ "

ಪುಸ್ಯಾ ಆಶ್ಚರ್ಯದಿಂದ ಚಕಿತಳಾಗಿ ಫೆಡೋಸ್ಯಾಳನ್ನೇ ನೋಡಹತ್ತಿದಳು. ಆದರೆ ಫೆಡೋಸ್ಯಾ ಸುಮ್ಮನೆ ಕೂಡಲಿಲ್ಲ. " ಏನು ದುರದುರನೆ ನೋಡುತ್ತಿರುವೆ. ಆಶ್ಚರ್ಯಪಡಲು ಏನಿದೆ ? ಅವನೊಡನೆ ಹೇಳಬೇಕು ಅಂದೆಯಲ್ಲಾ. ಈಗಲೇ ಹೇಳು. ನಿನ್ನಿಂದಾಗದಿದ್ದರೆ ನಾನೇ ಬೇಕಾದರೆ ಹೋಗಿ ಹೇಳುತ್ತೇನೆ."

" ಫೆಡೋಸ್ಯಾ, ನಿನಗೇನಾಗಿದೆ, ಈವತ್ತು ? "

" ನನಗೇನೂ ಆಗಿಲ್ಲ ಆದರೆ, ನಿನಗೆ ಏನಾಗುವುದಿದೆಯೆಂಬುದನ್ನು ಸ್ವಲ್ಪ ಯೋಚಿಸು ನೀನು ಮಾಡಿದ ದ್ರೋಹವನ್ನು ಜನತೆಯಷ್ಟೇ ಅಲ್ಲ, ನೆಲ, ನೀರು ಕೂಡಾ ಕ್ಷಮಿಸಲಿಕ್ಕಿಲ್ಲ. ನಿನ್ನ ಗತಿಯು ಎಷ್ಟು ಭಯಂಕರ ವಾಗುವುದು, ಗೊತ್ತೇ? ಜರ್ಮನ ಸಿಪಾಯಿಗಳು ಚಿತ್ರಹಿಂಸೆಗೈದು ನದಿಯಲ್ಲಿ ಮುಳುಗಿಸಿದ ಒಲೇನಾಳೇ ನಿನಗಿಂತ ಪುಣ್ಯವಂತಳೆಂದು ನೀನೇ ಹೇಳುವ ದಿನ ಬೇಗನೇ ಬರುವುದು. ನೀನು ನದಿಯಲ್ಲಿ ಮುಳುಗಲು ಹೋದರೆ ಇಂತಹ ದ್ರೋಹಿಗೆ ಎಡೆ ಕೊಡಲಾರೆನೆಂದು ನದಿಯು ನಿನ್ನನ್ನು ಹೊರಗೆ ಚೆಲ್ಲುವುದು ನೆಲದಲ್ಲಿ ಅಡಗಲು ಯತ್ನಿಸಿದರೆ ನೆಲವು ಕೂಡ ನಿನಗೆ ಆಶ್ರಯ ಕೊಡಲಾರದು ನೀನು ಬಾಯಿಯಲ್ಲಿ ಹಾಕಿಕೊಂಡ ಅನ್ನವು ಹೇಸಿಕೆಯಾಗುವುದು. ಫಾಶಿ ಕಂಬದ ಮೇಲೆ ನೇತಾಡುವ ಲೆವೊನ್ಯಾಕನ ಗತಿಯಾದರೂ ತನಗೆ ಬರಲೆಂದು ಬೊಬ್ಬಿಡುವೆ, ನೀನು! "

ಉದ್ವೇಗಾತಿರೇಕದ ಭರದಲ್ಲಿ ಫೆಡೋಸ್ಯಾ ಈ ರೀತಿ ಮಾತಾಡಹತ್ತಿದಳು. ದಾಸ್ಯಶೃಂಖಲೆಗಳು ಮುರಿದು ಬೀಳುವ ಸುಸಮಯವು ಸನ್ನಿಹಿತವಾಗಿದೆಯೆಂಬ ಸಂತೋಷದ ಹಿಗ್ಗಿನಲ್ಲಿ ಅವಳ ಮನಸ್ಸಿನಲ್ಲಿ ಹುದುಗಿದ್ದ ಗುಪ್ತಭಾವನೆಗಳೆಲ್ಲವೂ ಮಹಾಪೂರದಂತೆ ಒಂದರ ಹಿಂದೊಂದು ಹೊರಗೆ ಬಂದುವು. ಅವಳ ರೌದ್ರಾವತಾರವನ್ನು ನೋಡಿ ಪುಸ್ಯಾ ಹೆದರಿದಳು. ಆ ದೃಶ್ಯವನ್ನು ತಪ್ಪಿಸುವುದಕ್ಕಾಗಿ ಬಾಗಿಲು ಇಕ್ಕಿದ ಜೋರಿನಲ್ಲಿ ಗೋಡೆಯ ಗಚ್ಚು ಚೂರು ಕೆಳಗೆ ಬಿತ್ತು.

* * * *

ಕೆಪ್ಟನ್ ಕರ್ಟ ವಾರ್ನರನು ಆಫೀಸಿನ ಆವಾರವನ್ನು ಪ್ರವೇಶಿಸಿದೊಡನೆ ಅವನ ಕೋಪದಿಂದ ಕಿಡಿಕಿಡಿಯಾದ ಕಣ್ಣುಗಳನ್ನೂ ಗಂಟಿಕ್ಕಿದ ಹುಬ್ಬುಗಳನ್ನೂ ನೋಡಿ ಕಾವಲಿನ ಸಿಪಾಯಿಗಳು ಎಂದಿಗಿಂತಲೂ ಸರಿಯಾಗಿ ನೆಟ್ಟಗೆ ನಿಂತು ಸಲಾಮು ಮಾಡಿದರು. ಫೀಲ್ಡ್‌ವೆಬೆಲ (ಕೆಳಗಿನ ಅಧಿಕಾರಿ) ಔಸನು ಕೂತಲ್ಲಿಂದ ಹಾರಿ ನಿಂತನು.

" ಕೇಂದ್ರ ಕಚೇರಿಯಿಂದ ಏನಾದರೂ ಕೇಳಿದರೋ ? "

" ಹೌದು, ಕೆಪ್ಟನ್ ಸಾಹೇಬ. "

" ನನಗೆ ಯಾಕೆ ಹೇಳಲಿಲ್ಲ ? "

" ಹೇಳಬೇಕೆಂದು ಹುಕುಮು ಇರಲಿಲ್ಲ, ಕೆಪ್ಟನ್ ಸಾಹೇಬ "

" ಹುಕುಮಿಲ್ಲ ಅಂದರೆ ಏನು ? "

" ತಮಗೆ ಹೇಳುವ ಅವಶ್ಯವಿಲ್ಲ ಅಂದರು "

" ಅವರು ಕೇಳಿದ್ದು ಏನು ಹಾಗಿದ್ದರೆ ? "

" ಕೈದಿಯಿಂದ ಏನಾದರೂ ಸುದ್ದಿ ಸಿಕ್ಕಿತೋ ಎಂದಿಷ್ಟೇ ಕೇಳಿದರು"

" ನೀನೇನು ಹೇಳಿದಿ ? "

" ಏನೂ ಸಿಗಲಿಲ್ಲವೆಂದು ಹೇಳಿದೆ. "

" ಏನು? " ಕರ್ಟನು ಗರ್ಜಿಸಿದನು "ಮತ್ತೇನಾದರೂ ಹೇಳಿದೆಯೋ"?

" ಮತ್ತು ... ...ಮತ್ತು ... .. ನಾನು, "

" ಹೇಳು ಬೇಗ. "

" ಕೈದಿಗೆ ವಿಧಿಸಿದ ದೇಹಾಂತಶಿಕ್ಷೆಯನ್ನು ಜಾರಿಮಾಡಿದೆವೆಂದು ತಿಳಿಸಿದೆ "

" ಅದನ್ನು ತಿಳಿಸಲು ನಿನಗೆ ಹೇಳಿದವರ್‍ಯಾರು" ?

ಫೀಲ್ಡ್ ವೆಬೆಲನು ಮರುಮಾತಾಡದೆ ಕೋಲಿನಂತೆ ನೆಟ್ಟಗೆ ನಿಂತನು.

" ಬೊಗಳು, ಆ ಸುದ್ದಿ ತಿಳಿಸಲು ನಿನಗೆ ಯಾರು ಹೇಳಿದರು ? "

" ಯಾರೂ ಇಲ್ಲ, ಕೆಪ್ಟನ್ ಸಾಹೇಬ. "

" ಮತ್ತೆ ಯಾಕೆ ಈ ಅಧಿಕಪ್ರಸಂಗ ಮಾಡಿದೆ ? "

ಫಿಲ್ಡ್ ವೆಬೆಲನ ಕೆನ್ನೆಗೆ ಬಲವಾದ ಏಟೊಂದು ಬಿತ್ತು. ಏಟಿನಜೋರಿಗೆ ಕೆನ್ನೆ ಕೆಂಪಾದರೂ ಫೀಲ್ಡ್ ವೆಬೆಲನು ನಿಂತಲ್ಲಿಂದ ಕದಲಲಿಲ್ಲ.

" ಗ್ರಾಮದ ಹಿರಿಯನೆಲ್ಲಿದ್ದಾನೆ ? ಬಂದಿಲ್ಲ ಏನು ಅವನು ಈವತ್ತು? "

" ಇಲ್ಲ, ಇನ್ನೂ ಬಂದಿಲ್ಲ. "

" ಕಾಳು ಎಷ್ಟು ಬಂದಿದೆ ? "

" ಏನೂ ಇಲ್ಲ. "

ಕರ್ಟನು ಕೋಪಾತಿರೇಕದಿಂದ ಮೇಜಿಗೆ ಬಡೆದನು.

“ ಆ ಹುಡುಗನ ಸಮಾಚಾರ ? ”

“ ಏನೂ ಈವರೆಗೆ ಗೊತ್ತಾಗಲಿಲ್ಲ. ”

ಕರ್ಟನು ಮೇಜಿಗೆ ಇನ್ನೂ ಹೆಚ್ಚಾಗಿ ಬಡಿದನು “ ಹಿರಿಯನಿಗೆ ಕರೆ ಕಳಿಸು ಬೇಗ ”

ಚಕ್ ಎಂದು ಸಲಾಮೊಂದನ್ನು ಮಾಡಿ ಫೀಲ್ಡ್‌ವೆಬೆಲನು ಹೊರಗೆ ಹೋದನು

ಕರ್ಟನಿಗೆ ತನ್ನ ಜೀವನದ ಆಕಾಶದಲ್ಲಿ ಕಾರ್ಮೋಡಗಳೇ ಕಾಣಿಸುತ್ತಿದ್ದುವು ಒಲೆನಾಳನ್ನು ಒಂದು ವರ್ಷದ ವರೆಗೆ ಪ್ರಶ್ನಿಸಿದರೂ ಅವಳು ಒಂದಕ್ಷರವನ್ನೂ ಹೇಳುತ್ತಿದ್ದಿಲ್ಲವೆಂಬುದರಲ್ಲಿ ಎಳ್ಳಷ್ಟೂ ಸಂಶಯವಿರಲಿಲ್ಲ. ಅವಳಿಗೆ ಕೊಟ್ಟ ಚಿತ್ರಹಿಂಸೆಯ ನೂರ ಪಾಲು ನರಕಯಾತನೆಯನ್ನೂ ಅವಳು ಪಿಟ್ಟೆನ್ನದೆ ಸಹಿಸಲು ಹಿಂಜರಿಯುತ್ತಿದ್ದಿಲ್ಲ ಆದರೆ, ಕೇಂದ್ರಕಚೇರಿಯವರಿಗೆ ಅಷ್ಟೆಲ್ಲಾ ತಿಳಿಯುವ ಬಗೆ ಹೇಗೆ ? ಒಲೆನಾಳನ್ನು ಅವಸರದಿಂದ ಕೊಂದು ಹಾಕಿ ಗ್ಯುರಿಲ್ಲಾಗಳ ಗುಟ್ಟನ್ನು ದೊರಕಿಸಲು ಇದ್ದ ಒಂದೇ ದಾರಿಯನ್ನು ಮುಚ್ಚಿದ ಆರೋಪವು ಈಗ ತನ್ನ ಮೇಲೆ ಬರುವುದರಲ್ಲಿದ್ದಿತು. ಆದ್ದರಿಂದ ಒಲೆನಾಳ ಮರಣದ ಸುದ್ದಿಯನ್ನು ಕೇಂದ್ರಕಚೇರಿಗೆ ತಿಳಿಸಲೇ ಬಾರದೆಂದು ಕರ್ಟನು ನಿರ್ಧರಿಸಿದ್ದನು. ಆದರೆ, ಈ ಕತ್ತೆ ಫೀಲ್ಡ್‌ವೆಬೆಲನು ತನ್ನ ಹಂಚಿಕೆಯನ್ನೆಲ್ಲಾ ಹಾಳುಮಾಡಿದನು ಅಷ್ಟು ಮಾತ್ರವೇ ಅಲ್ಲ, ಹೇಗಾದರೂ ಮಾಡಿ ತುಸುವಾದರೂ ಕಾಳನ್ನು ದೊರಕಿಸಲಿಕ್ಕೇಬೇಕೆಂದು ಕೇಂದ್ರಕಚೇರಿಯಿಂದ ಮೇಲಿಂದ ಮೇಲೆ ಹುಕುಮು ಕಳಿಸುತ್ತಾ ಇದ್ದರು. ಆದರೆ ಇಲ್ಲಿ ಒಂದು ಹಿಡಿ ಕಾಳು ಕೂಡಾ ವಸೂಲಾಗಿರಲಿಲ್ಲ, ವಿಶ್ವಪ್ರಯತ್ನ ಪಟ್ಟರೂ ವಸೂಲಾಗುವಂತೆಯೂ ಇರಲಿಲ್ಲ. ಎಷ್ಟೇ ಕಾರಣ ಕೊಟ್ಟು ವಿವರಿಸಿದರೂ ಇಲ್ಲಿನ ಪ್ರತ್ಯಕ್ಷ ಪರಿಸ್ಥಿತಿ ಕೇಂದ್ರಕಚೇರಿಯವರಿಗೆ ತಿಳಿಯುತ್ತಿರಲೇ ಇಲ್ಲ. ಎಲ್ಲವಕ್ಕೂ ಅವರು ತನ್ನ ಮೇಲೆ ದೋಷವನ್ನು ಹೊರಿಸುತ್ತಿದ್ದರು. ಕೇಂದ್ರಕಚೇರಿಯ ಕಿವಿಯನ್ನು ಸಂಪಾದಿಸಿದ್ದ ತನ್ನ ವಿರೋಧಪಕ್ಷಕ್ಕೆ ತನ್ನ ಭವಿಷ್ಯದ ಮೇಲೆ ಮಣ್ಣೆರಚಲು ಇದೊಂದು ಒಳ್ಳೇ ಸಂಧಿ ಲಭಿಸಿತ್ತು.

ಹಿರಿಯನನ್ನು ಕರೆಕಳಿಸಲು ಹೋದ ಫೀಲ್ಡ್‌ವೆಬೆಲನು ಹಿಂತಿರುಗಿದನು.

"ಅರಿಕೆ ಮಾಡುತ್ತೇನೆ, ಕೆಪ್ಟನ್‌ಸಾಹೇಬ, ಹಿರಿಯನ ಪತ್ತೆ ಇಲ್ಲ."

"ಅಂದರೆ, ಎಲ್ಲಿಗೆ ಹೋಗಿದ್ದಾನೆ, ಅವನು?"

"ನನಗೆ ಗೊತ್ತಿಲ್ಲ, ಕೆಪ್ಟನ್‌ಸಾಹೇಬ"

ಕರ್ಟನಿಗೆ ಸಿಟ್ಟು ತಡೆಯಲಾಗಲಿಲ್ಲ. "ಹುಚ್ಚು ಹಿಡಿದಿದೆಯೇನು, ನಿನಗೆ? ಎಲ್ಲಿಯಾದರೂ ಹೋಗಿದ್ದಾನೊ ಎಂದು ತಿಳಿದುಕೊಳ್ಳಲಿಲ್ಲ ಯಾಕೆ?"

"ಅರಿಕೆ ಮಾಡುತ್ತೇನೆ ಸಾಹೇಬ, ಎಲ್ಲಾ ಕಡೆಯಲ್ಲಿ ಹುಡುಕಿದೆವು, ಕೇಳಿಯೂ ನೋಡಿದೆವು ನಿನ್ನೆ ಕಾಳಿನ ಲೆಕ್ಕ ಕೂಡಿಸುತ್ತಾ ಇಲ್ಲೇ ಇದ್ದ. ನಡುರಾತ್ರಿ ಕಳೆದ ಮೇಲೆ ಮನೆಗೆ ಹೋಗಲು ಹೊರಟ. ಆದರೆ, ಮನೆಗೆ ಮುಟ್ಟಲಿಲ್ಲ, ಅವನನ್ನು ಆಮೇಲೆ ಯಾರೂ ಕಂಡವರಿಲ್ಲ"

"ಏನು, ಪಲಾಯನ ಮಾಡಿದನೇ, ಹಾಗಾದರೆ?"

"ಬಹುತೇಕ ಹಾಗೆಯೇ, ಕೆಪ್ಟನ್‌ಸಾಹೇಬ."

"ಸರಿ, ಹೋಗಲಿ. ಅವನಿದ್ದು ನಮಗೆ ಚಿಕ್ಕಾಸಿನ ಉಪಯೋಗ ವಾದದ್ದಿಲ್ಲ ಕೇಂದ್ರಕಚೇರಿಗೆ ಕಳಿಸಲು ಅವನು ಪಲಾಯನ ಮಾಡಿದ ವರದಿಯನ್ನು ಬರೆದು ತಯಾರ ಮಾಡು. ಇವನಿಗಿಂತ ಸ್ವಲ್ಪವಾದರೂ ಒಳ್ಳೆಯ ಮೆದುಳಿದ್ದವನನ್ನು ಕಳಿಸಲಿ, ಅವರು. ಅದಿರಲಿ, ನಿನ್ನೆ ರಾತ್ರಿ ಗ್ರಾಮದ ಪಹರೆ ಯಾರು ಮಾಡುತ್ತಿದ್ದರು? ಅವರನ್ನೆಲ್ಲಾ ಸರಿಯಾಗಿ ವಿಚಾರಿಸು."

"ಅವರನ್ನೆಲ್ಲಾ ವಿಚಾರಿಸಿದ್ದೇನೆ, ಕೆಪ್ಟನ್‌ಸಾಹೇಬ, ಅವರ ಪೈಕಿ ಯಾರಿಗೂ ಏನೂ ಗೊತ್ತಿಲ್ಲ"

"ಚಲೊ ಪರಿಸ್ಥಿತಿ ಇದು ಒಬ್ಬನು ರಾತ್ರಿಯಲ್ಲಿ ಊರು ಬಿಟ್ಟು ಹೋದರೂ ನಮ್ಮ ಪಹರೆಯವರಿಗೆ ಏನೂ ಗೊತ್ತಿಲ್ಲ! ಹೀಗಾದರೆ ರಾತ್ರಿ ಯಾರಾದರೂ ಬಂದು ಮಲಗಿದ್ದಲ್ಲಿ ಕುರಿಗಳಂತೆ ನಮ್ಮ ಕುತ್ತಿಗೆ ಕೊಯ್ದರೂ ನಮ್ಮ ಪಹರೆಯವರಿಗೆ ಪತ್ತೆಯೇ ಹತ್ತಲಿಕ್ಕಿಲ್ಲ. ಅವರಿಗೆ ಗೊತ್ತಿಲ್ಲವೆಂದರೆ

ಹೇಗೆ ? ಅವನೇನು ಹಾರಿಹೋಗಲಿಲ್ಲ, ಕಾಲಿನಿಂದ ನಡೆದೇ ಹೋದನಲ್ಲಾ ಅಂದ ಬಳಿಕ ಪಹರೆಯವರಿಗೆ ಹೇಗೆ ತಿಳಿಯದೆ ಹೋಯಿತು ಚೆನ್ನಾಗಿ ನಿದ್ದೆಮಾಡುತ್ತಿದ್ದಿರಬೇಕು."

"ಇಲ್ಲ, ಕೆಪ್ಟನ್‌ಸಾಹೇಬ, ನಿನ್ನೆ ರಾತ್ರಿಯ ಹಿಮಗಾಳಿಯಲ್ಲಿ ನಿದ್ದೆ ಮಾಡುವುದಂತೂ ಸಾಧ್ಯವೇ ಇರಲಿಲ್ಲ ಆದರೆ, ಸ್ಥಳದ ಪರಿಚಯವಿದ್ದವರು ತಿಳಿಯದಂತೆ ನುಸುಳಿ ಹೋಗಲು ಸಾಧ್ಯವಿತ್ತು. ಇನ್ನು ಊರಿನ ಸುತ್ತಲೂ ಪಹರೆಯನ್ನು ಇಡಬೇಕು"

"ಏನು ಮಾಡಬೇಕು ಅಂತಾ ನಿನ್ನ ಕಡೆ ಯಾರು ಕೇಳಿದರು ? ಒಳ್ಳೇ ಬುದ್ಧಿವಂತ! ಊರ ಸುತ್ತಲೂ ಪಹರೆ ಇಡಬೇಕಂತೆ ಊರ ಸುತ್ತಲೂ ಪಹರೆ ಇಡಲಿಕ್ಕೆ ಸಿಪಾಯಿಗಳು ಎಷ್ಟು ಬೇಕು, ವಿಚಾರ ಮಾಡಿದಿಯಾ ? ನಿನ್ನ ಕೆಲಸ ನೀನು ಸರಿಯಾಗಿ ಮಾಡಿದರೆ ಈ ಫಜೀತಿ ಬರುತ್ತಿತ್ತೇ ? ಹಿರಿಯನ ಮೇಲೆ ನಜರ ಇಡಬೇಕಾಗಿತ್ತಲ್ಲಾ ನೀನು ?"

ಫೀಲ್ಡ್‌ವೆಬೆಲನಿಗೆ ಹಿರಿಯನು ಒಬ್ಬನೇ ಹೋಗಲು ಹೆದರಿದ್ದರ ನೆನಪಾಯಿತು. ಐವತ್ತು ಮಾರು ದೂರವಿದ್ದ ಮನೆಗೆ ಹೋಗಲು ಹೆದರಿ ದವನು ಊರೇ ಬಿಟ್ಟು ಹೋಗುವುದು ತೀರಾ ಅಸಂಭವವಾಗಿತ್ತು ಹಿರಿಯನು ಜೊತೆಗೆ ಯಾರನ್ನಾದರೂ ಕೊಡೆಂದು ಎಷ್ಟೇ ಪರಿಯಿಂದ ಬೇಡಿದರೂ ತಾನು ಒಪ್ಪದಿದ್ದ ತನ್ನ ದೊಡ್ಡ ತಪ್ಪು ಕೆಪ್ಟನನಿಗೆ ಗೊತ್ತಾಗದ್ದಕ್ಕೆ ಫೀಲ್ಡ್‌ವೆಬೆಲನು ತನ್ನನ್ನು ಮನಸ್ಸಿನಲ್ಲೇ ಅಭಿನಂದಿಸಿಕೊಂಡನು.

"ನಿಮ್ಮಂತಹ ಕತ್ತೆಗಳ ಹಿಂಡಿನೊಡನೆ ಕೆಲಸ ಮಾಡುವುದೆಂದರೆ ಮನುಷ್ಯನಾದವನಿಗೆ ಸಾಧ್ಯವಾದುದಲ್ಲ!" ಕರ್ಟನು ಉದ್ಗಾರ ತೆಗೆದನು. ಫೀಲ್ಡ್‌ವೆಬೆಲನು ಉತ್ತರ ಕೊಡದೆ ನಿಂತಿದ್ದನು

"ಕಲ್ಲಿನಂತೆ ಯಾಕೆ ನಿಂತಿದ್ದಿ ? ಕೇಂದ್ರಕಚೇರಿಗೆ ವರದಿಯನ್ನು ಬೇಗನೇ ಕಳಿಸು. ಅವನೊಬ್ಬ ಹಿರಿಯ, ನೀನೊಬ್ಬ ಬಣವಿಹಿರಿಯ! ಯೋಗ್ಯ ಸಹಾಯಕರನ್ನು ಕೊಟ್ಟಿದ್ದಾರೆ ನನಗೆ !" ಕರ್ಟನು ಏರಿಸಿದ ಸ್ವರದಲ್ಲಿ ತಿರಸ್ಕಾರದ ಉದ್ಗಾರವನ್ನು ತೆಗೆದನು.

ತುಸು ಹೊತ್ತಿನ ವೇಳೆ ಕರ್ಟ್ ವಾರ್ನರನು ಆಫೀಸಿನಿಂದ ಹೊರ ಬಿದ್ದನು. ಹಿಮವು ಒಂದೇಸವನೆ ಬೀಳುತ್ತಾ ಇತ್ತು. ಇತರ ದಿವಸಗಳಲ್ಲಾದರೆ ಆ ಹವೆಯಲ್ಲಿ ಅವನು ನೆಟ್ಟಗೆ ಮನೆಗೇನೇ ಹೋಗುತ್ತಿದ್ದನು ಆದರೆ ಇಂದು ಅವನಿಗೆ ಮನೆಗೆ ಹೋಗುವುದೇ ಬೇಡವೆನಿಸಿತು. ಈತನಕ ಅವನನ್ನು ಮನೆಯ ಕಡೆಗೆ ಆಕರ್ಷಿಸುತ್ತಿದ್ದ ಪುಸ್ಯಾ ಅಂದಿನ ಪರಿಸ್ಥಿತಿಯಲ್ಲಿ ಅವನಿಗೆ ತಿರಸ್ಕರಣೀಯಳಾಗಿ ತೋರುತ್ತಿದ್ದಳು. ಅಸ್ಪಷ್ಟವಾದ ಮನಃಸ್ಥಿತಿಯಲ್ಲಿ ಅವನಿಗೆ ಆಫೀಸಿನಲ್ಲೂ ಕೂಡಲಾಗಲಿಲ್ಲ. ಹಾಗಾಗಿ ಹಿಮದ ತೀವ್ರತೆಯನ್ನು ಕೂಡಾ ಲೆಕ್ಕಿಸದೆ ತಿರುಗಾಡಲು ಹೊರಬಿದ್ದನು

ಆಗಲೇ ಹಿಮಗಾಳಿಯ ರಭಸವು ಇಳಿಮುಖವಾಗಿತ್ತು. ಹಿಮವು ದಟ್ಟವಾಗಿ ಬೀಳುತ್ತಿದ್ದುದರಿಂದ ಸೂರ್ಯನು ಉದಯಾಚಲವನ್ನೇರಿದ್ದರೂ ಕಣ್ಣಿಗೆ ಕಾಣಿಸುತ್ತಿರಲಿಲ್ಲ ಆದರೂ ಅವನ ಕಿರಣಗಳು ಹಿಮರಾಶಿಯ ಮೇಲೆ ಬಿದ್ದು ಅದರ ಶುಭ್ರ ಶ್ವೇತವರ್ಣವು ಒಂದು ರೀತಿಯ ಉಜ್ವಲತೆಯನ್ನು ತಳೆದಿತ್ತು ನಿಸರ್ಗವು ಬಿಳಿಯ ಮುಸುಕನ್ನು ಹೊದ್ದು ನಿದ್ರೆ ಹೋದಂತೆ ಭಾಸವಾಗುತ್ತಿತ್ತು

ಎಲ್ಲ ಕಡೆಗಳಲ್ಲಿಯೂ ನಿಶ್ಶಬ್ದ. ಯಾವ ಕುಗ್ರಾಮದಲ್ಲೂ ಕೇಳಿಬರುವ ನಾಯಿಗಳ ಬಗುಳುವಿಕೆಯೂ ಕೂಡಾ ಅಲ್ಲಿ ಇದ್ದಿಲ್ಲ ಅದು ಇರುವುದಾದರೂ ಹೇಗೆ ? ಆ ಊರನ್ನು ಆಕ್ರಮಿಸಿದ ದಿನವೇ ಎಲ್ಲ ನಾಯಿಗಳನ್ನು ಜರ್ಮನರು ಗುಂಡಿಕ್ಕಿ ಕೊಂದಿದ್ದರು. ಯಾಕಂದರೆ ತಮ್ಮ ಯಜಮಾನರ ಸ್ವಾತಂತ್ರ್ಯವನ್ನು ಅಪಹರಿಸಲು ಮನೆಗಳನ್ನು ಹೊಕ್ಕಿದ್ದ ಜರ್ಮನ ಸಿಪಾಯಿಗಳನ್ನು ಅವು ಒಳಗೆ ಬಿಡದೆ ಅವರ ಮೇಲೆ ಏರಿಹೋಗಿದ್ದವು.

ಕರ್ಟ್ ವಾರ್ನರನು ಈ ದೃಶ್ಯವನ್ನು ನೋಡುತ್ತಾ ನಿಂತನು. ಹೊರಗೆ ಇಷ್ಟು ನಿಃಸಹಾಯ, ನೀರವತೆಯನ್ನು ತೋರಿಸುತ್ತಿದ್ದ ಈ ಹಳ್ಳಿಗರ ಅಚಲ ಅಸಹಕಾರದಿಂದಾಗಿ ಊರಲ್ಲಿ ಅವನ ಸರ್ವಾಧಿಕಾರವೇ ಸೊನ್ನೆಯಾಗುತ್ತ ನಡೆದಿತ್ತು. ಒಂದರ ಮೇಲೊಂದು ಬರುತ್ತಲಿದ್ದ ಅಪಜಯಗಳ ಒತ್ತಡದಿಂದಾಗಲಿ ಸಂಕಷ್ಟಗಳ ಸುರಿಮಳೆಯಿಂದಾಗಲಿ ತಮ್ಮ ಅಂತಿಮ ವಿಜಯದಲ್ಲಿ ಅವರಿಗಿದ್ದ ಆತ್ಮ ವಿಶ್ವಾಸವು ತಿಲಮಾತ್ರವೂ ಕಡಿಮೆಯಾಗುತ್ತಿದ್ದಿಲ್ಲ.

ಈ ಸಂಘಟಿತ ಮಾನವತೆಯ ದೃಢಸಂಕಲ್ಪದ ಮುಂದೆ ತಮ್ಮ ಅಪಾರ ಯಾಂತ್ರಿಕ ಮಹಾಶಕ್ತಿಯು ಕೂಡ ಹಿಮ್ಮೆಟ್ಟಬೇಕಾಗುವುದೆಂಬ ಶಂಕೆಯು ಕರ್ಟನ ಮನಸ್ಸಿನಲ್ಲಿ ಬರಹತ್ತಿತು.

ಆಕಾಶದಲ್ಲಿ ಅತಿ ಮೇಲೆ ಜೇನುನೊಣದ ಝೇಂಕಾರದಂತಹ ಧ್ವನಿಯು ಕೇಳಿಸಿತು. ಕರ್ಟನು ಕಣ್ಣೆತ್ತಿ ನೋಡಿದನು ವಿಮಾನವೊಂದು ವಾಯುಮಂಡಲದಲ್ಲಿ ಸುತ್ತಾಡುತ್ತಿತ್ತು ಬಹುದೂರದಲ್ಲಿರುವಾಗ ಒಂದು ಚುಕ್ಕೆಯಂತೆ ಕಾಣಿಸುತ್ತಿದ್ದು ತುಸು ಕೆಳಗೆ ಇಳಿದೊಡನೆ ಚುಕ್ಕೆಯು ಹಕ್ಕಿಯಾಯಿತು. ಅಷ್ಟರಲ್ಲಿ ಅದು ಎಲ್ಲರಿಗೂ ವಿಮಾನವೆಂದು ತಿಳಿಯುವಷ್ಟು ಕೆಳಗಿಳಿಯಿತು. ಕರ್ಟನು ವಿಸ್ಮಯಗೊಂಡನು ಅದರ ಯಾಂತ್ರಿಕ ರೆಕ್ಕೆಗಳಲ್ಲಿ ರಶ್ಯನ ಚಿಹ್ನೆಯಾದ ಕೆಂಪು ತಾರೆಯು ಸ್ಪಷ್ಟವಾಗಿ ಕಾಣುತ್ತಿತ್ತು. ರಶ್ಯನ ವಿಮಾನವೆಂದು ತಿಳಿದೊಡನೆ ಅವನ ಕಣ್ಣಿಗೆ ಬಿದ್ದ ದೃಶ್ಯವು ಇನ್ನೂ ಉಳಿದಿದ್ದ ಅವನ ಅಲ್ಪ ಸ್ಥೈರ್ಯವನ್ನೂ ನಷ್ಟಗೊಳಿಸಿತು. ಮರುಭೂಮಿಯಂತೆ ನಿರ್ಜನ ಹಾಗೂ ನಿಶ್ಶಬ್ದವಾಗಿದ್ದ ಊರಿನಲ್ಲಿ ಕ್ಷಣಾರ್ಧದಲ್ಲಿ ಜೀವಕಳೆ ಬಂದಂತೆ ಹುಡುಗ, ಹುಡುಗಿಯರು ತಂಡತಂಡವಾಗಿ ಹೊರಗೆ ಬಂದು ವಿಮಾನದ ಕಡೆಗೆ ಬೆರಳು ತೋರಿಸಿ ಆನಂದ ಉತ್ಸಾಹಗಳಿಂದ ಒದರುತಾ ಕುಣಿಯಹತ್ತಿದರು ಮುದುಕ ಮುದುಕಿಯರು ಕೂಡಾ ಮನೆಗಳಿಂದ ಹೊರಕ್ಕೆ ಬಂದು ತಮ್ಮ ಟೊಪ್ಪಿಗೆಗಳನ್ನು ಮೇಲಕ್ಕೆಸೆದು ಕೈಗಳನ್ನು ಚಾಚಿ ಈ ಹಿಗ್ಗಿನ ಸುಗ್ಗಿಯಲ್ಲಿ ತಾವೂ ಸೇರಿಕೊಂಡರು. ಯಮದೂತ ಜರ್ಮನ ವಿಮಾನಗಳ ಸರ್ಪಚಿಹ್ನೆಯಾಗಿದ್ದ ಸ್ವಸ್ತಿಕೆಯನ್ನು ಕಂಡು ಹೆದರಿ ನಿರಾಶೆಗೊಂಡ ಜನತೆಯು ಸ್ವಾತಂತ್ರ್ಯದ ಸಂಕೇತವಾದ ಕೆಂಪು ತಾರೆಯನ್ನು ಕಂಡು ಸಂತೋಷದ ಕಣ್ಣೀರನ್ನು ಸುರಿಸಿದರು ತಮ್ಮ ವಿಮಾನದ ಘರ ಘರ ಶಬ್ದವು ಬೀರಿದ ಶುಭಸಂದೇಶದಿಂದ ಮಂದಿ ಆನಂದಪರವಶರಾಗಿ ತಮ್ಮನ್ನೇ ಮರೆತರು. ಜರ್ಮನ ಅಧಿಕಾರದ ಕಡೆಗೆ ಜನತೆಯು ತೋರಿಸಿದ ಈ ಬಹಿರಂಗ ಧಿಕ್ಕಾರ ಪ್ರದರ್ಶನವನ್ನು ಪ್ರತ್ಯಕ್ಷವಾಗಿ ಕಂಡ ಕರ್ಟನು ಕೋಪದಿಂದ ಕಿಡಿಕಿಡಿಯಾದನು. "ಚದರಿಸಿರಿ ಅವರನ್ನು!" ಸಿಪಾಯಿಗಳಿಗೆ ಕೂಗಿ ಹೇಳಿದನು. ಆದರೆ, ಅವರಿಗೆ ಅದರ ಅರ್ಥವಾಗಲಿಲ್ಲ. ಕರ್ಟನ

ಸಿಟ್ಟು ಸಹನೆಯನ್ನು ಮೀರಿತು ರಿವಾಲ್ವರನ್ನು ತೆಗೆದು ಮಕ್ಕಳ ಗುಂಪಿಗೆ ಹೊಡೆದನು. ಆದರೆ ಕೋಪಾತಿರೇಕದಿಂದ ನಡುಗುತ್ತಿದ್ದ ಅವನ ಕೈಯ ಗುರಿ ತಪ್ಪಿತು. ಒಂದು ಕಲ್ಲು ಒಗೆದೊಡನೆ ಸುತ್ತಲೂ ಹಾರಿ ಚದರಿ ಹೋಗುವ ಪಾರಿವಾಳಗಳಂತೆ ಕೂಡಿದ ಮಕ್ಕಳೆಲ್ಲಾ ಕ್ಷಣಾರ್ಧದಲ್ಲಿ ಮಾಯವಾದರು. ಮುದುಕ ಮುದುಕಿಯರೂ ಮನೆಗಳಿಗೆ ಮರಳಿದರು. ಕರ್ಟನು ಪುನಃ ನೋಡುವಷ್ಟರಲ್ಲಿ ಊರು ಮೊದಲಿನಂತೆ ನಿರ್ಜನ ನಿಶ್ಶಬ್ದ ಸ್ವರೂಪವನ್ನು ತಾಳಿತು.

ಇಷ್ಟು ಸಮೀಪವಿದ್ದರೂ ತನ್ನ ಗುರಿ ತಪ್ಪಿದ್ದಕ್ಕಾಗಿ ಕರ್ಟನಿಗೆ ಸಿಟ್ಟಿನ ಜೊತೆಯಲ್ಲಿ ಅತಿಶಯ ಅಪಮಾನವೂ ಆಯಿತು.

"ಜನತೆಯ ಈ ವಿರೋಧ ಪ್ರದರ್ಶನವನ್ನು ಮಂಕರಂತೆ ನೋಡುತ್ತಾ ನಿಂತಿರೇನು ಕತ್ತೆಯ ಮರಿಗಳೇ?" ಎಂದು ಸಿಪಾಯಿಗಳನ್ನು ಕುರಿತು ಗರ್ಜಿಸಿದನು.

ಅಷ್ಟರಲ್ಲಿ ವಿಮಾನ ವಿರೋಧಿ ತೋಪನ್ನು ಹಾರಿಸಿದ ಶಬ್ದವಾಯಿತು. ಆದರೆ ಆ ತೋಪನ್ನು ಹಾರಿಸುವ ಮೊದಲೇ ವಿಮಾನವು ಅದರ ಅಳವಿನ ಮೇರೆಯನ್ನು ದಾಟಿಹೋಗಿತ್ತು. ಕರ್ಟನು ಆ ತೋಪಿನ ಪಡೆಯ ಸಾರ್ಜಂಟ ನನ್ನು ಕರೆದು "ಏನು ನಿದ್ದೆ ಮಾಡುತ್ತಿದ್ದಿರೊ ಕುನ್ನಿಮರಿಗಳೇ!" ಎಂದು ಒದರಿದನು.

"ಇಲ್ಲ, ಕೆಪ್ಟನ್‌ಸಾಹೇಬ, ನಾವು ಮೊದಲಿಗೆ ಅದು ನಮ್ಮದೆಂತಲೇ ಗ್ರಹಿಸಿದೆವು." ಎಂದು ಸಾರ್ಜಂಟನು ಹೆದರಿ ಹೆದರಿ ಉತ್ತರ ಕೊಟ್ಟನು.

"ಈ ಊರಿನ ಮುದುಕಿಯರಿಗೆ ಕೂಡಾ ಅದು ಯಾರ ವಿಮಾನ ವೆಂತ ಗೊತ್ತಾಯಿತು. ನಿಮಗೆ ಮಾತ್ರ ಗೊತ್ತಾಗಲಿಲ್ಲ? ಕತ್ತೆಯ ಅಪ್ಪಂದಿರು!"

"ಈ ವರೆಗೆ ಬೋಲ್ಶೆವಿಕ್ ವಿಮಾನ ಬಂದುದಿಲ್ಲ, ಕೆಪ್ಟನ್‌ಸಾಹೇಬ, ಇದು ಮೊದಲ ವಿಮಾನ." ತನ್ನ ಪ್ರಮಾದಕ್ಕೆ ಸಮರ್ಥನೆಯನ್ನು ಹುಡುಕುತ್ತಾ ಸಾರ್ಜಂಟನು ಹೇಳಹತ್ತಿದನು.

"ಬಾಯಿ ಮುಚ್ಚು! ಇದು ಮೊದಲ ವಿಮಾನ? ನಿಮ್ಮ ತೋಪಖಾನೆಯ ಮೇಲೆಯೇ ಬಾಂಬು ಎಸೆಯಬೇಕಿತ್ತು ಆಗ ಗೊತ್ತಾಗುತ್ತಿತ್ತು, ಮೊದಲ ವಿಮಾನವೊ ಕಡೆಯ ವಿಮಾನವೊ ಅಂತ! ನಿಮ್ಮನ್ನೆಲ್ಲಾ ಕಟ್ಟಬೇಕು, ತೋಪಿನ ಬಾಯಿಗೆ!"

ಕರ್ಟನ ಸಿಟ್ಟು ತಣಿಯಲಿಲ್ಲ ಫೀಲ್ಡ್‌ವೆಬೆಲನನ್ನು ಕರೆದು "ಏನು, ಹಿರಿಯನ ಪತ್ತೆಯಾಯಿತೇ?" ಎಂದು ಪುನಃ ಕೇಳಿದನು

"ಇಲ್ಲ, ಕೆಪ್ಟನ್‌ಸಾಹೇಬ."

"ಆ ಜಾಮೀನಿಗಾಗಿ ಬಂಧಿತರಾದವರು? ಅವರು ಇದ್ದಾರೋ ಅಥವಾ ಅವರೂ ಕಾಣೆಯಾದರೊ?"

"ಇದ್ದಾರೆ, ಕೆಪ್ಟನ್‌ಸಾಹೇಬ, ಕೈದಿನಲ್ಲಿ ಭದ್ರವಾಗಿದ್ದಾರೆ."

"ಏನಾದರೂ ತಿನ್ನಲು ಕೊಟ್ಟಿರೊ ಅವರಿಗೆ?"

"ಇಲ್ಲ, ಕೆಪ್ಟನ್‌ಸಾಹೇಬ ಏನೂ ಇಲ್ಲ."

"ಕುಡಿಯಲಿಕ್ಕೆ?"

"ಒಂದು ಹನಿ ನೀರು ಕೂಡಾ ಕೊಡಲಿಲ್ಲ, ಕೆಪ್ಟನ್‌ಸಾಹೇಬ."

"ಸರಿ, ಏನೂ ಕೊಡಬೇಡಿರಿ ಏನೂ ಸಿಗದಂತೆ ಮಾಡಿ, ಉಪವಾಸ ಹಾಕಿದ್ದಾರೆ ನಮ್ಮನ್ನು ನಾವೂ ಅವರಿಗೆ ಹಾಗೆಯೇ ಮಾಡೋಣ. ಹಸಿವೆ ಬಾಯಾರಿಕೆಗಳನ್ನು ಸಹಿಸಿ ಸಾಯಲಿ, ಅವರು. ಯಾರಿಗೆ ಏನೂ ಲುಕ್ಸಾನ ಇಲ್ಲ, ಅವರು ಸತ್ತರೆ" ಇಷ್ಟು ಹೇಳಿ ಕರ್ಟನು ತನ್ನ ಮನಸ್ಸಿನ ಅಸ್ವಸ್ಥತೆಯನ್ನು ತಡೆಯಲಾರದೆ ಮರಳಿ ಬಂದವನು ಪುನಃ ಕೋಣೆಯನ್ನು ಬಿಟ್ಟು ಹೊರಟನು: ಬಾಗಿಲವರೆಗೆ ಹೋದ ಮೇಲೆ ಫೀಲ್ಡ್‌ವೆಬೆಲನನ್ನು ಕರೆದನು. "ನೋಡು, ಇನ್ನು ಮುಂದೆ ಹೊರಗಿನಿಂದ ಆಹಾರ ಸಾಮಗ್ರಿಗಳನ್ನು ಕಳಿಸಲಾಗುವುದಿಲ್ಲವೆಂದು ಕೇಂದ್ರಕಚೇರಿಯಿಂದ ತಿಳಿಸಿದ್ದಾರೆ ಊರಿನಲ್ಲೇ ಸಿಕ್ಕಿದ್ದನ್ನು ಎತ್ತಿಹಾಕಿ ನಮ್ಮ ಹೊಟ್ಟೆ ನಾವೇ ತುಂಬಿಕೊಳ್ಳಬೇಕು. ಆದ್ದರಿಂದ, ಸಿಪಾಯಿಗಳನ್ನು ಎಲ್ಲಾ ಮನೆಗಳಿಗೂ ಕಳಿಸು ಹೇಗಾದರೂ ಮಾಡಿ ಏನನ್ನಾದರೂ ಪ್ರತಿಯೊಬ್ಬನು ತರಲಿಕ್ಕೇಬೇಕೆಂದು ಹೇಳು."

"ನೆರೆ ಗ್ರಾಮಗಳಿಂದ ತರಲು ಅಪ್ಪಣೆ ಕೊಡುವಿರಾ?"

"ಕತ್ತೆ, ಅಷ್ಟೂ ತಿಳಿಯುವುದಿಲ್ಲವೇ ನಿನಗೆ ? ನೆರೆ ಗ್ರಾಮಗಳೆಲ್ಲಾ ಬೇರೆಯವರ ಪಾಲಿಗೆ ಹೋಗಿವೆ"

"ಆದರೆ, ಕೆಪ್ಟನ್‌ಸಾಹೇಬ, ಈ ಊರಿನಲ್ಲಿ ಏನೂ ಉಳಿದಿಲ್ಲ"

"ಏನೂ ಇಲ್ಲವೆಂತ ಹೇಳುವುದು ಅತೀ ಸುಲಭ. ಸರಿಯಾಗಿ ಪ್ರಯತ್ನಪಟ್ಟರೆ ಏನನ್ನಾದರೂ ದೊರಕಿಸಬಹುದು. ಸಿಪಾಯಿಗಳಿಗೆ ಸ್ಪಷ್ಟವಾಗಿ ಹೇಳು ಏನೂ ತಾರದಿದ್ದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ" ಸಿಟ್ಟಿನ ಭರದಲ್ಲಿ ಬಾಗಿಲನ್ನು ಜೋರಿನಿಂದ ಇಕ್ಕಿ ಕರ್ಟಿನು ಆಫೀಸನ್ನು ಬಿಟ್ಟನು

"ಏನು ರೌದ್ರಾವತಾರ ಈ ಹೊತ್ತು ಕೆಪ್ಟನ್‌ಸಾಹೇಬರದು !" ಜವಾನರು ತಮ್ಮೊಳಗೇನೆ ಮಾತಾಡಿಕೊಳ್ಳುತ್ತಿದ್ದರು.

"ರೌದ್ರಾವತಾರವಾಗದೆ ಏನು ? ಒಂದು ಹಿಡಿ ಕಾಳು ಕೂಡಾ ಈ ವರೆಗೆ ವಸೂಲ ಆಗಲಿಲ್ಲ ಕಾಳು ಎಲ್ಲಿ ಅಡಗಿಸಿಟ್ಟಿದ್ದಾರೆಂಬುದರ ಪತ್ತೆ ಕೂಡಾ ಹತ್ತಲಿಲ್ಲ ಅದರ ಮೇಲೆ ಆ ಹಿರಿಯನೂ ಓಡಿಬಿಟ್ಟಿದ್ದಾನೆ."

"ಎಲ್ಲಿ ಓಡಿ ಹೋಗುವುದೊ ಅವನು ? ಓಡಿ ಹೋದದ್ದೇನೂ ಅಲ್ಲ, ಇಲ್ಲಿಯ ರೈತರು ಅವನನ್ನು ಮುಗಿಸಿಬಿಟ್ಟಿರಬೇಕು."

"ಅದು ಹೇಗೆ ಸಾಧ್ಯ? ಮಧ್ಯ ರಾತ್ರಿಯವರೆಗೆ ಇಲ್ಲೇ ಇದ್ದನಂತಲ್ಲಾ ಅವನು ? ಆ ಬಳಿಕ ಮನೆಗೆ ಹೋದ."

"ಮನೆಗೆ ಹೋದ. ಆದರೆ ಅಲ್ಲಿಗೆ ಮುಟ್ಟಲಿಲ್ಲ ದಾರಿಯಲ್ಲೇ ಸಮಾಪ್ತಿಯಾಗಿರಬೇಕು, ಅವನ ಅವತಾರ."

"ಆದರೆ ರಾತ್ರಿ ಹೊರಗೆ ಬಂದವರಿಗೆಲ್ಲಾ ಗುಂಡು ಹೊಡೆಯಲಾಗುವುದೆಂದು ಕಟ್ಟಾಜ್ಞೆ ಇರುವಾಗ ಹೊರಗೆ ಬರುವವರ್ಯಾರೊ ?"

"ನಮ್ಮ ಆಜ್ಞೆ ಎಲ್ಲಾ ಸರಿ ಆದರೆ ಮೊನ್ನೆ ನಮ್ಮ ಕಣ್ಣೆದುರಿನಲ್ಲೇ ಎಂಬಂತೆ ಆ ಹುಡುಗನ ಶವ ಇದ್ದಲ್ಲಿಂದ ಮಾಯವಾಗಲಿಲ್ಲವೇ ? ಸತ್ತ ಮೇಲೆ ಅದಕ್ಕೇನು ಕಾಲು ಬಂತೇ ? ನಮ್ಮ ಕಾಯಿದೆ ಕಾಗದದಲ್ಲೇ ಈ ಊರಿನ ರೈತರ ಸಾಹಸದ ಮುಂದೆ ನಮ್ಮ ಅಧಿಕಾರ ನಡೆಯುವಂತಿಲ್ಲ."

"ಏನು ಹರಟುತ್ತಾ ಕೂತಿದ್ದೀರೊ? ಹೋಗಿರಿ, ಪ್ರತಿಯೊಂದು ಮನೆಗೆ ಹೋಗಿ ಸಿಕ್ಕಿದ ಆಹಾರಸಾಮಗ್ರಿ ತಗೊಂಡು ಬನ್ನಿರಿ ಕೆಪ್ಟನ್‌ಸಾಹೇಬರ ಹುಕುಮು ಆಗಿದೆ ಏನಾದರೂ ತಾರದೆ ಇದ್ದರೆ ಊಟ ಸಿಗಲಿಕ್ಕಿಲ್ಲ"

ಫೀಲ್ಡ್‌ವೆಬಿಲನ ಈ ಮಾತು ಕೇಳಿ ಸಿಪಾಯಿಗಳು ಎದ್ದರು. ನಾಲ್ಕೈದು ನಿಮಿಷಗಳಲ್ಲಿ ಸಿಪಾಯಿಗಳ ಗುಂಪು ಊರಿನ ಎಲ್ಲಾ ಮನೆಗಳನ್ನು ಹೊಕ್ಕು ಹೊಕ್ಕು ನೋಡತೊಡಗಿತು. ಆದರೆ, ಅವರು ಒಂದೆರಡು ಮನೆಗಳನ್ನು ಶೋಧಿಸಿ ಮುಗಿಸುವಷ್ಟರಲ್ಲಿ ಅವರು ಬರುವ ಸುದ್ದಿ ಇಡೀ ಊರಿಗೆ ಗೊತ್ತಾಯಿತು. ಚಿಕ್ಕ ಮಕ್ಕಳು ಮನೆಗಳಿಂದ ಹೊರಗೆ ನುಸುಳಿ ಎಲ್ಲ ಕಡೆಗೆ ಈ ಅಶುಭವಾರ್ತೆಯನ್ನು ತಿಳಿಸಿದುವು. ಎಲ್ಲರೂ ತಮ್ಮಲ್ಲಿದ್ದ ಹಿಟ್ಟು, ರೊಟ್ಟಿಯನ್ನೂ ಕೋಳಿಮರಿಗಳನ್ನೂ ಅಡಗಿಸಿಟ್ಟರು ಮನೆಗಳನ್ನೆಲ್ಲಾ ತಿರುವಿಹಾಕಿದರೂ ಸಿಪಾಯಿಗಳಿಗೆ ಒಂದು ಕೋಳಿಯ ಹೊರತು ಬೇರೆ ಏನೂ ಸಿಗಲಿಲ್ಲ. ಅದೂ ಸಿಕ್ಕಿದ್ದು ತೀರ ಆಕಸ್ಮಾತ್ತಾಗಿ ಬನ್ಯಾಚನೆಂಬ ರೈತನಲ್ಲಿ ದೊಡ್ಡ ಕೋಳಿಯೊಂದಿತ್ತು ಸಿಪಾಯಿಗಳು ಫಕ್ಕನೆ ಆ ಮನೆಯನ್ನು ಮುತ್ತಿದ್ದರಿಂದ ಬೇರೆಲ್ಲಿಯೂ ಅಡಗಿಸಲಾರದೆ ಅವನ ಹೆಂಡತಿಯು ಅದನ್ನು ಒಲೆಯಲ್ಲಿ ಅಡಗಿಸಿಟ್ಟಳು. ಆದರೆ ಅದು ಅಲ್ಲಿಂದ "ಕೊ ಕೊ" ಮಾಡಹತ್ತಿತು. ಒಳಗೆ ಹೊಕ್ಕಿದ್ದ ಸಿಪಾಯಿಗಳು ಅದನ್ನು ಹುಡುಕಿ ಹೊರಗೆ ತೆಗೆದರು. ಅದು ಅವರ ಕೈಯಿಂದ ತಪ್ಪಿಸಿಕೊಂಡು ಮನೆಯೆಲ್ಲೆಲ್ಲಾ ಹಾರಾಡತೊಡಗಿತು ಹಿಂಬಾಲಿಸಿದ ಸಿಪಾಯಿಗಳು ಅದನ್ನು ಹಿಡಿಯಲಾರದೆ ಬೇಸತ್ತು ಕೊನೆಗೆ ಪಿಸ್ತೂಲಿನಿಂದ ಹೊಡೆದರು ಗುಂಡಿನೇಟಿಗೆ ಅದು ಸತ್ತು ಬಿತ್ತು ವಿಜಯಿಗಳಾದ ವೀರರು ಗೆದ್ದ ವಸ್ತುವಿನೊಡನೆ, ಆ ಮನೆಯಿಂದ ಹೊರಬಿದ್ದರು.

ಈ ಒಂದು ಕೋಳಿಯಿಂದ ಕೆಪ್ಟನ್‌ಸಾಹೇಬನ ಸಿಟ್ಟನ್ನು ತಣಿಸುವುದು ಸಾಧ್ಯವಿರಲಿಲ್ಲ. ಊರಿನ ಎಲ್ಲಾ ಮನೆಗಳನ್ನು ಸುತ್ತಾಡಿ ಸುತ್ತಾಡಿ ಸೋತ ಸಿಪಾಯಿಗಳು ಕಡೆಗೆ ಉಳಿದ ಅಲ್ಪ ಸ್ವಲ್ಪ ಆಕಳುಗಳಲ್ಲಿ ಒಂದನ್ನು ಹಿಡಿದು ತಂದು ಮಾಂಸಕ್ಕಾಗಿ ಸುಲಿಯುವುದೆಂದು ನಿರ್ಧರಿಸಿದರು ಲೋಕುಟಿಯಾಳ ಬಳಿ ಒಂದು ಸುಂದರ ಕಪಿಲೆ ದನವಿತ್ತು. ಸಿಪಾಯಿಗಳು ಅವರ ಹಟ್ಟಿಗೆ ಹೋಗಿ ಅದರ ಹಗ್ಗ ಬಿಚ್ಚಿದರು. ಬಹಳ ಅಕ್ಕರೆ

ಯಿಂದ ಸಾಕಿದ ಆಕಳು ಅದು. ಲೋಕುಟಿಕಾಳ ಜೀವವೇ ಹಾರಿಹೋಯಿತು. ಕಪಿಲೆಯು ದಯೆಯನ್ನು ಯಾಚಿಸುವಂತೆ ತನ್ನ ದೀನ, ದೊಡ್ಡ ಕಣ್ಣು ಗಳಿಂದ ಬಂದವರನ್ನು ನೋಡಿತು ಆದರೆ, ದಯೆಯೆಂಬ ಭಾವನೆಯನ್ನು ಜರ್ಮನ ಸಿಪಾಯಿಗಳು ಹುಟ್ಟಿದಂದಿನಿಂದ ಅರಿತವರಲ್ಲ. ಎಳೇ ಮಕ್ಕಳ ಚೀರಾಟದಿಂದ ಅವರ ಹೃದಯದಲ್ಲಿ ಹುಟ್ಟದ ಕನಿಕರ ಈ ಆಕಳಿನ ಮೂಕ ಯಾಚನೆಯಿಂದೆಲ್ಲಿ ಬರಬೇಕು ? ಆಕಳನ್ನು ಬಲವಾಗಿ ಎಳೆದರು. ಕಪಿಲೆಯು ಕದಲದೆ ಜೀವದಾನವನ್ನು ಬೇಡುವಂತೆ ಮೊಣಕಾಲ ಮೇಲೂರಿತು. ಲೋಕು ಟಿಕಾ ಹೋಗಿ ಅದನ್ನು ಆಲಿಂಗಿಸಿದ್ದಳು "ಗಬ್ಬ ಆಕಳು ಅದು. ಅದನ್ನು ಒಯ್ಯಬೇಡಿರಿ,'' ಎಂದು ಕೂಗಾಡಿದಳು. ಆದರೆ ಅದು ಕಾಡಿನ ಕೂಗಾ ಯಿತು ಸಿಪಾಯಿಗಳು ಅವಳನ್ನು ಕುತ್ತಿಗೆಗೆ ಕೈಹಾಕಿ ದೂಡಿದರು. ಲೋಕುಟಿಕಾಳ ಕೂಗಾಟದ ಜೊತೆಗೆ ಕಪಿಲೆಯೂ "ಅಂಬಾ!" ಎಂದು ತನ್ನ ಮೂಕ ಧ್ವನಿಯಲ್ಲಿ ಕೂಗಾಡಹತ್ತಿತು. ಲೋಕೊಟಿಕಾಳ ಚಿಕ್ಕ ಮಗನು ಅಳಬೇಡವ್ಮಾ, ಎಂತ ಅವಳನ್ನು ಸಂತಯಿಸತೊಡಗಿದನು. "ಏನು ಮಾಡಲಿ, ಮಗು, ಇದ್ದ ಒಂದು ದನವನ್ನೂ ಇವರು ಕೊಂಡೊ ಯ್ದರೆ ಕೂಸಿಗೆ ಹಾಲನ್ನು ಎಲ್ಲಿಂದ ಕೊಡಲಿ? ಎಳೇ ಕೂಸು ಹಾಲಿಲ್ಲದೆ ಸಾಯುವುದಲ್ಲಾ !" ಎಂದು ಅವಳು ಜೋರಾಗಿ ಚೀರಾಡಹತ್ತಿದಳು

ಹೊರಗೆ ಬಾರದ್ದಕ್ಕೆ ಒಬ್ಬ ಸಿಪಾಯಿಯು ಕಪಿಲೆಯ ಬಾಲವನ್ನು ಹಿಡಿದು ಎಳೆದನು ನೋವನ್ನು ಸಹಿಸದೆ ಅದು ಹೇಗೂ ಹೊರಗೆ ಕಾಲಿಟ್ಟಿತು. ಸಿಪಾಯಿಗಳು ಅದರ ಬೆನ್ನಿಗೆ ಹೊಡೆದು ಅದನ್ನು ಅಟ್ಟಿಕೊಂಡು ಹೋಗಲು ತೊಡಗಿದರು. ಒದ್ದೆಯಾದ ಕಣ್ಣುಗಳಿಂದ ಅದು ಹಿಂದಕ್ಕೊಮ್ಮೆ ನೋಡಿ ತನ್ನ "ಅಂಬಾ" ಧ್ವನಿಯಿಂದ ಲೋಕುಟಿಕಾಳನ್ನು ಬೀಳ್ಕೊಟ್ಟಿತು. "ನನ್ನ ಮುದ್ದು ಕಪಿಲೆ! ಎಷ್ಟು ಚುರುಕು ಬುದ್ಧಿ! ಅದಕ್ಕೆ ಎಲ್ಲವೂ ತಿಳಿಯುತ್ತದೆ." ಎಂತ ಲೋಕುಟಿಕಾ ಕಣ್ಣೀರಿಟ್ಟಳು ಹಾಗೂ ಬಾಹ್ಯ ಪರಿಸ್ಥಿತಿಯೆಲ್ಲವನ್ನೂ ಮರೆತು "ಕಪಿಲಾ, ಕಪಿಲಾ!" ಎಂದು ಚೀರುತ್ತಾ ಆಕಳನ್ನು ಹಿಂಬಾಲಿಸಿ ದಳು. ಆಕಳಿನ ಹಿಂದಿದ್ದ ಜರ್ಮನ ಸಿಪಾಯಿಯು ಓಡಿ ಬರುತ್ತಿದ್ದ ಅವಳಿಗೆ ಕಾಲಿನ ಬೂಟನಿಂದ ಒದ್ದನು. "ಕಪಿಲಾ, ಕಪಿಲಾ!" ಎಂದು ಉಚ್ಚರಿಸುತ್ತಾ ಅವಳು ಸ್ಮೃತಿ ತಪ್ಪಿ ಬಿದ್ದಳು

ಆ ದಿನ ಕೆಪ್ಟನ್ ಕರ್ಟ ವಾರ್ನರನು ಗಬ್ಬು ದನದ ಮಾಂಸದ ಭಕ್ಷ್ಯಗಳನ್ನು ತಿಂದು ತೇಗಿದನು. ಅದು ತನ್ನ ಜೀವನದಲ್ಲಿ ಕೊನೆಯ ಔತಣವೆಂಬುದನ್ನು ಅವನು ಆಗ ಅರಿತಿರಲಿಲ್ಲ.

## ೧೦

ಅನುಮಾನದ ಹೆಜ್ಜೆಗಳನ್ನಿಡುತ್ತಾ ಪುಸ್ಯಾ ಮನೆಯಿಂದ ಹೊರಗೆ ಬಂದು ತನ್ನ ಅಕ್ಕನಿದ್ದ ಮನೆಯ ಕಡೆಗೆ ತಿರುಗಿದಳು. ಅವಳು ಮಾಡಲು ಹೊರಟಿದ್ದ ಕೆಲಸದಿಂದ ಎಳ್ಳಷ್ಟೂ ಉಪಯೋಗವಾಗುವ ಹಾಗಿರಲಿಲ್ಲ. ಆದರೆ, ಇದನ್ನು ತಿಳಿದೂ ಕೂಡ ಅಕ್ಕನೊಡನೆ ಮಾತಾಡಲಿಕ್ಕೇಬೇಕೆಂದು ಕರ್ಟನು ಹಟ ಹಿಡಿದಿದ್ದನು. " ನೀನು ನಿನ್ನ ಅಕ್ಕನೊಡನೆ ಮಾತಾಡಲು ಇಷ್ಟು ಹಿಂಜರಿಯುವುದಾದರೆ ನೋಡು, ನಾನು ನಿನಗಾಗಿ ಏನೂ ಮಾಡಲಾರೆ." ಕರ್ಟನ ಈ ಮಾತು ಅವಳನ್ನು ದಿಗಿಲುಗೊಳಿಸಿತ್ತು. ಅವನು ಎಲ್ಲಿಯಾದರೂ ಅವಳ ಕೈ ಬಿಟ್ಟರೆ, ಈ ಊರಿನ ವಿರೋಧಿ ವಾತಾವರಣದಲ್ಲಿ ಅವಳು ತಲೆಯ ಮೇಲೆ ಮಾಡಿನ ತುಂಡು ಕೂಡಾ ಇಲ್ಲದೆ ಚಳಿಯಲ್ಲಿ ಹಿಮಕಟ್ಟಿ ಸಾಯಬೇಕಿತ್ತು ಆದ್ದರಿಂದಲೇ ಎಷ್ಟೇ ಅಪ್ರಿಯವಾಗಿದ್ದರೂ ಕರ್ಟನ ಅಪ್ಪಣೆಯನ್ನು ನೆರವೇರಿಸಲು ಅವಳು ಹೊರಟಿದ್ದಳು

ತನ್ನ ಅಕ್ಕ ಒಲ್ಗಾಳನ್ನು ಈ ಊರಿಗೆ ಬಂದನಂತರ ಒಮ್ಮೆ ಮಾತ್ರ ಕಂಡಿದ್ದಳು. ಅಂದು ಪುಸ್ಯಾಳನ್ನು ಕಂಡೊಡನೆ ಒಲ್ಗಾಳು ತಿರಸ್ಕಾರದ ಅತಿರೇಕದಿಂದ ಅವಳ ಮೋರೆಯ ಮೇಲೆ ಉಗುಳಿ ಜರ್ಮನ ಆಫೀಸರನ ಪ್ರಣಯಿನಿಯಾದುದಕ್ಕೆ ತುಚ್ಛ ಬೈಗಳ ಸುರಿಮಳೆಯನ್ನೇ ಸುರಿಸಿದ್ದಳು. ಆ ಆವೇಶಪೂರ್ಣ ಉದ್ಗಾರಗಳ ಮುಂದೆ ಪುಸ್ಯಾಳು ಆಡಬೇಕೆಂದಿದ್ದ ಮಾತುಗಳು ಬಾಯಲ್ಲೇ ನಿಂತು ಹೊರಗೇನೆ ಬಾರದ್ದರಿಂದ ಅವಳು ಉಸಿರೆತ್ತದೆ ಅಕ್ಕಳೆಡೆಯಿಂದ ಓಡಿ ಬಂದಿದ್ದಳು. ಆ ದಿನದ ತನ್ನ ಅಕ್ಕನ ರುದ್ರ ಮೂರ್ತಿಯು ಆಗಾಗ ಅವಳ ಕಣ್ಣೆದುರಿಗೆ ಬಂದು ಮೈಯಲ್ಲಿ ನಡುಕವನ್ನು ಹುಟ್ಟಿಸುತ್ತಿತ್ತು. ಅದರ ನೆನಪು ಈಗಲೂ ಕಣ್ಣಲ್ಲಿ ನೀರನ್ನು ತರುತ್ತಿತ್ತು.

ಈ ಕಟು ಅನುಭವದ ಪುನರಾವೃತ್ತಿಗೆ ತನ್ನನ್ನು ಅಟ್ಟಿದ್ದಕ್ಕಾಗಿ ಪುಸ್ಕ್ಯಾಳಿಗೆ ಕರ್ಟನ ಮೇಲೆ ಅತಿಯಾಗಿ ಸಿಟ್ಟು ಬಂದಿತು ಸರ್ಝ್ಯೂಝಾನು ಎಂದೂ ಈ ರೀತಿ ಹಟತೊಡುತ್ತಿರಲಿಲ್ಲ. ಅವನಿಗೂ ಕರ್ಟನಿಗೂ ಎಷ್ಟು ಅಂತರ. ತಮ್ಮ ಇಡಿಯ ದಾಂಪತ್ಯಜೀವನದಲ್ಲಿ ಒಮ್ಮೆಯಾದರೂ ಸರ್ಝ್ಯೂಝಾನು ತನ್ನ ಇಚ್ಛೆಗೆ ವಿರೋಧವಾಗಿ ನಡೆಯುವಂತೆ ತನ್ನನ್ನು ಒತ್ತಾಯಪಡಿಸಿದ್ದಿಲ್ಲ. ಆದರೆ ಈಗ ಸರ್ಝ್ಯೂಝಾನ ವಿಷಯದಲ್ಲಿ ಚಿಂತಿಸಿ ಫಲವೇನು? ಈಗ ತನ್ನ ಗಂಡ ಕರ್ಟ. ತನ್ನ ಭವಿತವ್ಯ ಇನ್ನು ಅವನೊಡನೆಯೇ. ಅವನನ್ನು ರೇಗಿಸಿದರೆ ತನಗೆ ಉಳಿಗಾಲವಿಲ್ಲ.

ಗ್ಯುಂಲ್ಲಾಗಳ ಗುಟ್ಟನ್ನು ಹೇಳದ್ದಕ್ಕೆ ಒಲೆನಾಳನ್ನು ಕೊಂದಂತೆ ಈ ಒಲ್ಗಾಗಳನ್ನೂ ಕೊಂದುಬಿಡಬಾರದಿತ್ತೇ? ತನಗೆ ಈ ತೊಂದರೆಯಾದರೂ ತಪ್ಪುತ್ತಿತ್ತು.

ಪುಸ್ಕ್ಯಾಳು ತನ್ನ ಅಕ್ಕಳಿದ್ದ ಮನೆಯನ್ನು ಸಮೀಪಿಸಿದಂತೆ ಅವಳ ಹೃದಯವು ಬಡಿದುಕೊಳ್ಳಹತ್ತಿತು ಒಳಗಿಂದ ಯಾರೊ ಬರುತ್ತಿದ್ದರು. ಸೂಕ್ಷ್ಮವಾಗಿ ನೋಡಿದಳು. ಬರುತ್ತಿದ್ದವಳು ಒಲ್ಗಾಳಲ್ಲ, ಅವಳಿದ್ದ ಮನೆಯ ಮಾಲಕಳು. ಅವಳು ಹೊರಗೆ ಬಂದು ಬಿಸಿಲನ್ನು ತಪ್ಪಿಸಲು ಕಣ್ಣಿನ ಮೇಲೆ ಕೈ ಇಟ್ಟು ದೂರ ದಿಗಂತದೆಡೆಗೆ ಕಣ್ಣುಚಾಚಿ ನೋಡಿದಳು ಹಾಗೂ ಒಂದು ಅರೆಕ್ಷಣದ ಮೇಲೆ ಗಟ್ಟಿಯಾಗಿ ಕೂಗಿ ಏನನ್ನೊ ಹೇಳಿದಳು. ಅದನ್ನು ಕೇಳಿದ ಜನರು ರಸ್ತೆಯಲ್ಲಿ ಗುಂಪುಕಟ್ಟಿ ಅವಳು ಮಾಡಿದಂತೆಯೇ ಕೈಯನ್ನು ಕಣ್ಣಿನ ಮೇಲಿಟ್ಟು ಬಿಸಿಲ ಬೇಗೆಯನ್ನು ತಪ್ಪಿಸಿ ಅವಳು ನೋಡುತ್ತಿದ್ದ ಕಡೆಗೇನೆ ದಿಟ್ಟಿಸಿ ನೋಡಹತ್ತಿದರು ದೂರದಿಂದ ದಂಡಿನ ಕ್ರಮಬದ್ಧ ನಡಿಗೆಯ ಸಪ್ಪಳವು ಕೇಳಬರುತ್ತಿತ್ತು.

"ಜರ್ಮನರೇನು ಅದು?" ಒಬ್ಬಳು ಕೇಳಿದಳು.

"ಇದ್ದ ಜರ್ಮನರು ಸಾಕಾಗಲಿಲ್ಲವೇ ನಿನಗೆ?" ಇನ್ನೊಬ್ಬಳು ಪ್ರಶ್ನಿಸಿದಳು.

"ಅವರು ಜರ್ಮನರಲ್ಲ." ಬನ್ಯುಚಿಕಾಳು ಉದ್ಗರಿಸಿದಳು. "ಸರಿಯಾಗಿ ನೋಡಿರಿ, ನಮ್ಮಮ್ಮಾ, ಅವರು ಜರ್ಮನರಲ್ಲಾ."

" ಹುಚ್ಚು ನಿನಗೆ. ಜರ್ಮನರಲ್ಲದೆ ಮತ್ತೆ ಯಾರು ?"

" ನಮ್ಮವರಪ್ಪಾ ಅವರು. ನಿಜವಾಗಿಯೂ ನಮ್ಮವರು "

" ಕಣ್ಣು ಬಿಟ್ಟು ನೋಡು. ನಮ್ಮವರಂತೆ! ಹಗಲು ಹೊತ್ತು ಬಹಿರಂಗವಾಗಿ ಬರುತ್ತಾರೆಯೇ ನಮ್ಮವರು ?"

" ನಮ್ಮವರು ಹೌದಮ್ಮಾ, ನೋಡು ಅವರ ಟೊಪ್ಪಿಗೆಗಳಲ್ಲಿ ಕೆಂಪು ತಾರೆ ಕಾಣಿಸುತ್ತದೆ " ಬನ್ಯುಟಿಕಾಳ ಚಿಕ್ಕ ಮಗ ಗ್ರೀಶಾ ತನ್ನ ಪುಟ್ಟ ಬೆರಳು ತೋರಿಸುತ್ತಾ ಎಳೇ ಧ್ವನಿಯಲ್ಲಿ ಅಂದನು

" ಮಕ್ಕಳಿಗೆ ಮನಸ್ಸಿನಲ್ಲಿದ್ದದ್ದೇ ಹೊರಗೆ ಕಾಣಿಸುತ್ತದೆ ನಮ್ಮವರೆಂಬುದು ಹೇಗೆ ? ನೋಡು, ಬರುವವರು ನಮ್ಮವರಾದರೆ ಇಲ್ಲಿನ ಪಹರೆಯ ಸಿಪಾಯಿಗಳು ಕೋವಿಯನ್ನು ಮೇಲಕ್ಕೆ ಕೂಡಾ ಎತ್ತದೆ ತಟಸ್ಥರಾಗಿ ನಿಲ್ಲುತ್ತಿದ್ದರೇ ?'' ಅನುಭವದ ಧ್ವನಿಯಲ್ಲಿ ಒಬ್ಬ ನಡುಹರೆಯದ ಹೆಂಗಸು ಹೇಳಿದಳು.

" ಗ್ರೀಶಾನು ಹೇಳಿದ್ದು ಸರಿ. ಟೊಪ್ಪಿಗೆಗಳು ನಮ್ಮವರವೇ. ಆದರೆ ಆನಂದ ಪಡತಕ್ಕದ್ದೇನೂ ಇಲ್ಲ " ಅಲೆಕ್ಸಾಂಡರನಂದನು

" ಅಂದರೇನು ?'' ಎಲ್ಲರೂ ಕೇಳಿದರು.

" ನೋಡಿರಿ, ಸರಿಯಾಗಿ ಅಂದರೆ ಎಲ್ಲವೂ ಸ್ಪಷ್ಟವಾಗುವುದು.''

ಮಾತು ನಿಂತಿತು ಎಲ್ಲರೂ ಗಾಬರಿಗೊಂಡ ನೋಡಹತ್ತಿದರು. ರಶ್ಯನ ಯುದ್ಧ-ಕೈದಿಗಳನ್ನು ನಡೆಸಿಕೊಂಡು ಜರ್ಮನ ಸೈನ್ಯದ ದಳ ಒಂದು ಬರುತ್ತಿತ್ತು.

ಅವರು ಸಮೀಪಿಸಿದಂತೆ ಹೆಚ್ಚೆಚ್ಚು ಜನರು ದಾರಿಯಲ್ಲಿ ಕೂಡಿದರು. ಎಲ್ಲರ ಮೋರೆಗಳ ಮೇಲೆಯೂ ದುಃಖ, ಸಂತಾಪಗಳ ಛಾಯೆಯು ಸ್ಪಷ್ಟವಾಗಿ ಮೂಡಿತ್ತು ಕೈದಿಗಳು ಬಳಲಿ ಬೆಂಡಾಗಿ ಸರಿಯಾಗಿ ನಡೆಯಲಾರದೆ ಹಾಗೂ ಹೀಗೂ ದೇಹವನ್ನು ಎಳೆದುಕೊಂಡು ಹೋಗುತ್ತಿದ್ದರು ಅವರನ್ನು ಒಯ್ಯುತ್ತಿದ್ದ ಜರ್ಮನ ಸೈನಿಕರ ಕರ್ಕಶ ಧ್ವನಿಯು ಕರ್ಣರಂಧ್ರಗಳನ್ನು ಭೇದಿಸುತ್ತಿತ್ತು.

" ದೇವಾ, ಕೈದಿಗಳಲ್ಲಿ ಗಾಯಗೊಂಡವರೂ ಇದ್ದಾರಲ್ಲಾ! "

“ಅವರ ಬೂಟ್ಸುಗಳನ್ನೂ ಕಸಕೊಂಡಿದ್ದಾರೆ. ಅಯ್ಯೊ, ಬರಿಗಾಲಿನಿಂದ ಫಡೆಸುತ್ತಾರೆ, ಅವರನ್ನು!”

“ಹೋಗಿರೊ ಇಲ್ಲಿಂದ” ಎಂತ ಜರ್ಮನ ಸೈನಿಕನು ಕೂಡಿದ ಜನರನ್ನು ಕುರಿತು ಅರ್ಭಟಿಸಿದನು ಆದರೆ, ಅವನ ಅರ್ಭಟಿಗಳಿಗೆ ಯಾರೂ ಕಿವಿಗೊಡಲಿಲ್ಲ. ಸಮೀಪಿಸುತ್ತಿರುವ ಕೈದಿಗಳನ್ನೇ ನೋಡುತ್ತಾ ನಿಂತರು

ಮೆರವಣಿಗೆಯು ಊರೊಳಗೆ ಬಂತು ಕೈದಿಗಳ ಮೋರೆಗಳು ರಕ್ತಹೀನತೆಯಿಂದ ನಿಸ್ತೇಜವಾಗಿ ಶೀತಬಾಧೆಯಿಂದ ಕರೀ ವರ್ಣಕ್ಕೆ ತಿರುಗಿದ್ದುವು. ಎರಡನೇಯ ಸಾಲಿನಲ್ಲಿದ್ದ ಒಬ್ಬ ಕೈದಿಯು ನಡೆಯಲಾರದೆ ಮುಗ್ಗರಿಸಿ ಬೀಳುತ್ತಿದ್ದನು. “ಎಲಾ, ಇವನೆ, ಸರಿಯಾಗಿ ನಡಿಯೊ” ಎಂತ ಪಹರೆಯ ಜರ್ಮನ ಸಿಪಾಯಿಯು ಒದರಿದನು. ಇದರಂತೆ ನಡೆಯಲು ಪ್ರಯತ್ನಿಸಿ ಅವನು ಇನ್ನಷ್ಟೂ ಮುಗ್ಗರಿಸಿ ಬಿದ್ದನು. ಅವನು ಬೀಳುವಾಗ ಜತೆಗಾರನೊಬ್ಬನು ಕೈ ಕೊಡಹೋದನು. ಆದರೆ, ಅಷ್ಟರಲ್ಲಿ ಜರ್ಮನ ಸಿಪಾಯಿಯು ಕೋವಿಯ ಬುಡದಿಂದ ಹೊಡೆದ ಬಲವಾದ ಪೆಟ್ಟೊಂದು ಆ ನೀಡಿದ ಕೈಯ ಮೇಲೆ ಬಿತ್ತು.

ಕಡಿಯುವ ಚಳಿಯಿಂದ ಒಡೆದ ಅವರ ಬರಿಗಾಲುಗಳಿಂದ ಸುರಿದ ನೆತ್ತರು ಬಿಳುಪಾದ ಹಿಮರಾಶಿಯ ಮೇಲೆ ಅಲ್ಲಲ್ಲಿ ಬಿದ್ದು ಅವರ ಟೊಪ್ಪಿಗೆಗಳ ಮೇಲಿನ ಕೆಂಪು ಚುಕ್ಕೆಗಳಂತೆ ಭಾಸವಾಗುತ್ತಿತ್ತು ಇದನ್ನು ನೋಡುತ್ತಿದ್ದಂತೆ ಪ್ರೇಕ್ಷಕರ ಮನಸ್ಸಿನಲ್ಲಿ ಮೂಡಿದ ಸಹಾನುಭೂತಿ, ಸಂತಾಪಗಳು ಹೆಚ್ಚಾಗುತ್ತ ಹೋಗಿ ಅವರ ಮುಖಮುದ್ರೆಯು ಭೂಮಿಯ ಮೇಲೆ ಬಿದ್ದ ಪ್ರತಿಯೊಂದು ರಕ್ತದ ಹನಿಗೂ ಯೋಗ್ಯ ಪ್ರತೀಕಾರ ಮಾಡಲಿಕ್ಕೇ ಬೇಕೆಂಬ ದೃಢನಿಶ್ಚಯದ ಮೌನವನ್ನು ತಾಳಿತು

ಎಲ್ಲರಂತೆ ಪುಸ್ಯಾಳೂ ಇದೇ ದೃಶ್ಯವನ್ನು ನೋಡುತ್ತಾ ನಿಂತಿದ್ದಳು. ಆದರೆ ಇತರರಿಗಾದಂತೆ ಅವಳಿಗೆ ಭಾವೋದ್ರೇಕವಾಗಲಿಲ್ಲ. ಏನೊ ವಿಲಕ್ಷಣ ದೃಶ್ಯವೆಂದಿಷ್ಟೇ ಅವಳಿಗೆ ಅನಿಸಿತು. ಅಂತೆಯೇ ಅವಳ ಮೋರೆಯ ಮೇಲಿನ ನಿತ್ಯದ ನಗು ಮಾಯವಾಗಲಿಲ್ಲ. ಒಲ್ಗಾ ಇದನ್ನು ನೋಡಿದಳು. ತನ್ನ ತಂಗಿಯ ಈ ನಿರ್ದಯ ವರ್ತನೆಯು ಅವಳಿಗೆ ಸಹನಾತೀತವಾಯಿತು.

ನೆತ್ತರು ಬಿಸಿಯೇರಿತು. ಬಳಿಗೆ ಹೋಗಿ "ನಿಲ್ಲಿಸು, ನಿನ್ನ ಆ ನಗು." ಎಂದು ಒದರಿದಳು. ಫಕ್ಕನೆ ಕಿವಿಗೆ ಬಿದ್ದ ಈ ಮಾತುಗಳಿಂದ ಪುಷ್ಪಾ ಚಕಿತಳಾದಳು ಕಾಲುಗಳು ಒಂದೆರಡು ಹೆಜ್ಜೆ ಹಿಂದೆ ಸರಿದುವು. "ನಾನು ನಗಲಿಲ್ಲ" ಎಂದಿಷ್ಟೇ ಅಂದಳು.

"ಏನು ಪಿಶಾಚಿ! ನಕ್ಕು ನಗಲಿಲ್ಲ ಅಂತೀಯಾ ?" ಎಂತ ಆರ್ಭಟಿಸಿ ರುದ್ರಮೂರ್ತಿಯಂತಾಗಿದ್ದ ಒಲ್ಗಾ ತನ್ನ ತಂಗಿಯ ದವಡೆಗೆ ಬಲವಾದ ಏಟನ್ನು ಏರಿಸಿದಳು. ಪುಷ್ಪಾಳಿಂದ ಏನೂ ಮಾಡುವುದಾಗಲಿಲ್ಲ. ಕುನ್ನಿ ಮರಿಯಂತೆ ಕುಂಯಿಗುಡುತ್ತಾ ಮನೆಗೆ ಓಡಿದಳು.

ಕೈದಿಗಳ ಮೆರವಣಿಗೆಯು ಕೂಡಿದ ಜನರನ್ನು ದಾಟುವಲ್ಲಿಗೆ ಬಂದಿತು ಹಸಿವು, ನೋವುಗಳಿಂದ ಸೊರಗಿದ ದೇಹದಲ್ಲಿ ಒಳಕ್ಕೆ ಹೋದಂತೆ ಕಾಣುವ ಕಣ್ಣುಗಳು, ಕೂಡಿದ್ದ ಹೆಂಗಸರನ್ನು ಕಂಡವು. "ರೊಟ್ಟಿ" ಎಂದೊಬ್ಬ ಹೀನ ಸ್ವರದಲ್ಲಿ ಒದರಿದನು. ಕೂಡಲೇ ಕೋವಿಯ ಏಟೊಂದು ಅವನ ತಲೆಯ ಮೇಲೆ ಬಿತ್ತು. ಆದರೆ ಅದೇ ಘೋಷಣೆಯನ್ನು ಬೇರೆ ಕೈದಿಗಳೂ ಆರಂಭಿಸಿದರು. "ರೊಟ್ಟಿ, ನಾವು ಉಣ್ಣದೆ ಒಂದು ವಾರ ವಾಯಿತು, ರೊಟ್ಟಿ."

ಇದನ್ನು ಕೇಳಿದೊಡನೆ ಪ್ರತಿಯೊಬ್ಬರೂ ತಂತಮ್ಮ ಮನೆಗಳಿಗೆ ಓಡಿದರು. ಹಾಗೂ ಒಲೆಯ ಮೇಲಿನ ಪಾತ್ರೆಯಲ್ಲಿ, ಉಗ್ರಾಣದ ಮೂಲೆ ಯಲ್ಲಿ, ಮಕ್ಕಳ ಬಟ್ಟಲಿನಲ್ಲಿ ಯಾವತ್ತೂ ಕಡೆಗಳಲ್ಲಿ ಕೈಗೆ ಸಿಕ್ಕಿದ ರೊಟ್ಟಿ ತುಂಡುಗಳನ್ನು ತಗೊಂಡು ಬಂದರು.

ಬನ್ನ್ಯಚಿಕಾಳು ಮೊದಲು ಹೊರಗೆ ಬಂದಳು. ಅವಳ ಕೈಯಲ್ಲಿ ಒಂದು ದೊಡ್ಡ ಶಿಜ್ಞೆಯ ರೊಟ್ಟಿ ಇತ್ತು. ತನ್ನ ಉಗ್ರಾಣದಲ್ಲಿಯ ಕೊನೆಯ ಹಿಟ್ಟಿನ ರೊಟ್ಟಿ ಅದು. ಮಕ್ಕಳು ಆ ದಿನ ಉಪವಾಸ ಬೀಳಬೇಕಾದೀ ತೆಂಬುದನ್ನೂ ಲೆಕ್ಕಿಸದೆ ಅದನ್ನು ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಯೋಧರಿಗೆ ಕೊಡಲು ತಂದಿದ್ದಳು. ಪಹರೆಯ ಸಿಪಾಯಿಗಳ ಆಕ್ರೋಶಕ್ಕೆ ಕಿವಿಗೊಡದೆ ಅವರ ನಡುವಿನಿಂದ ನುಸುಳಿ ಅದನ್ನು ಒಬ್ಬ ಕೈದಿಗೆ ಕೊಟ್ಟಳು. ಆದರೆ ಅದು ಆ ಕೈದಿಗೆ ಸಿಗಲಿಲ್ಲ. ಪಹರೆಯ ಸಿಪಾಯಿಯು ಆ ಕೈದಿಯ

ಕೈಗೆ ಹೊಡೆದ ಬಲವಾದ ಒಂದು ಏಟಿಗೆ ಆ ರೊಟ್ಟಿ ಕೆಳಗೆ ಬಿತ್ತು. ಇನ್ನೊಬ್ಬ ಸಿಪಾಯಿಯು ಬನ್ಯ್ಯಟಿಕಾಳ ಹೊಟ್ಟೆಗೇನೇ ಒಂದೇಟು ಹೊಡೆದನು. ಹಾಗೂ ಕೆಳಗೆ ಬಿದ್ದಿದ್ದ ರೊಟ್ಟಿಯ ತುಂಡನ್ನು ಕಾಲಿನಿಂದ ಒದೆದು ಚರಂಡಿಯೊಳಗೆ ಹಾಕಿದನು ಎಲುಬು–ಗೂಡಿನ ಕೈದಿಯೊಬ್ಬ ಅದನ್ನು ಹೆಕ್ಕಲು ಓಡಿದನು. ಕೂಡಲೇ ಜರ್ಮನ ಕೋವಿಯಿಂದ ಒಂದು ಗುಂಡು ಹಾರಿತು. ರೊಟ್ಟಿಯನ್ನು ಹೆಕ್ಕಲು ಕೈಚಾಚಿದ ಎಲುಬು-ಗೂಡು ಜೀವ ಕಳೆದುಕೊಂಡು ತಾಯಿನೆಲದ ಮೇಲೆ ಬಿತ್ತು.

ಅಷ್ಟರಲ್ಲಿ ಇತರ ಹೆಂಗಸರೂ ರೊಟ್ಟಿ ತಗೊಂಡು ಹೊರಗೆ ಬಂದರು. ಅವರು, ಹೊಟ್ಟೆಯ ಪೆಟ್ಟಿನಿಂದ ಸ್ಮೃತಿ ತಪ್ಪಿ ಬಿದ್ದಿದ್ದ ಬನ್ಯ್ಯಟಿಕಾಳನ್ನೂ ನೋಡಲಿಲ್ಲ, ಗುಂಡಿನೇಟಿನಿಂದ ಸತ್ತು ಬಿದ್ದಿದ್ದ ಆ ಎಲುಬು-ಗೂಡನ್ನೂ ನೋಡಲಿಲ್ಲ. ಎಲ್ಲರೂ ಕೈದಿಗಳ ಬಳಿಗೆ ಓಡಿ ತಾವು ತಂದಿದ್ದ ರೊಟ್ಟಿ ತುಂಡುಗಳನ್ನು ಅವರಿಗೆ ಕೊಡಹೋದರು ಆದರೆ ಪಹರೆಯ ಸಿಪಾಯಿಗಳು ಒಂದೇ ಸವನೆ ಅವರನ್ನು ಹೊರನಟ್ಟಿದರು. ಇದರಿಂದ ಆ ಹಳ್ಳಿಯ ಹೆಂಗಸರು ನಿರಾಶೆಗೊಳ್ಳಲಿಲ್ಲ. ಕೆಲವರು ಮೊಣಕಾಲ ಮೇಲೆ ಊರಿ ರೊಟ್ಟಿ ತುಂಡುಗಳನ್ನು ಕೈದಿಗಳ ಕಾಲುಗಳೆಡೆಯಲ್ಲಿ ಬಿಸಾಡಲು ಯತ್ನಿಸಿದರು ಒಬ್ಬ ಕೈದಿ ಒಂದು ತುಂಡನ್ನು ಹೆಕ್ಕಲು ಬಗ್ಗಿದನು. ಪುನಃ ಒಂದು ಗುಂಡು ಹಾರಿತು. ಇನ್ನೊಂದು ರಶ್ಯನ ಜೀವ ಅನಂತದಲ್ಲಿ ಲೀನವಾಯಿತು.

"ಬಾಂಧವರೇ, ಬೇಡ ಸುಮ್ಮನೆ ನಿಮ್ಮ ಜೀವವನ್ನು ಬಲಿಗೊಡಬೇಡಿರಿ, ರೊಟ್ಟಿಯ ಚೂರು ಹೆಕ್ಕಲು ಕೂಡಾ ಅವರು ಬಿಡುವ ಹಾಗಿಲ್ಲ." ಮುಖದಲ್ಲಿ ಆದ ಘಾಯಗಳಿಂದ ಸುರಿಯುವ ನೆತ್ತರಿನ ನಡುವಿನಿಂದ ಯುವಕ ಕೈದಿಯೋರ್ವನ ಸ್ವರವು ಕೇಳಿಸಿತು. ಅವನು ಹೇಳಿದುದು ನಿಜವಿತ್ತು. ರೊಟ್ಟಿಯನ್ನು ಹೆಕ್ಕಲು ಹೋಗಿ ಎರಡು ಪ್ರೇತಗಳು ಅಲ್ಲೇ ಬಿದ್ದಿದ್ದುವು. ಬಂದಿದ್ದ ಹೆಂಗಸರು ಅಸಹಾಯತೆಯ ಕಣ್ಣೀರು ಸುರಿಸುತ್ತಾ ಹಾಗೂ ತಮ್ಮ ದೇಶಬಾಂಧವರ ದುರ್ಗತಿಯನ್ನು ನೋಡುತ್ತಾ ನಿಂತರು. ಕಣ್ಣಿಗೆ ಕಾಣಿಸುತ್ತಿದ್ದರೂ ಕೈಗೆ ಎಟಕಲಾರದ ರೊಟ್ಟಿ ತುಂಡುಗಳಿಗಾಗಿ ಆ ಕೈದಿಗಳು ನಿರಾಶೆಯ ನಿಟ್ಟುಸಿರನ್ನು ಬಿಡುತ್ತಾ ಮುಂದೆ ಹೆಜ್ಜೆ ಹಾಕಿದರು.

ರಶ್ಯನ ರೈತ ಹೆಂಗಸರವರು. ಸುಮ್ಮನೆ ನಿರಾಶೆಯಿಂದ ಕೈ ಕಟ್ಟಿ ಕೂಡುವವರಲ್ಲ ಗಾಲ್ಯಾ ಸಾಂಘಿಕ ಕೃಷಿಕ್ಷೇತ್ರದಲ್ಲಿ ದುಡಿಯುವವಳು. ಅವಳ ಗಂಡನೂ ಯುದ್ಧಕ್ಕೆ ಹೋಗಿದ್ದನು ಅವಳಿಗೆ ಒಂದು ಯೋಜನೆ ಹೊಳೆಯಿತು. ತನ್ನ ಚಿಕ್ಕ ಮಗ ಸಾಶಾನನ್ನು ಕರೆದು, "ನೋಡು, ಇಲ್ಲೇನೂ ಮಾಡಲು ಸಾಧ್ಯವಿಲ್ಲ. ಎಲ್ಲಾ ಮಕ್ಕಳನ್ನೂ ಒತ್ತಟ್ಟಿಗೆ ಕೂಡಿಸು. ಒಳದಾರಿಯಿಂದ ಊರ ಹೊರಗೆ ರಸ್ತೆ ತಿರುಗುವಲ್ಲಿಗೆ ಹೋಗಿ ಇವರು ಅಲ್ಲಿ ಮುಟ್ಟುವ ಮೊದಲೇ ರೊಟ್ಟಿಯ ತುಂಡುಗಳನ್ನು ರಸ್ತೆಯ ನಡುವಿನಲ್ಲಿ ಎಸೆಯಿರಿ ಒಂದೆರಡು ಚೂರುಗಳನ್ನಾದರೂ ನಮ್ಮವರು ಹೆಕ್ಕಬಹುದು." ಎಂದು ಹೇಳಿದಳು.

ಹುಡುಗರೆಲ್ಲರೂ ಹಾಗೆಯೇ ಮಾಡಲು ಓಡಿದರು. ಈಗ ಇತರ ಹೆಂಗಸರ ಲಕ್ಷ್ಯವು ಬನ್ಯಾಚಿಕಾಳ ಕಡೆಗೆ ಹೋಯಿತು. ಸ್ಮೃತಿ ತಪ್ಪಿ ಬಿದ್ದವಳಿಗೆ ಶೈತ್ಯೋಪಚಾರ ಮಾಡಿದರು ಅವಳು ಮೆಲ್ಲನೆ ಎದ್ದು ಕುಳಿತಳು. ಕುಳಿತವಳೇ ಒಂದೇಸವನೆ ಅಳಲು ಸುರು ಮಾಡಿದಳು.

"ನೋವು ಬಹಳ ಇದೆಯೇನು ?" ಫ್ರೋಸ್ಯಾ ಕೇಳಿದಳು.

"ಇಲ್ಲ, ಇಲ್ಲ, ನೋವಿಗಾಗಿ ಅಳಲು ನಾನೇನು ಸಣ್ಣ ಮಗುವೇ ?"

"ಅಳಬೇಡ, ಸ್ವಲ್ಪ ವಿಶ್ರಮಿಸಿಕೊ ಆಮೇಲೆ ಒಳತೆನಿಸುವುದು, ನಿನಗೆ."

"ಮೂರ್ಖರಂತೆ ಮಾತಾಡಬೇಡ, ಫ್ರೊಸ್ಯಾ. ನಾನು ನೋವಿಗಾಗಿ ಅಳಲಿಲ್ಲ ನನ್ನ ಪ್ಯೋಟರನ ನೆನವಾಯಿತು. ಅವನ ಸ್ಥಿತಿಯೂ ಇದೇಯೋ ಏನೊ ? ಈ ರೀತಿ ನರಕಯಾತನೆಗೆ ಗುರಿಯಾಗುವುದಕ್ಕಿಂತ ಕಾಳಗದಲ್ಲಿ ಮಡಿದರೆ ಚೆನ್ನಾಗಿತ್ತು "

"ತಾಳಮ್ಮಾ, ತಾಳು ಸುಮ್ಮನೆ ಏನೆಲ್ಲಾ ಭಯಂಕರ ವಿಚಾರ ತಲೆಯಲ್ಲಿ ತಂದುಕೊಳ್ಳಬೇಡ "

"ಹಾಗಲ್ಲಮ್ಮಾ ಹೀಗೆ ಉಪವಾಸ ಬಿದ್ದು ಈ ಜರ್ಮನ ರಕ್ಕಸರ ಬಡಿತ ತಿಂದು ನರಳುವುದಕ್ಕಿಂತ ತನ್ನ ಕಪಾಳಕ್ಕೆ ಗುಂಡು ಹಾಕಿ ಸತ್ತರೆ ನನಗೆ ಇಷ್ಟು ದುಃಖವಾಗಲಿಕ್ಕಿಲ್ಲ."

" ನೀನೀಗ ಮನೆಗೆ ಹೋಗಿ ತಣ್ಣಗೆ ಮಲಗು." ಇಷ್ಟು ಹೇಳಿ ಫ್ರೋಸ್ಯಾ ಬನ್ಯುಚಿಕಾಳನ್ನು ಎಬ್ಬಿಸಿದಳು. ಹಾಗೂ ಅವಳ ಕೈ ಹಿಡಿದು ಮೆಲ್ಲನೆ ಮನೆಗೆ ಕರಕೊಂಡು ಹೋದಳು. ಬನ್ಯುಚಿಕಾಳ ಮನಸ್ಸಿನಲ್ಲಿ ಸುಳಿಯುತ್ತಿದ್ದ ಆ ವಿಚಾರಗಳು ಇನ್ನೂ ಹೋಗಲಿಲ್ಲ. ಬಾಗಿಲ ಬಳಿ ನಿಂತಿದ್ದ ತನ್ನ ಚಿಕ್ಕ ಮಗ ಗ್ರೀಶಾನನ್ನು ಕರೆದು " ನೋಡು ಗ್ರೀಶಾ, ನಿನಗೆ ಎಂದಾದರೂ ಜರ್ಮನ ಕೈದು ಅಥವಾ ಸಾವು ಇವೆರಡಲ್ಲದೆ ಬೇರೆ ಗತಿ ಇಲ್ಲವೆಂದಾದರೆ ಸಾವನ್ನೇ ಸ್ವೀಕರಿಸು. ಹಿಂದು ಮುಂದು ನೋಡಬೇಡ," ಅಂದಳು. ಗ್ರೀಶಾ ಹೆದರಿ ಚೀರಾಡಹತ್ತಿದಳು.

" ಏನು, ಪೂರಾ ಹುಚ್ಚು ಹಿಡಿದಿದೆಯೇನು, ನಿನಗೆ ? ಬರೇ ಐದು ವರ್ಷದ ಮಗು ಅವನು. ಅವನನ್ನೇಕೆ ಹೆದರಿಸುವೆ? ಅವನು ದೊಡ್ಡವನಾಗುವಷ್ಟರಲ್ಲಿ ಜರ್ಮನರ್‍ಯಾರೂ ಉಳಿಯಲಿಕ್ಕಿಲ್ಲ "

ಬನ್ಯುಚಿಕಾಳು ತುಸು ಹೊತ್ತು ಯೋಚಿಸಿದಳು.

" ನೀನು ಹೇಳುವುದು ಸರಿ. ಇಂತಹ ಘೋರ ಅನ್ಯಾಯ, ಅತ್ಯಾಚಾರಗಳನ್ನು ನಿಸರ್ಗವು ಎಷ್ಟು ದಿನ ಸಹಿಸೀತು ?"

ಇಷ್ಟು ಹೇಳಿ ಬನ್ಯುಚಿಕಾ ಪುನಃ ಅಳಲು ತೊಡಗಿದಳು.

ಫ್ರೋಸ್ಯಾ ಸ್ವಲ್ಪ ಕುಡಿಯಲು ಕೊಟ್ಟು ಅವಳನ್ನು ಮಲಗಿಸಿದಳು. ಮಲಗಿದಲ್ಲಿಯೂ ಅವಳ ಮನಸ್ಸಿನಲ್ಲಿ ಅದೇ ಯೋಚನೆ ಸುತ್ತುಹಾಕುತ್ತಿತ್ತು.

" ಅಲ್ಲ, ಫ್ರೋಸ್ಯಾ, ಅಂತಹ ಪ್ರಸಂಗಗಳಲ್ಲಿ ತನ್ನ ತಲೆಗೇನೆ ಗುಂಡು ಇಡಲು ನನ್ನ ಗಂಡ ಹಿಂಜರಿಯಲಿಕ್ಕಿಲ್ಲವಷ್ಟೆ."

" ಏನೆಲ್ಲಾ ಯೋಚನೆಯಪ್ಪಾ ನಿನಗೆ, ಅವನು ಈಗ ಸೈನಿಕನು. ಯಾವಾಗ ಏನು ಮಾಡಬೇಕೆಂದು ಅವನಿಗೆ ಮೇಲಧಿಕಾರಿಗಳು ಹುಕುಮು ಕೊಡುತ್ತಾರೆ. ಆ ಪ್ರಕಾರ ನಡೆಯಲೇಬೇಕು. ನೀನು ಸುಮ್ಮನೆ ಏನು ಯೋಚನೆ ಮಾಡುತ್ತಿ ?"

" ಅದು ಸರಿ. ಹಾಗಿದ್ದರೆ, " ಜರ್ಮನ ಸೆರೆಗೆ ಸಿಗುವುದಕ್ಕಿಂತ ಜೀವ ತೆಗೆದುಕೊ " ಅಂತ ಹುಕುಮು ಕೊಡಬಹುದೇನು ಅವನಿಗೆ ಮೇಲಧಿಕಾರಿಗಳು ?"

"ಎಲ್ಲಾ ಸರಿಯಾದ, ಯೋಗ್ಯವಾದ ಹುಕುಮು ಕೊಡುತ್ತಾರೆ. ಬರೇ ಒಣ ಯೋಚನೆ ಮಾಡುತ್ತಾ ಕೂಡ್ರಬೇಡ. ತಣ್ಣಗೆ ಮಲಗು."

"ಅಲ್ಲ, ಫ್ರೋಸ್ಯಾ, ಆ ರೊಟ್ಟಿ ಹೆಕ್ಕಲು ಹೋದ ಎಲುಬು-ಗೂಡೇ ನನ್ನ ಕಣ್ಣೆದುರಿಗೆ ಬರುತ್ತದೆ ನಮ್ಮ ನಾಡಿನಲ್ಲೇ ನಮ್ಮ ಜನರು ಹಸಿವೆ ಯಿಂದ ಸಾಯುವ ಪರಸ್ಥಿತಿ ಬಂತಲ್ಲಾ! ನಮ್ಮ ಊರೊಳಗಿಂದ ಹಾದು ಹೋಗುವಾಗಲೂ ನಮ್ಮಿಂದ ಒಂದು ರೊಟ್ಟಿಯ ಚೂರು ಕೊಡಲಿಕ್ಕೆ ಸಾಧ್ಯ ವಾಗಲಿಲ್ಲ ಅಂದರೆ ಎಂತಹ ಶೋಚನೀಯ ಸ್ಥಿತಿ ನೋಡು! ಎಷ್ಟು ಕಳವಳ ವಾಗುತ್ತದೆ ಮನಸ್ಸಿಗೆ! ಎಷ್ಟೇ ಮರೆಯಲು ಪ್ರಯತ್ನಿಸಿದರೂ ಅದು ಕಡಿಮೆಯಾಗುವುದಿಲ್ಲ."

"ನಮ್ಮ ಹುಡುಗರೆಲ್ಲಾ ಹೋಗಿದ್ದಾರೆ, ಅವರು ಹೋಗುವ ರಸ್ತೆಯ ಮೇಲೆ ರೊಟ್ಟಿ ಹಾಕಿ ಬರಲಿಕ್ಕೆ ಜರ್ಮನರಿಗೆ ಗೊತ್ತಾಗದಂತೆ ಒಂದೆರಡು ಚೂರಾದರೂ ಹೆಕ್ಕಲು ಸಾಧ್ಯವಾದೀತು, ಅವರಿಗೆ"

"ಮಕ್ಕಳು ಸರಿಯಾಗಿ ಬೀಸಾಡಿದರೆ ರಸ್ತೆಯ ನಡುವಿನಲ್ಲೇ ಬೀಸಾಡ ಬೇಕು ನೋಡು, ರೊಟ್ಟಿಯ ಚೂರುಗಳನ್ನು."

"ಎಲ್ಲಾ ಸರಿಯಾದ ಸ್ಥಳದಲ್ಲಿ ಬೀಸಾಡುತ್ತಾರೆ ನಮ್ಮ ರೈತರ ಮಕ್ಕಳು ಅಂದರೆ ಏನೆಂತ ತಿಳಿದಿ? ಅವರ ತೂಕದ ಬಂಗಾರಕ್ಕೆ ಅವರಷ್ಟು ಬೆಲೆ ಬರಲಿಕ್ಕಿಲ್ಲ"

ಬನ್ಯುಚಿಕಾ ಸಮ್ಮತಿ ಸೂಚಕವಾಗಿ ತಲೆಯನ್ನು ಬಗ್ಗಿಸಿದಳು ದಣಿವಿನಿಂದಲೂ ನೋವಿನಿಂದಲೂ ಅವಳಿಗೆ ತೂಕಡಿಕೆ ಬರಹತ್ತಿತ್ತು. ಮಲಗಿದಲ್ಲೇ ಕಣ್ಣು ಮುಚ್ಚಿದಳು. ಆದರೆ ಕಣ್ಣು ಮುಚ್ಚಿದರೂ ಒಂದು ರೊಟ್ಟೀ ತುಂಡಿಗಾಗಿ ಹಾತೊರೆಯುತ್ತಿದ್ದ ಆ ಎಲುಬು-ಗೂಡಿನ ದೃಶ್ಯವು ಅವಳೆದುರಿನಿಂದ ಮಾಯವಾಗಲಿಲ್ಲ. ಜನ್ಮದಲ್ಲೇ ಅದನ್ನು ಮರೆಯುವುದು ಸಾಧ್ಯವಿರಲಿಲ್ಲ.

ರೊಟ್ಟಿಯ ತುಂಡುಗಳನ್ನು ತಗೊಂಡು ಹೊರಟ ಮಕ್ಕಳು ಒಳದಾರಿ ಯಿಂದ ಹೋಗಿ ಊರ ಹೊರಗಿನ ಚೌಕಕ್ಕೆ ಆದಷ್ಟು ಬೇಗನೇ ಮುಟ್ಟುವ ಪ್ರಯತ್ನದಲ್ಲಿದ್ದರು. ಆದರೆ, ಅಂದು ಮಿತಿಮೀರಿ ಹಿಮ ಬಿದ್ದಿತ್ತು. ಹಾಗಾಗಿ

ಓಡುವುದು ಅಸಾಧ್ಯವಾಯಿತು. ಎಲ್ಲಾ ಕಡೆಗಳಲ್ಲೂ ದಟ್ಟವಾಗಿ ಹಿಮ ಬಿದ್ದುದರಿಂದ ದಾರಿಯಲ್ಲಿದ್ದ ಏರುತಗ್ಗುಗಳೂ ಹಳ್ಳ-ಕೊಂಡಗಳೂ, ಒಂದೂ ಕಾಣಿಸುತ್ತಿರಲಿಲ್ಲ ಓಡುವಾಗ ಚೆಚೋರಾಳ ಮಗ ಚಿಕ್ಕ ಒಸ್ಕ್ಯಾನು ಹಿಮ ತುಂಬಿದ ತಗ್ಗಿನಲ್ಲಿ ಹೊಟ್ಟೆಯ ತನಕ ಹೂತುಹೋದನು. ಏಳಲಿಕ್ಕಾಗದೆ "ಸಾಶಾ, ಸಾಶಾ!" ಎಂತ ಕರೆದನು.

"ಒದರಬೇಡಪ್ಪಾ, ಜರ್ಮನರ ಕಿವಿಗೆ ಕೇಳಿಸಿದರೆ ಓಡಿ ಬಂದಾರು."

"ಇಲ್ಲಿ ಎದೆಯ ತನಕ ಮುಳುಗಿಹೋಗಿದ್ದೇನಪ್ಪಾ, ಸ್ವಲ್ಪ ಕೈ ಕೊಡು."

"ನಿನ್ನನ್ನು ಎಬ್ಬಿಸಲಿಕ್ಕೆ ಬಂದರೆ ತಡವಾದೀತು."

"ಏನು ತಡ, ತುಸು ಬಾ."

"ಹೊತ್ತಾಗುತ್ತದೊ ನೀನೇ ಹೇಗಾದರೂ ಮಾಡಿ ಮೇಲೆ ಬಾ"

ದಪ್ಪವಾಗಿ ಬಿದ್ದಿದ್ದ ಹಿಮದಿಂದ ಭೂಸ್ಥಿತಿ ತಿಳಿಯದೆ ಒಸ್ಕ್ಯಾನಂತೆ ಬೇರೆ ಹುಡುಗರೂ ಕೆಲವರು ಬಿದ್ದರು ಕೆಲವರು ಹಿಮದಲ್ಲಿ ಹೆಚ್ಚು ಕಡಿಮೆ ಮುಳುಗಿದರು. ಅಂತೂ ಸಕಾಲದಲ್ಲಿ ಗುರಿಮುಟ್ಟಲು ಯಾರಿಂದಲೂ ಸಾಧ್ಯವಾಗಲಿಲ್ಲ. ಸಾಶಾ ಮತ್ತು ಸಾವ್ಕಾ ಎಂಬ ಇಬ್ಬರು ಹುಡುಗರು ಮಾತ್ರ ಈ ಎಲ್ಲಾ ತೊಡಕುಗಳನ್ನೂ ದಾಟಿ ಮುಂದಕ್ಕೆ ನುಗ್ಗುತ್ತಾ ಇದ್ದರು.

"ಬೇಗ, ಬೇಗ." ಸಾಶಾನು ಒದರುತ್ತಾ ಇದ್ದನು. ಓಡಿ ಓಡಿ ಅವನ ಮೈಯೆಲ್ಲಾ ಬೆವತುಹೋಗಿತ್ತು. ನೆತ್ತಿಯಿಂದ ಸುರಿಯುವ ಬೆವರಿನಿಂದ ದಾರಿಸರಿಯಾಗಿ ಕಾಣಿಸುತ್ತಿರಲಿಲ್ಲ. ಅವನ ಕಾಲು ಕೂಡ ಎಷ್ಟೋ ಸಾರೆ ಹೂತುಹೋಯಿತು. ತನ್ನ ಶಕ್ತಿಯನ್ನೆಲ್ಲಾ ಉಪಯೋಗಿಸಿ ಅದನ್ನು ಮೇಲಕ್ಕೆತ್ತಿ ಪುನಃ ಓಡುತ್ತಿದ್ದನು. ಇತರರಂತೆ ಅವನು ರೊಟ್ಟಿಯ ತುಂಡುಗಳನ್ನು ಕೈಯಲ್ಲಿ ಹಿಡಿದಿರಲಿಲ್ಲ. ಹೆಗಲ ಮೇಲಿದ್ದ ಒಂದು ಚಿಕ್ಕ ಚೀಲದಲ್ಲಿ ಇಟ್ಟಿದ್ದನು. ಹಾಗಾಗಿ ಅವನಿಗೆ ಬಿದ್ದಲ್ಲಿಂದ ಕೈಕೊಟ್ಟು ಏಳಲೂ ಹಾಗೂ ಏರುಗಳನ್ನು ಹತ್ತಲೂ ಇತರರಷ್ಟು ಕಠಿಣವಾಗಲಿಲ್ಲ. ಸಾವ್ಕಾನು ಅವನ ಬೆನ್ನ ಹಿಂದೆಯೇ ಓಡುತ್ತಿದ್ದನು.

ಹಿಮ ಬಿದ್ದು ಮೆತ್ತಗಾದ ನೆಲದಲ್ಲಿ ಇಟ್ಟ ಹೆಜ್ಜೆಯೇ ಭಾರವೆನಿಸು ತ್ತಿತ್ತು. ಬೀಳುತ್ತ, ಏಳುತ್ತ ಸಾಶಾ, ಸಾವ್ಕಾ, ಇವರು ಎಷ್ಟು ಬೇಗ ಓಡಿದರೂ ಸಕಾಲದಲ್ಲಿ ಮುಟ್ಟಲು ಸಾಧ್ಯವಾಗಲಿಲ್ಲ. ಅವರು ತಲಪ ಬೇಕಾದ ಚೌಕವನ್ನು ಸಮಿಪಿಸುವಷ್ಟರಲ್ಲಿ ಹಿಮದ ಮಳೆಯೂ ಸುರು ವಾಯಿತು. ಇದರಿಂದಾಗಿ ಮೊದಲೇ ಕುಂಠಿತವಾಗಿದ್ದ ಅವರ ವೇಗವು ಇನ್ನಷ್ಟೂ ಕಡಿಮೆಯಾಯಿತು.

ತುಸು ದೂರದಲ್ಲಿ ರಸ್ತೆಯ ಚೌಕವು ಕಾಣಿಸಿತು ತನ್ನ ದೇಶ ಬಾಂಧವರನ್ನು ಉಳಿಸುವ ಅವ್ಯೃತವೇ ತನ್ನಲ್ಲಿದೆಯೆಂಬಂತೆ ಸಾಶಾನು ತನ್ನ ಮನಸ್ಸು ಇಂದ್ರಿಯಗಳನ್ನೆಲ್ಲಾ ತಾನು ತಲಪಬೇಕಾಗಿದ್ದ ಗುರಿಯಲ್ಲೇ ಕೇಂದ್ರೀಕರಿಸಿ ಯಾವುದರ ಪರಿವೆಯೂ ಇಲ್ಲದೆ ಓಡುತ್ತಿದ್ದನು ಆದರೆ ಮನಸ್ಸಿ ನಲ್ಲಿ ಎಷ್ಟೇ ಸಂಕಲ್ಪ ಮಾಡಿದ್ದರೂ ದೇಹದ ವೇಗಕ್ಕೆ ಮಿತಿ ಇತ್ತು. ನಿಸರ್ಗದ ಪ್ರತಿಕೂಲಪರಿಸ್ಥಿತಿಯಲ್ಲಿ ಎಂದಿನಂತೆ ವೇಗದಲ್ಲಿ ಓಡುವುದು ಅವನಿಂದ ಸಾಧ್ಯವಾಗಲಿಲ್ಲ ಓಡಿ, ಓಡಿ ಕೊನೆಗೆ ಚೌಕವು ಇನ್ನು ದೂರ ವಿಲ್ಲವೆನ್ನುವಷ್ಟರಲ್ಲಿ ಕೈದಿಗಳ ಸಮೇತ ಜರ್ಮನಸೈನ್ಯದ ದಳವು ಚೌಕ ವನ್ನು ಮುಟ್ಟಿತು ದೇಹಕ್ಕಾದ ದಣುವಿನಿಂದ ಸೋತು ಸುಣ್ಣವಾಗಿದ್ದ ಸಾಶಾ ಫಕ್ಕನೆ ಆದ ನಿರಾಶೆಯ ಧಕ್ಕೆಯಿಂದ ನಿಶ್ಚೇಷ್ಟಿತನಾಗಿ ಬಿದ್ದು ಬಿಟ್ಟನು

ಸಾಶಾನೊಟ್ಟಿಗೆ ಓಡಲಾರದೆ ಸಾವ್ಕಾ ಹಿಂದೆ ಬಿದ್ದಿದ್ದನು. ಸಾಶಾ ಬಿದ್ದುದನ್ನು ನೋಡಿ ಇನ್ನು ಮುಂದರಿಸಿ ಏನೂ ಉಪಯೋಗವಿಲ್ಲೆಂದು ಅವನೂ ತಿಳಿದನು ಹಿಂದಕ್ಕೆ ಓಡಿ ಸಾಶಾ ನೆಲದಲ್ಲಿ ಮೂರ್ಛೆ ತಪ್ಪಿ ಬಿದ್ದಿದ್ದ ಸುದ್ದಿಯನ್ನು ಸಾಶಾನ ತಾಯಿಗೆ ತಿಳಿಸಿದನು.

ಸಾಶಾನ ತಾಯಿ ಗಾಲ್ಯಾ ಹಾಗೂ ಇನ್ನಿಬ್ಬರು ಹೆಂಗಸರು ಹೋಗಿ ಸಾಶಾನನ್ನು ಹೊತ್ತುಕೊಂಡು ಮನೆಗೆ ತಂದು ಮೇಜಿನ ಮೇಲೆ ಮಲಗಿಸಿ ದರು ಗಾಲ್ಯಾಳ ಬೇರೆ ಮಕ್ಕಳು ಸುತ್ತಲೂ ನೆರೆದು ಅಣ್ಣನಿಗೆ ಏನಾಯಿ ತೆಂದು ತಾಯಿಯ ಕೂಡ ಕೇಳಹತ್ತಿದರು " ಏನೂ ಇಲ್ಲ. ಅವನಿಗೆ ನಿದ್ದೆ

ಹತ್ತಿದೆ, ಗದ್ದಲ ಮಾಡಬೇಡಿರಿ" ಎಂತ ಗಾಲ್ಯಾ ಸಮಾಧಾನಪಡಿಸಲು ಯತ್ನಿಸಿದಳು.

"ನಿದ್ದೆ!" ಮಕ್ಕಳು ಆಶ್ಚರ್ಯದಿಂದ ಗಾಲ್ಯಾಳ ಬಾಯಿಯಿಂದ ಬಂದ ಆ ಶಬ್ದವನ್ನೇ ಉಚ್ಚರಿಸಿದರು. ಅದು ಸುಳ್ಳೆಂದು ಅವರಿಗೂ ಸಂಶಯ ಬಂದಿತ್ತು. ಅವಳಲ್ಲಿ ದೊಡ್ಡವಳಾಗಿದ್ದ ಜೀನಾಳಿಗೆ ಹಿರೇ ಅಣ್ಣನಾದ ಮಿಶಾನನ್ನು ಇದೇ ರೀತಿ ತಾಯಿಯು ಹೊತ್ತು ತಂದು ಮೇಜಿನ ಮೇಲೆ ಮಲಗಿಸಿದ್ದರ ನೆನಪಾಯಿತು. ಹಿರೇ ಅಣ್ಣನಂತೆ ಚಿಕ್ಕ ಅಣ್ಣನೂ ಹೋದನೆಂಬ ಭೀತಿಯಿಂದ ಒಂದೇಸವನೆ ಅಳಹತ್ತಿದಳು. ಅವಳು ಅಳುವುದನ್ನು ನೋಡಿ ಇತರ ಮಕ್ಕಳೂ ಅವಳಂತೆಯೇ ಅಳಹತ್ತಿದುವು. ತಾಯಿಯು ಎಷ್ಟೇ ಸಮಾಧಾನಪಡಿಸಿದರೂ ಅವು ಅಳುವನ್ನು ನಿಲ್ಲಿಸಲಿಲ್ಲ

ಮೇಜಿನ ಮೇಲೆ ಮಲಗಿಸಿದ ನಂತರ, ಮೈಮೇಲಿದ್ದ ಒದ್ದೆ ಬಟ್ಟೆಗಳನ್ನು ತೆಗೆದು ಮೈಗೆಲ್ಲಾ ಬಿಸಿನೀರಿನ ಶಾಖವನ್ನು ಕೊಟ್ಟಮೇಲೆಯೇ ಸಾಶಾನಿಗೆ ಪ್ರಜ್ಞೆ ಬಂದಿತು. ಕಣ್ಣು ತೆರೆದವನೇ ಬಳಿಯಲ್ಲಿದ್ದ ರೊಟ್ಟಿ ತುಂಬಿದ ಚೀಲವನ್ನು ನೋಡಿದನು ಅವನ ಕಣ್ಣುಗಳಲ್ಲಿ ನೀರು ತುಂಬಿತು. "ಅವರು ಬರುವ ಮೊದಲು ಅಲ್ಲಿಗೆ ಮುಟ್ಟಲು ಸಾಧ್ಯವಾಗಲಿಲ್ಲವಮ್ಮಾ!" ಎಂದು ಹೇಳುತ್ತಾ ಬಿಕ್ಕಿ ಬಿಕ್ಕಿ ಅಳಹತ್ತಿದನು ಗಾಲ್ಯಾ ಅವನನ್ನು ಸಮಾಧಾನಪಡಿಸುವ ಪ್ರಯತ್ನವೇನೊ ಮಾಡಿದಳು. ಆದರೆ ಮಗನ ಈ ಮಾತುಗಳನ್ನು ಕೇಳಿ ಅವಳ ಕಣ್ಣೆದುರಿನಲ್ಲೂ ಒಂದು ಚೂರು ರೊಟ್ಟಿಗಾಗಿ ಹಾತೊರೆದು ಗುಂಡಿಗೆ ಬಲಿಯಾದ ಆ ಹೊಟ್ಟೆಗಿಲ್ಲದ,ಎಲುಬು-ಗೂಡುಗಳ ದೃಶ್ಯವು ಕಾಣಿಸಹತ್ತಿತು. ಆ ಭೀಕರ ದೃಶ್ಯದೆದುರಿನಲ್ಲಿ ಮಗನು ಬದುಕಿರುವನೆಂಬ ಆನಂದವು ಮಾಯವಾಯಿತು. ಅವಳ ಬಾಯಿಯಿಂದಲೂ ಮಾತುಗಳು ಹೊರಡದಾದುವು. ಹೇಗೂ ಮಾಡಿ ಸಾಶಾನನ್ನು ಸಂತೈಸಿ ಮಲಗುವಂತೆ ಮಾಡಿದಳು. ಅವನು ಚೀಲದಲ್ಲಿ ಹಾಕಿ ಒಯ್ದಿದ್ದ ಶೆಜ್ಜೆ ರೊಟ್ಟಿಗಳನ್ನು ಹೊರಗೆ ತೆಗೆದಳು. ಮಕ್ಕಳಿಗೆ ರಾತ್ರಿಯ ಊಟಕ್ಕಾಗಿ ಮಾಡಿದುವುಗಳನ್ನು ಕೈದಿನಲ್ಲಿರುವ ದೇಶಬಾಂಧವರಿಗಾಗಿ ಕಳಿಸಿದ್ದಳು. ಈಗ ಅವು ನೀರಿನಿಂದ ತೊಯ್ದು ಭಾರವಾಗಿದ್ದುವು. ರೊಟ್ಟಿಗಳನ್ನು

ನೋಡಿದೊಡನೆ ಆ ಉಪವಾಸ ಬಿದ್ದಿದ್ದ ಕೃಶಶರೀರಗಳ ದೃಶ್ಯವು ಪುನಃ ಅವಳ ಕಣ್ಣೆದುರಿಗೆ ಬಂತು ಏನು ಮಾಡಿದರೂ ಆ ದೃಶ್ಯವನ್ನು ಮರೆಯುವುದು ಸಾಧ್ಯವಾಗಲಿಲ್ಲ. ರೊಟ್ಟಿಗಾಗಿ ಕೈಚಾಚಿದಾಗ ಜರ್ಮನರ ಗುಂಡಿಗೆ ಗುರಿಯಾಗಿ ಕೈದಿಗಳು ಸತ್ತು ಬಿದ್ದ ಆ ಸನ್ನಿವೇಶವು ತನ್ನ ಮುದ್ದು ಪಿಃಶಾನ ಮರಣಕ್ಕಿಂತಲೂ ಅವಳಿಗೆ ಭೀಕರವಾಗಿ ತೋರಿತು.

ಭಾರವಾದ ಹೃದಯದಿಂದ ಗಾಲ್ಯಾಳು ರೊಟ್ಟಿಗಳನ್ನು ಮಕ್ಕಳಿಗೆ ಹಂಚಿದಳು. ನೀರಿನಲ್ಲಿ ತೊಯ್ದು ಸಂಪೂರ್ಣವಾಗಿ ರುಚಿ ಕೆಟ್ಟ ಆ ರೊಟ್ಟಿಗಳನ್ನು ಒಂದು ಚೂರು ಕೂಡಾ ಹಾಳುಮಾಡದೆ ಆತುರದಿಂದ ಮಕ್ಕಳು ತಿನ್ನುವುದನ್ನು ನೋಡಿ ಗಾಲ್ಯಾಳಿಗೆ ಅಶ್ರುಧಾರೆಯು ಉಕ್ಕೇರಿ ಬಂದಿತು. ಈ ನರಕಯಾತನೆಯು ಮುಗಿಯುವುದೆಂತು ? ಜರ್ಮನರು ಈ ಊರನ್ನು ಆಕ್ರಮಿಸಿ ಒಂದು ತಿಂಗಳು ಮಾತ್ರವೇ ಕಳೆದಿತ್ತು. ಆದರೆ ತಿಂಗಳ ಒಂದೊಂದು ದಿನವೂ ಒಂದೊಂದು ಯುಗದಂತೆ ಅನಿಸುತ್ತಿತ್ತು. ಸಾಂಘಿಕ ಕೃಷಿಕ್ಷೇತ್ರದಲ್ಲಿ ದುಡಿಯುವ ಅವರು ಎಷ್ಟೋ ರೀತಿಯ ದಿನಗಳನ್ನು ಕಳೆದಿದ್ದರು. ಬಿತ್ತನೆಯ ದಿನಗಳು, ಸುಗ್ಗಿಯ ದಿನಗಳು, ಗೊಬ್ಬರವನ್ನು ಕೂಡಿಡುವ ದಿನಗಳು, ಕಠಿಣ ಚಳಿಯ ದಿನಗಳು, ಭಯಂಕರ ಹಿಮಗಾಳಿಯ ದಿನಗಳು, ಎಲ್ಲವೂ ಸರಾಗವಾಗಿ ತಿಂಗಳುಗಳಲ್ಲಿ ಸೇರಿ ತಿಂಗಳುಗಳು ವರ್ಷಗಳಲ್ಲಿ ಬೆರೆತು ಜೀವನಪ್ರವಾಹವು ಸುಲಭವಾಗಿ ಸುಖಮಯವಾಗಿ ಹರಿಯುತ್ತಿತ್ತು. ಆದರೆ ಈ ಒಂದೇ ಒಂದು ತಿಂಗಳಲ್ಲಿ ಎಂದೂ ಎಣಿಸದ, ಎಂತಹ ಕಲ್ಪನೆಗೂ ಎಟುಕದ ನಾನಾ ರೀತಿಯ ಚಿತ್ರಹಿಂಸೆ ಹಾಗೂ ಸಂಕಷ್ಟಗಳನ್ನು ಅವಳೂ ಊರವರೂ ಅನುಭವಿಸಿದ್ದರು ಒಂದು ತಿಂಗಳಿನ ಅನುಭವಗಳ ವಿಚಾರವು ಮನಸ್ಸಿನಲ್ಲಿ ಬಂದಾಗಲೆಲ್ಲ ಅವು ಸೃಷ್ಟಿ ನಿಯಮಗಳಂತೆ ಅನಾದಿ, ಅನಂತವೂ ಎಂಬಂತೆ ಅನಿಸುತ್ತಿತ್ತು.

ಹೃದಯದ ಉದ್ವೇಗವನ್ನು ಸಹಿಸಲಾರದೆ ಗಾಲ್ಯಾ ಸಾಶಾನು ಮಲಗಿದ್ದೆಡೆಗೆ ಹೋದಳು. ತಣ್ಣಗೆ ಮಲಗಿದ್ದ ಅವನು ದೇಹದ ದಣುವನ್ನೂ ಮನಸ್ಸಿನ ದುಃಖವನ್ನೂ ನಿದ್ರಾದೇವಿಯ ಆಲಿಂಗನದಲ್ಲಿ ಮರೆತಿದ್ದನು. ಗಾಲ್ಯಾಳು ತುಸು ಹೊತ್ತು ಅವನ ಕೋಮಲ ಮುಖವನ್ನು ನೋಡುತ್ತಾ

ನಿಂತಳು. ಇಂತಹ ಮುದ್ದು ಬಾಲಕನಿಗೆ ಭವಿತವ್ಯವು ಏನನ್ನು ತಾನೇ ಕೊಡುವುದು? ಜರ್ಮನ ಗುಲಾಮಗಿರಿಯ ಪಶುಜೀವನವನ್ನೊ ಅಥವಾ ಸ್ವಾತಂತ್ರ್ಯದ ಸುಖಜೀವನವನ್ನೊ ?

ಗಾಲ್ಯಾಳ ಕಣ್ಣೀರಿನ ಬಿಸಿ ಹನಿಗಳೆರಡು ಸಾಶಾನ ಮೋರೆಯ ಮೇಲೆ ಬಿದ್ದುವು. ಅವನು ಫಕ್ಕನೆ ಎಚ್ಚತ್ತು ತನ್ನ ತಾಯಿಯನ್ನು ನೋಡಿದನು. ಅವಳ ಮುಖವು ಯಾವುದೊ ದೂರದ ವಿಚಾರದಲ್ಲಿ ಮಗ್ನವಾಗಿದ್ದಂತೆ ಅವನಿಗೆ ಅನಿಸಿತು. "ಏನು ಯೋಚಿಸುತ್ತಿರುವೆ ಅಮ್ಮಾ?" ಅಂತ ಕೇಳಿದನು.

"ಏನು ಇಲ್ಲ, ಮಗು. ನಮ್ಮವರು ಮರಳಿ ಬರುವ ದಿನದ ಕುರಿತು ಯೋಚಿಸುತ್ತಿದ್ದೆ."

"ನಮ್ಮ ಜನರು ಇಲ್ಲಿಗೆ, ನಮ್ಮೂರಿಗೆ ಬರುವರೇ?"

"ಹೌದು ಮಗು."

"ಅಪ್ಪನೂ ಬರುವನೇ?"

"ಹೌದು, ಅಪ್ಪನೂ ಬರುವನು."

"ಎಲ್ಲವೂ ಮೊದಲಿನಂತೆಯೇ ಆಗುವುದೇನು, ಅಮ್ಮಾ?"

"ಹೌದು ಮಗು. ಮೊದಲಿನಂತೆಯೇ ಎಲ್ಲವೂ ಆಗುವುದು. ಮೊದಲಿಗಿಂತ ಚೆನ್ನಾಗಿಯೇ ಆಗುವುದು."

ಗಾಲ್ಯಾ ಪುನಃ ಯೋಚಿಸತೊಡಗಿದಳು. ಮೊದಲಿನಂತೆಯೇ ಎಲ್ಲವೂ ಆಗುವುದೇ? ಬೇರೆಲ್ಲಾ ಮೊದಲಿನಂತಾದರೂ ಅವಳ ಮುದ್ದು ಮಿಶಾ ತಿರುಗಿ ಬರಲಾರನು. ಊರ ನಡುವಿನ ಚೌಕದಲ್ಲಿ ಗಲ್ಲಿಗೇರಿಸಲ್ಪಟ್ಟಿದ್ದ ವಾಸ್ಯಾ ಹಿಂದಿನಂತೆ ನಾಟಕ ಮಾಡಿ ಜನರ ಮನರಂಜನವನ್ನು ಮಾಡಲಾರನು

ಈ ಯುದ್ಧದಲ್ಲಿ ಎಷ್ಟೊ ಜನರು ಪ್ರಾಣವನ್ನು ಅರ್ಪಿಸಬೇಕಾಗುವುದು. ಎಷ್ಟೊ ಜನರು ತಮ್ಮವರನ್ನು ಕಳಕೊಳ್ಳಬೇಕಾಗುವುದು. ಆದರೆ ಜನಜೀವನವು ಪ್ರಗತಿಪಥದಲ್ಲಿ ಮುಂದೆ ಸಾಗುವುದೆಂಬುದರಲ್ಲಿ ಸಂದೇಹ

ವಿರಲಿಲ್ಲ. ಧೈರ್ಯ, ಸಹನೆ ಹಾಗೂ ದಬ್ಬಾಳಿಕೆಗೆ ಬಗ್ಗದಿರುವ ಮನೋನಿರ್ಧಾರ, ಇವಿಷ್ಟಿದ್ದರೆ ಸರಿ, ನಮ್ಮ ಜನತೆಯು ಜರ್ಮನ ಆಕ್ರಮಣವನ್ನು ಹಿಮ್ಮೆಟ್ಟಿಸಿ ಇತಿಹಾಸದಲ್ಲೇ ಉಜ್ವಲವಾದ ಭವಿತವ್ಯವನ್ನು ಬರೆಯುವುದೆಂಬುದು ಎಂದೆಂದಿಗೂ ನಿಜವಾಗಿತ್ತು.

## ೧೧

ಫೆಡೋಸ್ಯಾ ಕ್ರೆವಚುಕಳು ನಿದ್ದೆಯಿಂದ ಥಟ್ಟನೆ ಎದ್ದಳು ಯಾರೊ ಬಂದು ಮೈಯನ್ನು ಜೋರಾಗಿ ಅಲ್ಲಾಡಿಸಿದಂತೆ ಅವಳಿಗೆ ಭಾಸವಾಯಿತು.

ಆ ರಾತ್ರಿ ಬಹಳ ಹೊತ್ತು ಅವಳು ನಿದ್ದೆ ಬಾರದೆ ಹಾಸಿಗೆಯಲ್ಲಿ ಸುಮ್ಮನೆ ಹೊರಳಾಡುತ್ತಿದ್ದಳು. ಹೀಗೆ ಹೊರಳಾಡುತ್ತಿರುವಾಗ ಒಮ್ಮೆಗೆಲೆ ಗಾಢ ನಿದ್ದೆ ಹತ್ತಿತ್ತು. ಅಂತಹ ನಿದ್ದೆಯಲ್ಲಿದ್ದಾಗಲೇ ಯಾರೊ ಎಬ್ಬಿಸಿದಂತಾಯಿತು.

ಬಾಗಿಲನ್ನು ಯಾರೂ ತಟ್ಟಿಲಿಲ್ಲ. ಎಲ್ಲಾ ನಿಶ್ಯಬ್ದವಾಗಿತ್ತು. ಎದ್ದು ಕೂತು ನಾಲ್ಕೂ ಕಡೆಗೂ ನೋಡಿದಳು ಏನೂ ಕಾಣಿಸಲಿಲ್ಲ. ಕೆಪ್ಟನ್ ಕರ್ಟ ವಾರ್ನರನು ಆ ರಾತ್ರಿ ಆಫೀಸಿನಿಂದ ಮನೆಗೆನೇ ಬಂದಿರಲಿಲ್ಲ. ಹಾಗಾಗಿ ನಿತ್ಯ ಕೇಳಿಸುತ್ತಿದ್ದ ಅವನ ಎಡೆಬಿಡದ ಗೊರಕೆಯೂ ಅಂದು ಕೇಳಿಸುತ್ತಿದ್ದಿಲ್ಲ.

ನಿದ್ದೆಯ ಅಮಲಿನಿಂದ ಕಣ್ಣುಗಳು ಭಾರವಾಗಿದ್ದರೂ ಫೆಡೋಸ್ಯಾ ಪುನಃ ಮಲಗಲಿಲ್ಲ. ತನ್ನನ್ನು ಎಬ್ಬಿಸಿದವರಾರೆಂದು ತಿಳಿಯಲು ಕಿವಿಗಳನ್ನು ಸೂಕ್ಷ್ಮ ಮಾಡಿ ಸುತ್ತಲೂ ನೋಡಿದಳು. ಹಿಂದಿನ ರಾತ್ರಿಯಂತೆ ಅಂದು ಮೋಡಗಳಾಗಲಿ ಹಿಮವೃಷ್ಟಿಯಾಗಲಿ ಇರಲಿಲ್ಲ ಶುಭ್ರವಾದ ಅಂತರಿಕ್ಷದಲ್ಲಿ ಚಂದ್ರಬಿಂಬವು ನಿಧಾನವಾಗಿ ತೇಲುತ್ತಲಿತ್ತು.

ಒಂದು ಸಣ್ಣ ಸದ್ದಾಯಿತು. ಕೊರಳಿನಿಂದ ಹೊರಟ ಮೊರೆಯು ಹೊರಗೆ ಬರಲಾರದೆ ಹೊರಟಲ್ಲಿಗೆನೇ ಹಿಂದಿರುಗಿದಂತಹ ಸ್ವರವೊಂದು ಕಾವಲಿನವನು ಪಹರೆ ಮಾಡುತ್ತಿದ್ದ ಸ್ಥಳದಿಂದ ಕೇಳಿಸಿತು. ಫೆಡೋಸ್ಯಾ ಥಟ್ಟನೆ

ಎದ್ದು ಹೊರಗೆ ಬಂದಳು. ತಿಳಿಯಾದ ಬೆಳದಿಂಗಳಿನಲ್ಲಿ ನೆಲದ ಮೇಲೆ ಕಾಣುತ್ತಿದ್ದ ಕರಿನೆರಳು ಯಾರೊ ಬಂದಿದ್ದಾರೆಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತಿತ್ತು

"ಯಾರಲ್ಲಿ ?" ಆಗಂತುಕರಲ್ಲೊಬ್ಬ ಕೇಳಿದನು. ಈ ಪ್ರಶ್ನೆ ಕೇಳುವ ಅವಶ್ಯಕತೆ ಫೆಡೋಸ್ಯಾಳಿಗೆ ಇರಲಿಲ್ಲ. ಬಂದವರಾರೆಂದು ಅವಳಿಗೆ ಹೊರಗೆ ಬಂದಾಗಲೇ ಗೊತ್ತಾಗಿತ್ತು.

"ನಾನು, ಮನೆಯ ಹೆಂಗಸು" ಅವಳು ಮೆಲ್ಲಗೆ ಉಸುರಿದಳು. "ಸದ್ದು ಮಾಡಬೇಡಿರಿ, ಮಕ್ಕಳೇ, ಕೆಪ್ಪನನು ಇಲ್ಲಿ ಇಲ್ಲ ಆಫೀಸಿನಲ್ಲೇ ಇರಬೇಕು." ಅಷ್ಟರೊಳಗೆ ಆಗಂತುಕರು ಮನೆಯೊಳಗೆ ಬಂದಿದ್ದರು.

"ಇಲ್ಲವೇನು ಅವನಿಲ್ಲಿ ? ಹಾಗಿದ್ದರೆ, ನಾವು ಇಲ್ಲಿ ವಿಳಂಬ ಮಾಡಲು ಕಾರಣವಿಲ್ಲ. ನಡೆಯಿರೊ, ಕೆಪ್ಪನನ ಕಚೇರಿಗೆ"

"ತಡೆಯಿರಿ," ಫೆಡೋಸ್ಯಾ ಅಂದಳು. "ಅವಳು ಇದ್ದಾಳೆ ಇಲ್ಲಿ."

"ಅವಳು ಅಂದರೆ ಯಾರು ?"

"ಕೆಪ್ಪನನು ಇಟ್ಟುಕೊಂಡವಳು."

"ನಮಗೆ ಹೆಂಗಸರ ಉಸಾಬರಿ ಈಗ ಬೇಡ. ಈ ಜರ್ಮನ ಹೆಂಗಸನ್ನು ಏನು ಮಾಡುವುದೆಂದು ನಾಳೆ ನೋಡೋಣವಂತೆ."

"ಅವಳು ಜರ್ಮನಳಲ್ಲ. ನಮ್ಮವಳೇ."

"ಹಾಗೇನು ? ಅಂದರೆ ಪ್ರಶ್ನೆ ಬೇರೆ. ಎಲ್ಲಿದ್ದಾಳೆ ಅವಳು ?"

"ಕೋಣೆಯಲ್ಲಿ ಮಲಗಿದ್ದಾಳೆ."

ಬಂದವರ ನಾಯಕನು ಮುಖದಲ್ಲಿ ಕಾಠಿಣ್ಯವನ್ನು ತಂದುಕೊಂಡನು.

"ನೋಡೋಣ ಅವಳನ್ನು ಅಜ್ಜಿ, ಒಂದು ದೀವಿಗೆ ಕೊಡುವೆಯಾ ?"

"ಪಹರೆಯವನು ನೋಡಿದರೆ ?"

"ಪಹರೆಯವನಾರೂ ಇಲ್ಲ ಈಗ ಅಜ್ಜಿ."

"ಸರಿ ಹಾಗಿದ್ದರೆ ಹಚ್ಚುವೆ ದೀಪ."

ಉತ್ಸಾಹ, ಆನಂದಗಳಿಂದ ಅವಳ ದೇಹವಿಡೀ ಕಂಪಿಸುತ್ತಿತ್ತು. ನಡುಗುವ ಕೈಗಳಿಂದ ಕಡ್ಡಿಪೆಟ್ಟಿಗೆಯನ್ನು ಹುಡುಕಹತ್ತಿದಳು. ಆದರೆ

ಅದು ಸಿಗುವ ಮೊದಲೇ ಬಂದವರಲ್ಲೊಬ್ಬನು ಅವಳಿಗೆ ಒಂದನ್ನು ಕೊಟ್ಟನು. ದೀಪ ಹೊತ್ತಿಸುವಾಗ ಫೆಡೋಸ್ಯಾಳಿಗೆ ಜಾಮೀನಿಗಾಗಿ ಬಂಧಿತರಾದವರ ನೆನಪಾಯಿತು. "ನಮ್ಮ ಪೈಕಿ ಐದು ಮಂದಿಯನ್ನು ಕೆಪ್ಪನನ ಆಫೀಸಿನಲ್ಲಿ ಬಂಧಿಸಿದ್ದಾರೆ. ಜಾಮೀನಿಗಾಗಿ. ಅವರನ್ನು ನಾಳೆಯೇ ಗಲ್ಲಿಗೇರಿಸುವವರಿದ್ದಾರೆ" ಅಂತ ಹೇಳಿದಳು

"ಯೋಚನೆ ಬೇಡ ಅಜ್ಜಿ. ನಮ್ಮವರು ಅಲ್ಲಿ ಈಗಾಗಲೇ ಹೋಗಿದ್ದಾರೆ. ಕೆಪ್ಪನನನ್ನು ಸುದ್ದಿ ಇಲ್ಲದೆ ಸುಲಭವಾಗಿ ಮುಗಿಸಬೇಕೆಂದು ನಾವು ಇಲ್ಲಿಗೆ ಬಂದೆವು" ಅವರ ನಾಯಕನೆಂದನು.

ಬಾಗಿಲನ್ನು ಮೆಲ್ಲಗೆ ತೆರೆದು ಬಂದವರಿಗೆ ದೀಪವನ್ನು ತೋರಿಸುತ್ತಾ ಫೆಡೋಸ್ಯಾ ಅವರನ್ನು ಕೆಪ್ಪನನ ಶಯ್ಯಾಗಾರಕ್ಕೆ ಕರೆದೊಯ್ದಳು ಒಳಗೆ ತಲುಪಿದ ಮೇಲೆ ಹಾಸಿಗೆಯು ಸರಿಯಾಗಿ ಕಾಣುವಂತೆ ದೀಪವನ್ನು ಮೇಲಕ್ಕೆತ್ತಿದಳು.

ಪುಸ್ಯಾ ಕಣ್ಣು ತೆರೆದಳು. ಹಾಗೂ ಕರ್ಟನು ಬಂದನೆಂದೆಣಿಸಿ ಏನೊ ಗುಣುಗುಟ್ಟಿ ಪುನಃ ಮಲಗಲು ಮೈ ತಿರುಗಿಸಿದಳು ಬಂದವರ ನಾಯಕನು ಫೆಡೋಸ್ಯಾಳ ಕೈಯಿಂದ ದೀಪವನ್ನು ತಕ್ಕೊಂಡು ಹಾಸಿಗೆಯ ತೀರ ಹತ್ತಿರಕ್ಕೆ ಹೋದನು ಪುಸ್ಯಾಳ ಮುಖವನ್ನು ದಿಟ್ಟಿಸಿ ನೋಡಿ "ಇವಳೇ ಏನು ಕೆಪ್ಪನನ ಪ್ರೇಯಸಿ?" ಎಂದು ಫಕ್ಕನೆ ಪ್ರಾಪ್ತವಾದ ದುಃಖ ಹಾಗೂ ಆಶ್ಚರ್ಯದ ತೀಕ್ಷ್ಣ ಭಾವನೆಯಿಂದ ಕೇಳಿದನು.

ಪುಸ್ಯಾ ಕಣ್ಣು ತೆರೆದು ನೋಡಿದಳು ಅವಳ ಗಂಡ ಸೆರ್ಡ್ಯಾಜಾ ಅವಳ ಮುಂದೆ ನಿಂತಿದ್ದನು. ಅವಳ ಹೃದಯಕ್ರಿಯೆ ಸ್ತಂಭಿತವಾಯಿತು ರಕ್ತವು ಹೆಪ್ಪುಗಟ್ಟಿತು. ದಾರುಣವಾದ ಭೀತಿಯು ಅವಳನ್ನು ಆವರಿಸಿ, ಲೆವೊನ್ಯಾಕ ಫೆಡೋಸ್ಯಾ, ಒಲೆನಾ, ಇವರೆಲ್ಲರೂ ಅನುಭವಿಸಿದ ನರಕಯಾತನೆಯನ್ನು ಅವಳು ಒಂದೇ ನಿಮಿಷದಲ್ಲಿ ಅನುಭವಿಸಿದಳು.

ತಾನು ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸಿದ್ದ ತನ್ನ ಪ್ರಿಯ ಪತ್ನಿಯು ಜರ್ಮನ ನಾಯಿಯ ಸೂಳೆಯಾದ ದೃಶ್ಯವನ್ನು ಕಣ್ಣೆನಿಂದ್ದಲೇ ಕಂಡ ಸೆರ್ಡ್ಯಾಜಾನೂ ಕ್ಷಣಕಾಲ ಕಲ್ಲಿನಂತೆ ನಿಂತನು. ಸ್ವಪ್ನಸೃಷ್ಟಿಯಲ್ಲೂ

ಅಸಂಭವವಾದ ಈ ಘಟನೆಯ ಪ್ರತ್ಯಕ್ಷ ಅನುಭವದಿಂದ ಅವನು ಏನು ಮಾಡುವುದೆಂದು ತೋಚದೆ ತುಸು ಹೊತ್ತು ಹಾಗೆಯೇ ನೋಡಿದನು. ಆದರೆ ಭಾವನಾಪರವಶನಾಗುವ ಪರಿಸ್ಥಿತಿಯು ಆಗ ಇರಲಿಲ್ಲ ಅವನಿಗೆ ತಿಳಿಯದಂತೆ ಸಹಜವಾಗಿ ಅವನ ಕೈಯು ಪಿಸ್ತೂಲಿನ ಕುದುರೆಯ ಕಡೆಗೆ ಹೋಯಿತು. ಅವಳ ತುಚ್ಛ ವರ್ತನೆಯು ಇತರರಿಗೆ ತಿಳಿಯುವ ಮೊದಲೇ ಅವಳನ್ನು ಇಹಲೋಕದಿಂದ ಕಳಿಸುವುದೇ ಅವಳಿಗೆ ಅತ್ಯಂತ ದಯಾಪೂರ್ಣ ಶಾಸನವಾಗಿತ್ತು ತನಗೆ ಚಿರಪರಿಚಿತವಾದ ಸುಂದರ ಕಣ್ಣುಗಳನ್ನು ಸೆರ್ಗ್ಯೊಜಾನು ಕೊನೆಯ ಸಾರೆ ನೋಡಿದನು. ಅಲ್ಲಿಗೇನೆ ಗುರಿಯಿಟ್ಟು ಕುದುರೆಯನ್ನು ಎಳೆದನು. ತನ್ನ ಹಾಗೂ ಅವಳ ಮಾನವನ್ನುಳಿಸಲು ಅದೊಂದೇ ದಾರಿಉಳಿದಿತ್ತು.

"ತಡಮಾಡಬೇಡಿರಿ. ಇನ್ನು ಕೆಪ್ಟನನ ಆಫೀಸಿಗೆ ನೆಟ್ಟಗೆ" ಎಂದು ಸೆರ್ಗ್ಯೊಜಾ ತನ್ನ ಸೈನಿಕರಿಗೆ ಆಜ್ಞೆ ಇತ್ತನು. ಹಾಗೂ ಎಲ್ಲರೂ ಅಲ್ಲಿಗೆ ಧಾವಿಸಿದರು.

ಸೆರ್ಗ್ಯೊಜಾನ ದಳವು ಕೆಪ್ಟನನನ್ನು ಹುಡುಕಿ ಫೆಡೋಸ್ಯಾಳ ಮನೆಗೆ ಹೋದ ಸಮಯದಲ್ಲಿ ಇನ್ನೊಂದು ದಳವು ಊರ ಹೊರಗಿನ ತೋಪು ಖಾನೆಯ ಮೇಲೆ ಬಿದ್ದು ಏನಾಯಿತೆಂದು ಗೊತ್ತಾಗುವ ಮೊದಲೇ ಅಲ್ಲಿದ್ದ ಜರ್ಮನ ಸೈನಿಕರ ಸಮಾಚಾರ ತಗೊಂಡು ಅವರನ್ನು ಯಮಸದನಕ್ಕೆ ಕಳಿಸಿತ್ತು.

ಅಂದು ರಾತ್ರಿ ಕೇಂದ್ರಕಚೇರಿಯಿಂದ ಧ್ವನಿಯಂತ್ರದ ಕರೆ ಬರುವ ಸಂಭವವಿದ್ದುದರಿಂದ ಕೆಪ್ಟನ್ ಕರ್ಟ ವಾರ್ನರನು ಮನೆಗೆ ಹೋಗಲಿಲ್ಲ. ಆಫೀಸಿನಲ್ಲೇ ಕುಳಿತಿದ್ದನು. ಆದರೆ ನಡುರಾತ್ರಿ ಕಳೆದರೂ ಕರೆ ಬಂದಿದ್ದಿಲ್ಲ. ಕಾದು ಕಾದು ಅಲ್ಲೇ ನಿದ್ದೆ ಹತ್ತಿತು. ನಿದ್ದೆಯ ಜೊಂಪಿನಲ್ಲಿರುವಾಗಲೇ ಅವನಿಗೆ ಪ್ರಾರಂಭದ ಗುಂಡಿನ ಶಬ್ದ ಕೇಳಿಸಿತು. ಯಾರೊ ಊರವರು ಪುನಃ ತಮ್ಮ ಆಜ್ಞೆಯನ್ನು ಉಲ್ಲಂಘಿಸಿ ರಾತ್ರಿ ಹೊರಗೆ ಬಂದಿರಬೇಕು ಎಂತ ಎಣಿಸಿದನು. ಎಷ್ಟೇ ಗುಂಡಿಕ್ಕಿದರೂ ಕಾಯಿದೆಭಂಗವು ನಡೆಯುತ್ತಲೇ

ಇದ್ದ ವಿಷಯವು ಅವನನ್ನು ಇನ್ನಷ್ಟೂ ಕೆರಳಿಸಿತು. ಆದರೆ ಆ ಗುಂಡು ಕಾಯಿದೆಭಂಗ ಮಾಡಿದ ಗ್ರಾಮಸ್ಥರ ಮೇಲೆ ತಮ್ಮ ಸಿಪಾಯಿ ಹಾರಿಸಿದ ಗುಂಡಾಗಿರದೆ ರಶ್ಯನರು ತನ್ನ ಪ್ರೇಯಸಿಗೆ ಕೊಟ್ಟ ದೇಹಾಂತ ಶಿಕ್ಷೆಯ ಗುಂಡೆಂಬುದು ಅವನಿಗೆಲ್ಲಿಂದ ತಿಳಿಯಬೇಕು!

ತಮ್ಮ ಅಧಿಕಾರವನ್ನು ತೃಣೀಕರಿಸುತ್ತಿದ್ದ ಈ ಊರವರಿಗೆ ಏನಾದರೂ ಹೊಸ ಶಾಸನ ಮಾಡಲಿಕ್ಕೇಬೇಕೆಂಬ ವಿಚಾರದಲ್ಲಿ ಕರ್ಟನು ತೊಡಗಿದನು ಅಷ್ಟರೊಳಗೆ ಒಂದು, ಎರಡು, ಮೂರು, ಹೀಗೆ ಒಂದೇ ಸವನೆ ಗುಂಡಿನ ಶಬ್ದ ಕೇಳಿಸಿತು. ಕರ್ಟನ ಅಧಿಕಾರದ ಭ್ರಮೆಯು ದೂರವಾಯಿತು. ಒಡನೆ ಮಲಗಿದ್ದ ಮಂಚದಿಂದ ಕೆಳಗೆ ಹಾರಿದನು. ಅದೇ ಕಾಲಕ್ಕೆ ಫೀಲ್ಡ್‌ವೆಬೆಲನೂ ಅಲ್ಲಿದ್ದ ಇತರ ಸಿಪಾಯಿಗಳೂ ಎದ್ದರು. ಹೊರಗೆ ಪಹರೆ ಮಾಡುತ್ತಿದ್ದ ಸಿಪಾಯಿಗಳು ಒಳಗೆ ಬಂದು ಉಸುರಿದರು. "ಊರೊಳಗೆ ಬೊಲ್ಶೆವಿಕರು ನುಗ್ಗಿದ್ದಾರೆ"

"ಎಷ್ಟು ಜನರಿದ್ದಾರೆ?" ಕರ್ಟನು ಆತುರದಿಂದ ಕೇಳಿದನು.

"ಎಷ್ಟೆಂದು ಗೊತ್ತಿಲ್ಲ. ಸುತ್ತಲಿಂದಲೂ ಗುಂಡು ಹಾರಿಸುತ್ತಾರೆ. ಎಲ್ಲಾ ಕಡೆಗಳಿಂದ ನುಗ್ಗಿರಬೇಕು ಒಳಗೆ"

"ಗ್ಯುರಿಲ್ಲಾಗಳೊ?"

"ಅಲ್ಲ, ಪಕ್ಕಾ ದಂಡಿನವರೇ."

ಕರ್ಟನು ಹಲ್ಲು ಕಚ್ಚಿದನು.

"ಕೇಂದ್ರಕಚೇರಿಯನ್ನು ಕರೆ, ಅವರಿಗೆ ತಿಳಿಸೋಣ."

ಸಿಪಾಯಿಯು ಧ್ವನಿಯಂತ್ರದೆಡೆಗೆ ಹೋದನು. ಆದರೆ ಕ್ಷಣಾರ್ಧದಲ್ಲಿ ಮರುಳಿದನು: "ಕೆಪ್ಟನ್‌ಸಾಹೇಬ, ಧ್ವನಿಯಂತ್ರ ನಡೆಯುವುದಿಲ್ಲ."

"ಕುನ್ನಿಮಕ್ಕಳು ತಂತಿ ಕಡಿದಿರಬೇಕು!" ಎಂದು ಹೇಳಿ ಕರ್ಟನು ಇನ್ನೊಮ್ಮೆ ಹಲ್ಲು ಕಚ್ಚಿದನು. "ಮುಂಜಾನೆ ವರೆಗೆ ನಾವು ಹೇಗಾದರೂ ಮಾಡಿ ಅವರನ್ನು ತಡೆಹಿಡಿಯೋಣ ಬೆಳಕಾದೊಡನೆ ನಮಗೆ ಸಹಾಯ ಬರಬಹುದು."

ಕರ್ಟಿನ ಕಚೇರಿಯನ್ನು ರಕ್ಷಿಸಲು ಯೋಗ್ಯವಾಗುವಂತೆ ಭದ್ರಪಡಿಸಿದ್ದರು. ಬಾಗಿಲುಗಳಿಗೆ ದಪ್ಪವಾದ ಕಬ್ಬಿಣದ ತಗಡುಗಳನ್ನು ಹೊಡೆದಿದ್ದರು. ಗೋಡೆಗಳ ಸುತ್ತಲೂ ಒಳಗಡೆ ಉಸುಬು ತುಂಬಿದ ಚೀಲಗಳನ್ನು ಇಟ್ಟಿದ್ದರು. ಗೋಡೆಗಳಲ್ಲಿ ಅಲ್ಲಲ್ಲಿ ಕೋವಿಯ ನಳಿಗೆಗಳನ್ನಿಡಲು ತೂತುಗಳನ್ನು ಮಾಡಿದ್ದರು.

ಸೆರ್ಗ್ಯೋಚಾನ ದಳವು ಜರ್ಮನರ ಕಚೇರಿಗೆ ತಲುಪುವ ಮೊದಲೇ ಲೆಫ್ಟಿನೆಂಟ ಶೆಲೊವನ ಕೈಕೆಳಗಿದ್ದ ಮುಖ್ಯ ದಳವು ಕಚೇರಿಯನ್ನು ಸುತ್ತು ಹಾಕಿ ಅದನ್ನು ಸ್ವಾಧೀನಪಡಿಸಿಕೊಳ್ಳುವ ಪ್ರಯತ್ನದಲ್ಲಿತ್ತು. ಆದರೆ ಒಳಗಿನಿಂದ ಒಂದೇ ಸವನೆ ಮದ್ದು ಗುಂಡುಗಳ ಬೆಂಕಿಯ ಮಳೆಯೇ ಬೀಳುತ್ತಿದ್ದುದರಿಂದ ಆ ಕಾರ್ಯವು ಅವರಿಗೆ ಸುಲಭವಾಗಲಿಲ್ಲ

ಈಗ ಆ ಊರಿನ ನಾಲ್ಕು ಬೀದಿಗಳಿಂದ ಗುಂಡಿನ ಸಪ್ಪಳ ಕೇಳಿಸಿತು. ಊರನ್ನು ಸೇರಿದೊಡನೆ ಕವಲೊಡೆದ ರಶ್ಯನ ಸೈನ್ಯದ ದಳಗಳು ಅಲ್ಲಲ್ಲಿ ಜರ್ಮನರನ್ನು ಬಲಾತ್ಕಾರದಿಂದ ಹೊರಹೊರಡಿಸಿದ್ದ ಮನೆಗಳನ್ನೆಲ್ಲಾ ನುಗ್ಗಿ ಅಲ್ಲಿದ್ದ ವೈರಿಗಳ ಸಮಾಚಾರ ತಕ್ಕೊಳ್ಳುತ್ತಿದ್ದರು.

"ನೋಡಿರಿ, ಹುಡುಗರೆ, ಒಬ್ಬ ವೈರಿಯೂ ನಮ್ಮ ಕೈಯಿಂದ ತಪ್ಪಬಾರದು, ನೆನಪಿರಲಿ." ಎಂತ ಲೆಫ್ಟಿನೆಂಟ ಶೆಲೊವನು ಊರನ್ನು ಪ್ರವೇಶಿಸುವಾಗಲೇ ಹೇಳಿದ್ದನು.

ಅನಿರೀಕ್ಷಿತವಾದ ಈ ಘಟನೆಯಿಂದ ಜರ್ಮನರಿಗೆ ದಿಕ್ಕೇ ತೋಚಲಿಲ್ಲ. ತಮ್ಮ ಸೈನಿಕರನ್ನು ಊರಿನ ಬೇರೆ ಬೇರೆ ಮನೆಗಳಲ್ಲಿ ಹಂಚಿ ಹಾಕಿದ್ದರಿಂದ ಪಹರೆಯವರನ್ನು ಬಿಟ್ಟು ಉಳಿದ ಎಲ್ಲರೂ ಆ ವೇಳೆಯಲ್ಲಿ ಗಾಢ ನಿದ್ದೆಯಲ್ಲಿದ್ದರು. ರಶ್ಯನರು ಊರೊಳಗೆ ಪ್ರವೇಶಿಸಿದ್ದ ಸುದ್ದಿ ತಿಳಿದೊಡನೆ ಕೆಲವರು ಹಾಸಿಗೆಗಳಿಂದೆದ್ದು ಅರೆ ಉಡುಪಿನಲ್ಲೇ ಮನೆ ಬಿಟ್ಟು ಓಡಿದರು. ಬಾಕಿ ಕೆಲವರು ತಾವಿದ್ದ ಮನೆಗಳಲ್ಲೇ ಕೋವಿ, ಮಶಿನ್‌ಗನ್‌ಗಳನ್ನು ಕೈಯಲ್ಲಿ ತಗೊಂಡು ಹತ್ತಿರ ಬರುವವರ ಮೇಲೆ ಒಂದೇ ಸವನೆ ಗುಂಡು ಹಾರಿಸಿ ಯಾರೂ ಹತ್ತಿರ ಬರದಂತೆ ಮಾಡುವ ಯತ್ನದಲ್ಲಿದ್ದರು.

ರಸ್ತೆಯಲ್ಲೆಲ್ಲಾ ಸಿಕ್ಕಾಬಟ್ಟೆ ಓಡುವ ಜರ್ಮನರೂ ಅವರ ಠಾಣ್ಯಗಳನ್ನು ಹುಡುಕುತ್ತ ಅಡ್ಡಾಡುವ ರಶ್ಯನರೂ ಕಣ್ಣಿಗೆ ಬೀಳುತ್ತಿದ್ದರು. ಊರಿನ ಹೆಂಗಸರೂ ಹಸುಳೆಗಳೂ ಎಲ್ಲರೂ ಹೊರಬಿದ್ದು ಅಡಗಿದ್ದ ಜರ್ಮನರ ಸ್ಥಾನಗಳನ್ನು ತಮ್ಮ ಸೈನಿಕರಿಗೆ ತೋರಿಸುತ್ತಿದ್ದರು

ಪೆಲ್ಗೋರಿಕಾಳ ಮನೆಯು ಜರ್ಮನ ಸೈನಿಕರ ಠಾಣ್ಯಗಳ ಪೈಕಿ ಒಂದಾಗಿತ್ತು. ಅಲ್ಲಿ ಆರು ಜರ್ಮನರು ಬೀಡು ಮಾಡಿದ್ದರು. ಯಾವಾಗಲೂ ಕ್ಷೋಭೆಗೆ ಕಾರಣವಾದ ಈ ವಿಷಯವು ಇಂದು ಪೆಲ್ಗೋರಿಕಾಳಿಗೆ ಆನಂದವನ್ನುಂಟುಮಾಡಿತು ಒಬ್ಬ ಕೆಂಪು ಸೈನಿಕನ ಅಂಗಿಯನ್ನು ಹಿಡಿದೆಳೆದು "ನಮ್ಮ ಮನೆಯಲ್ಲಿ ಆರು ಜರ್ಮನ ಸೈನಿಕರಿದ್ದಾರೆ, ಆರು!" ಎಂತ ಉಸಿರು ತಡೆದು ಹೇಳಿದಳು

ಕೆಂಪು ಸೇನೆಯ ದಳ ಒಂದು ಅವಳನ್ನು ಹಿಂಬಾಲಿಸಿ ಆವಳ ಮನೆಯ ಕಡೆಗೆ ಹೋಯಿತು. ಆದರೆ ಮನೆಯನ್ನು ಸಮೀಪಿಸಿದೊಡನೆ ಹಿಂಜರಿದು ನಿಲ್ಲಬೇಕಾಯಿತು! ಈ ಮನೆಯೂ ಚಿಕ್ಕ ಕೋಟೆಯಂತೆ ಭದ್ರಪಡಿಸಲಾಗಿತ್ತು. ಗೋಡೆಗಳಲ್ಲಿ ಮಾಡಿದ್ದ ತೂತುಗಳ ಮೂಲಕ ಕೋವಿ, ಮಶಿನ್‌ಗನ್ನುಗಳ ಗುಂಡಿನ ಸುರಿಮಳೆಯೇ ಹೊರಸೂಸುತ್ತಿತ್ತು. ಹೊರಗಿನಿಂದ ಏನನ್ನು ಒಗೆದರೂ ಗೋಡೆಗಳ ಮೇಲೆ ಯಾವ ಪರಿಣಾಮವೂ ಆಗುತ್ತಿರಲಿಲ್ಲ. ಕೆಂಪು ಸೈನಿಕರಲ್ಲಿ ಒಬ್ಬನು ಗಾಯಗೊಂಡನು. ಒಳಗಿನವರ ರೋಮಕ್ಕೆ ಕೂಡ ಧಕ್ಕೆ ಹತ್ತಲಿಲ್ಲ.

ಪೆಲ್ಗೋರಿಕಾಳು ನಿರಾಶೆಗೊಂಡಳು. ಆದರೆ ರಶ್ಯನ ರೈತ ಹೆಂಗಸು ಅವಳು. ಧೈರ್ಯಗೆಡುವವಳಲ್ಲ.

"ಹೀಗೆ ಹೊರಗಿನಿಂದ ಗುಂಡು ಹೊಡೆದು ಏನು ಉಪಯೋಗವಿಲ್ಲ, ಮಕ್ಕಳೇ. ಒಳಗೆ ಭದ್ರವಾಗಿದ್ದು ನಿಮ್ಮನ್ನು ಒಬ್ಬೊಬ್ಬರನ್ನೇ ಕೊಂದುಬಿಟ್ಟಾರು. ಮನೆಗೇನೇ ಬೆಂಕಿ ಹಚ್ಚಿಬಿಡಿರಿ ಅಂದರೆ ಕೆಲಸ ಕೈಗೂಡೀತು." ಎಂದು ಅವರಿಗೆ ಹೇಳಿದಳು

"ನಿನ್ನ ಮನೆಯೇನದು ?"

" ನನ್ನದಲ್ಲದೆ ಮತ್ತ್ಯಾರದು? ಹಿಂದೆ ಮುಂದೆ ನೋಡಬೇಡಿರಿ. ಹಚ್ಚಿರಿ, ಬೆಂಕಿ ಬೇಗ."

" ಮನೆಯಲ್ಲಿ ಇಲ್ಲೇನು ಯಾರಾದರೂ ?"

" ತೊಟ್ಟಿಲಿನಲ್ಲಿ ಒಂದು ಸಣ್ಣ ಕೂಸು ಇದೆ, ದೊಡ್ಡ ಮಗನು ಹೊರಗೆ ಬಂದುಬಿಟ್ಟಿದ್ದಾನೆ."

" ನಿನಗೇನಾಗಿದೆ, ಅಮ್ಮಾ ಹುಚ್ಚುಗಿಚ್ಚು ಹಿಡಿದಿಲ್ಲವಷ್ಟೇ!" ಪೆಲ್ಯೋರಿಕಾ ಹೀಗೆ ಹೇಳಿದವನ ಕೈ ಹಿಡಿದು ಪುನಃ ವತ್ತಾಯಪಡಿಸಿದಳು: " ಕೇಳು ಹುಡುಗಾ, ನನಗೆ ಏನೂ ಹಿಡಿದಿಲ್ಲ ತಾಯ ಕರುಳು ನನಗೂ ಇದೆ. ಆದರೆ ಒಂದು ಕೂಸಿಗಾಗಿ ನೀವು ಸೋಲನ್ನು ಒಪ್ಪಿಕೊಂಡು ಹಿಂಜರಿಯುತ್ತೀರಾ? ನಾಡಿಗಾಗಿ ನೂರು ನೂರು ಜನರು ಮಡಿಯುವಾಗ ಚಿಕ್ಕ ಕೂಸಿನದೇನು?"

" ನೀನು ಸಂಪೂರ್ಣ ಹುಚ್ಚಿಯಾಗಿದ್ದಿ ಮಾತಾಡಬೇಡ "

" ಅಯ್ಯೋ ಹಚ್ಚಿರಿ, ಮನೆಗೆ ಬೆಂಕಿ ಬೇಗ. ಕರ್ತವ್ಯ ಮರೆಯ ಬೇಡಿರಿ."

" ಸುಮ್ಮಗಿರು."

ಅಷ್ಟರಲ್ಲಿ ಒಳಗಿನಿಂದ ಬಂದ ಗುಂಡಿನಿಂದ ಇನ್ನೊಬ್ಬ ಕೆಂಪು ಸೈನಿಕನು ಗಾಯವಾದನು. ಆದರೆ ಎಷ್ಟು ಪರಿಯಿಂದ ಹೇಳಿದರೂ ಕೂಸು ಒಳಗೆ ಇರುವಾಗ ಬೆಂಕಿ ಹಚ್ಚಲು ಕೆಂಪು ಸೈನಿಕರು ಯಾರೂ ತಯಾರಾಗಲಿಲ್ಲ. ಪೆಲ್ಯೋರಿಕಾ ಸುಲಭದಲ್ಲಿ ಬಿಟ್ಟುಕೊಡುವವಳಲ್ಲ ಅವಳಿಗೆ ಇನ್ನೊಂದು ವಿಚಾರ ಹೊಳೆಯಿತು.

" ನೋಡಿರಿ, ಹುಡುಗರೆ, ಹಿಂದೆ ಹೋಗಿ ಮಾಡಿನಿಂದ ಒಳಗೆ ಇಳಿದರೆ ಹೇಗೆ?"

" ಸರಿ, ಇದು ಸರಿಯಾದ ಸೂಚನೆ. ಇದನ್ನು ಬಿಟ್ಟು ಮನೆಗೆ ಬೆಂಕಿ ಕೊಡುವುದೆಂದರೆ ಎಂಥ ಮಾತು!"

ಕೆಲವು ಕೆಂಪು ಸೈನಿಕರು ಇನ್ನೂ ಜೋರಾಗಿ ಎದುರಿನಿಂದ ಗುಂಡು ಹಾರಿಸತೊಡಗಿದರು. ಉಳಿದವರು ಪೆಲ್ಯೋರಿಕಾ ತೋರಿಸಿದ ದಾರಿಯಿಂದ

ಮನೆಯ ಹಿಂದುಗಡೆ ಹೋಗಿ ಒಳಗಿನವರಿಗೆ ಕಾಣದಂತೆ ನೆಲದ ಮೇಲೆ ಹರಿದಾಡುತ್ತಾ ಗೋಡೆಯ ಬಳಿಗೆ ಬಂದು ಮಾಡು ತೀರಾ ಕೆಳಗೆ ಬಂದ ಸ್ಥಳದಲ್ಲಿ ಅದರ ಮೇಲೆ ಹತ್ತಿ ಒಳಗೆ ಇಳಿದರು ಒಳಗಿನಿಂದ ಮನೆಯ ಎದುರು ಇದ್ದವರ ಮೇಲೆ ಒಂದೇ ಸವನೆ ಗೋಳಿಬಾರು ಮಾಡುತ್ತಲೇ ಇದ್ದ ಜರ್ಮನರಿಗೆ ಕೆಂಪು ಸೈನಿಕರು ಒಳಗೆ ಬಂದದ್ದು ತಿಳಿಯುವಷ್ಟರೊಳಗೆ ಅವರೆಲ್ಲರ ಹೊಟ್ಟೆಗೂ ಕೆಂಪು ಸೈನಿಕರ ಬೆಯೊನೆಟ್ಟಿನ ಇರಿತ ಬಿದ್ದು ಅವರ ಇಹಯಾತ್ರೆಯೂ ಮುಗಿದು ಹೋಯಿತು.

ಪೆಲ್ಯಾಗಿರಿಕಾ ಆನಂದದಿಂದ ಬಾಗಿಲನ್ನು ತೆರದು ಹೊರಗಿದ್ದ ಕೆಂಪು ಸೈನಿಕರನ್ನು ಒಳಗೆ ಕರೆದಳು ಗೆಲುವಿನ ಹಿಗ್ಗಿನಲ್ಲಿ ಅವರು ಒಳಗೆ ಓಡಿ ಬಂದು ನೋಡಿದರು ಒಬ್ಬ ಜರ್ಮನನು ತನ್ನ ಮೆಶಿನ್‌ಗನ್ನಿನ ಮೇಲೆಯೇ ಸತ್ತು ಬಿದ್ದಿದ್ದನು. ಉಳಿದವರ ಪ್ರೇತಗಳೂ ಅಲ್ಲಲ್ಲಿ ಬಿದ್ದಿದ್ದುವು ವೈರಿಗಳ ಪೈಕಿ ಯಾರೂ ಉಳಿದಿರಲಿಲ್ಲ

ಪೆಲ್ಯಾಗಿರಿಕಾ ತೊಟ್ಟಿಲ ಬಳಿ ಮೊಣಕಾಲೂರಿ ಕಣ್ಣೀರಿಡುತ್ತಿದ್ದಳು. ಸೈನಿಕರು ಅವಳ ಕಡೆ ಏನಾಯಿತೆಂಬ ದೃಷ್ಟಿಯಿಂದ ನೋಡಿದರು. ಜಜ್ಜಿ ಹೋದ ತಲೆಯಿಂದ ಒಂದೇ ಸವನೆ ನೆತ್ತರು ಸುರಿಯುತ್ತಿದ್ದ ಕೂಸಿನ ಕಳೇಬರವನ್ನು ಪೆಲ್ಯಾಗಿರಿಕಾ ಮೇಲಕ್ಕೆತ್ತಿ ತೋರಿಸಿದಳು

"ಕೆಂಪು ಸೈನ್ಯ ಊರೊಳಗೆ ಬಂದ ಸುದ್ದಿ ಕೇಳಿ ನಾನು ಹೊರಗೆ ಬಂದೆ. ಒಳಗೆ ಮಗು ಬಾಯಿ ತೆಗೆದಿರಬೇಕು. ಅದಕ್ಕಾಗಿ ಅದರ ತಲೆಯನ್ನೇ ಒಡೆದರು!" ಎಂದು ಹೇಳಿ ಪೆಲ್ಯಾಗಿರಿಕಾ ಕಣ್ಣೀರನ್ನು ಒರಸಿಕೊಂಡಳು. "ನಾನು ಮೊದಲು ಸೂಚಿಸಿದಂತೆ ಮನೆಗೆ ಬೆಂಕಿ ಹಚ್ಚಿದರೆ ನಿಮ್ಮ ಎರಡು ಜೀವವಾದರೂ ಉಳಿಯುತ್ತಿತ್ತು ಈಗ ಒಂದು ಸತ್ತ ಮಗುವಿಗಾಗಿ ಎರಡು ಸೈನಿಕರನ್ನು ಬಲಿ ಕೊಟ್ಟರಿ"

"ಸೈರಿಸು, ತಾಯಿ, ಸೈರಿಸು."

"ನಾನು ಕೂಸಿಗಾಗಿ ಅಳುವುದಿಲ್ಲ. ನನಗೆ ಒಂದು ಕೋವಿ ಕೊಡಿರಿ. ಒಬ್ಬ ವೈರಿಯನ್ನಾದರೂ ಕೊಂದು ನನ್ನ ಕೂಸಿನ ಸೇಡನ್ನು ತೀರಿಸಿಕೊಳ್ಳುತ್ತೇನೆ."

" ಆ ಕೆಲಸ ನಮಗೆ ಬಿಡು, ತಾಯಿ. ನಿನ್ನ ಕೂಸೊಂದೇ ಅಲ್ಲ, ನಿನ್ನಂತೆ ಚಿಕ್ಕ ಕೂಸುಗಳನ್ನು ಕಳಕೊಂಡ ಮಾತೆಯರು ನಾಡಿನ ಎಲ್ಲಾ ಕಡೆಗಳಲ್ಲೂ ಇದ್ದಾರೆ ಎಲ್ಲಾ ಕೊಲೆಗಳ ಸೇಡನ್ನು ನಮ್ಮ ಸೈನ್ಯವು ತೀರಿಸಿಕೊಂಡೇಬಿಡುವುದು ನಿನ್ನ ಚಿಕ್ಕ ಕೂಸು ಸ್ವಾತಂತ್ರ್ಯಕ್ಕಾಗಿ ಮಡಿದ ರಶ್ಯನ ವೀರ ಕುವರನೆಂಬುದನ್ನು ಸ್ಮರಿಸಿ ಧೈರ್ಯ ತಾಳು " ಕೆಂಪು ದಳದ ನಾಯಕನ ಈ ಸ್ಫೂರ್ತಿದಾಯಕ ಮಾತುಗಳು ಪೆಲ್ಯೊರಿಕಾಳ ಹೃದಯದಲ್ಲಿ ಸಹಾನುಭೂತಿ ಹಾಗೂ ಸಮ್ಮತಿಯ ಅಲೆಗಳನ್ನೆಬ್ಬಿಸಿದುವು.

* * * *

ಊರಿನ ಇತರ ಕಡೆಗಳಲ್ಲೆಲ್ಲಾ ಗುಂಡಿನ ಶಬ್ದವು ಕಡಿಮೆಯಾಗುತ್ತಾ ಬಂದಿತ್ತು. ಆದರೆ ಕೆಪ್ಟನ್ ಕರ್ಟನ ಕಚೇರಿಯ ಮುಂದೆ ಕದನವು ತುಸು ವಾದರೂ ಮಂದವಾಗಲಿಲ್ಲ ಅರುಣೋದಯವು ಸನ್ನಿಹಿತವಾಗಿತ್ತು. ಚಂದ್ರನು ಅಸ್ತಾಚಲವನ್ನು ಸಮೀಪಿಸುತ್ತಿದ್ದನು ಕೆಂಪು ಸೈನಿಕರಿಗೆ ತಮ್ಮ ಗುರಿಯನ್ನು ಮುಟ್ಟಲು ಸ್ವಲ್ಪ ಮಾತ್ರವೇ ಅವಕಾಶ ಉಳಿದಿತ್ತು. ಅಷ್ಟರೊಳಗೆಕಚೇರಿಯು ಕೈವಶವಾಗದಿದ್ದರೆ ಅವರ ಈವರೆಗಿನ ಪ್ರಯತ್ನಗಳು ನಿಷ್ಫಲವಾದಂತೆಯೇ ಲೆಫ್ಟನೆಂಟ ಶೆಲೊವನು ಅಸ್ವಸ್ಥಚಿತ್ತದಿಂದ ಮೂಡಣ ಬಾನನ್ನು ನೋಡಿದನು ಬೆಳಕು ಹರಿಯಿತೆಂದರೆ ಇಲ್ಲಿ ಧ್ವನಿಯಂತ್ರದ ತಂತಿ ಮುರಿದದ್ದು ಜರ್ಮನ ಕೇಂದ್ರಕಚೇರಿಗೆ ತಿಳಿದೇ ತಿಳಿಯುವುದು. ಅಲ್ಲಿಂದ ಅವರ ದೊಡ್ಡ ಸೈನ್ಯವು ಬಂದರೆ ತನ್ನ ಈ ಸಣ್ಣ ದಳವನ್ನು ಅವರು ನಿಸ್ಸಂಶಯವಾಗಿ-ಒಬ್ಬನೂ ಉಳಿಯದಂತೆ ತುಂಡರಿಸಿಬಿಡುವರು.

ಅವನ ಮನಸ್ಸಿನ ಕಳವಳವನ್ನು ಕೈಕೆಳಗಿನ ಸೈನಿಕರು ಕಂಡರು. ಅವರೂ ಸಮಸ್ಯೆಯನ್ನುಬಗೆಹರಿಸುವ ವಿಷಯದಲ್ಲಿ ವಿಚಾರಮಾಡಹತ್ತಿದರು. ಒಬ್ಬನಿಗೆ ಒಂದು ಯೋಚನೆ ಹೊಳೆಯಿತು.

" ಕಾಮ್ರೇಡ ಲೆಫ್ಟನೆಂಟ, ನಾವು ಕಿಟಕಿಯಿಂದ ಒಂದು ಗ್ರೆನೇಡನ್ನು ಒಗೆದರೆ ಹೇಗೆ ? ಕಿಟಕಿಯ ಬಾಗಿಲುಗಳು ಅಷ್ಟು ಭದ್ರವಾಗಿರಲಿಕ್ಕಿಲ್ಲ."

" ಅದು ಸರಿ ಆದರೆ ಗ್ರೆನೇಡುಗಳನ್ನು ಒಗೆಯಲು ಹತ್ತಿರ ಹೋಗು ವುದು ಹೇಗೆ ? ಒಳಗಿನಿಂದ ಮೃತ್ಯುವನ್ನೇ ಕಾರುತ್ತಿದ್ದಾರೆ, ಅವರು."

" ಆಗಲಿ, ನಾನು ಪ್ರಯತ್ನ ಮಾಡಿ ನೋಡುತ್ತೇನೆ "

ಇಷ್ಟು ಹೇಳಿ ಆ ಸೈನಿಕನು ಶಿಲೊವನ ಸಮ್ಮತಿಯ ದಾರಿ ಕಾಯದೆ ಮನೆಯ ಹಿಂದುಗಡೆ ಹೋಗಿ ಅಲ್ಲಿಂದ ನೆಲದ ಮೇಲೆ ಹರಿದಾಡಿ ಗೋಡೆಯ ಸಮೀಪಕ್ಕೆ ಹೋದನು ಅವನಿಗೆಲ್ಲಿಯಾದರೂ ತಗಲೀತೆಂಬ ಭೀತಿಯಿಂದ ಕೆಂಪು ಸೈನಿಕರು ಗೋಳಿಬಾರನ್ನು ನಿಲ್ಲಿಸಿದರು ಲೆಫ್ಟನೆಂಟ ಶಿಲೊವನು ಅವನ ಕಡೆಗೇನೇ ದಿಟ್ಟಿಸಿ ನೋಡುತ್ತಿದ್ದನು. ಸೈನಿಕರ ಪ್ರಯತ್ನ ಯಶಸ್ವಿ ಯಾಗುವ ಭರವಸೆ ಅವನಿಗೆಳ್ಳಷ್ಟೂ ಇರಲಿಲ್ಲ.

ಫಕ್ಕನೆ ಆ ಮುಂದೆ ಹೋದ ಸೈನಿಕನು ಎದ್ದುನಿಂತನು ಯಾಕೆಂದು ಅವನ ಬಂಧುಗಳಿಗೆ ತಿಳಿಯುವ ಮೊದಲೇ ಅವನು ಕಿಟಕಿಗೆ ಬಂದು ಗ್ರೆನೇಡುಗಳ ಕಟ್ಟನ್ನೇ ಒಗೆದನು. ಅವುಗಳ ಸ್ಫೋಟಕ್ಕೆ ಇಡೀ ಕಟ್ಟಡವೇ ನಡುಗಿತು. ಕಿಟಕಿಯು ಚೂರಾಗಿ ಅದರ ಕೆಳಗಿನ ಗೋಡೆಯ ಭಾಗ ಕೂಡಾ ಕುಸಿದು ಬಿತ್ತು. ಕಿಟಕಿಯ ಹಿಂದೆ ಇದ್ದವನ ಕುತ್ತಿಗೆಯೇ ಹಾರಿ ಹೋಗಿ ಸುತ್ತಲೂ ನೆತ್ತರು ಹರಿಯಿತು.

ಆ ರಕ್ತಮಯ ಗವಾಕ್ಷದೊಳಗಿಂದ ಶಿಲೊವನೂ ಅವನ ಸೈನಿಕರೂ ಒಳನುಗ್ಗಿದರು.

## ೧೨

ಕೆಪ್ಟನ್ ಕರ್ಟ ವಾರ್ನರನ ಕಚೇರಿಯ ನೆಲಮಾಳಿಗೆಯಲ್ಲಿನ ಕತ್ತಲು ಕೋಣೆಯಲ್ಲಿ ಹೊಣೆಯಾಗಿ ಬಂಧಿತರಾಗಿದ್ದ ಐದು ಜನರು ಕರ್ಟನು ಜಾಹೀರು ಮಾಡಿದ ಪ್ರಕಾರ ಅವರ ಜೀವನದ ಕೊನೆಯದಾಗಿದ್ದ ಆ ರಾತ್ರಿ ಯನ್ನು ಹೊರಜಗತ್ತಿನ ಯಾವ ಸಂಪರ್ಕವೂ ಇಲ್ಲದೆ ಕಳೆಯುತ್ತಿದ್ದರು.

ಅವರಿಗೆ ಯಾರಿಗೂ ನಿದ್ದೆ ಹತ್ತಿದ್ದಿಲ್ಲ. ಕೆಂಪು ಸೈನ್ಯವು ಊರನ್ನು ಪ್ರವೇಶಿಸಿದ ಮೇಲೆ ಹೊಡೆಯಲ್ಪಟ್ಟ ಮೊದಲನೇ ಗುಂಡನ್ನು ಅವರೆಲ್ಲರೂ ಕೇಳಿದ್ದರು. ಯಾರೊ ಪಹರೆಯವನು ಹೊಡೆದ ಯಃಕಶ್ಚಿತ ಗುಂಡು ಅಂತ ಅವರು ಎಣಿಸಿದ್ದರು. ಆದರೆ ಬೆನ್ನುಬೆನ್ನಿಗೆ ಒಂದರ ಹಿಂದೊಂದು

ಗುಂಡು ಬೀಳುತ್ತಲೇ ಇದ್ದುದನ್ನು ಕೇಳಿ ಅವರಿಗೆ ತಮ್ಮ ಜನರು ಬಂದ ರೆಂದು ಗೊತ್ತಾಯಿತು.

" ನಮ್ಮವರು !" ಜೆಚ್ಕೋರಾ ಆನಂದದ ಭರದಲ್ಲಿ ಒದರಿದಳು.

" ನಮ್ಮವರು !" ಉಳಿದವರೂ ಆ ಆನಂದದಲ್ಲಿ ಭಾಗಿಗಳಾಗಿ ಉಸು ರಿದರು.

ಮಾಲಾನ್ಯಾಳಿಗೆ ಮಾತ್ರ ಏನೂ ಆನಂದವಾದಂತೆ ತೋರಲಿಲ್ಲ. ಶೂನ್ಯದಲ್ಲಿ ನೆಟ್ಟಿದ್ದ ಅವಳ ದೃಷ್ಟಿಯು ಅಲ್ಲಿಂದ ಕಿಂಚಿತ್ತಾದರೂ ತಿರುಗಲಿಲ್ಲ.

ಗುಂಡಿನ ಸದ್ದನ್ನು ಕಿವಿಗೊಟ್ಟು ಕೇಳುತ್ತಿದ್ದ ಎವ್ಡೊಕಿಮ ಅಜ್ಜನು " ಈಗ ದೇವಾಲಯದ ಬಳಿ ಕಾಳಗ ನಡೆದಿದೆ " ಎಂದನು.

" ಈಗ ಕೇಳುವ ಶಬ್ದ ಜರ್ಮನರ ತೋಪಖಾನೆಯ ಬಳಿಯಿಂದ " ಇದೇ ರೀತಿಯಲ್ಲಿ ಎವ್ಡೊಕಿಮ ಅಜ್ಜನು ಕಾಳಗದ ಪ್ರಗತಿಯನ್ನು ಇತರ ಕೈದಿಗಳಿಗೆ ತಿಳಿಸುತ್ತಿದ್ದನು.

ಅಷ್ಟರಲ್ಲಿ ಗೋಡೆಯ ತೀರ ಸಮೀಪದಲ್ಲೇ ಒಂದು ಗೋಳಿಬಾರಿನ ಶಬ್ದ ಕೇಳಿಸಿತು. ನೀನಾ ಹೆದರಿ ಚೀರಿದಳು

" ಚೀರಾಡಬೇಡ ನೀನಾ, ನಮ್ಮವರು ಬಂದರು ಇಲ್ಲೇ " ಎಂದನು ಎವ್ಡೊಕಿಮ ಅಜ್ಜ.

ತೀರ ಹತ್ತಿರವೇ ಗೋಳಿಬಾರಿನ ಹಾಗೂ ಕಾಳಗದ ಬೇರೆ ಬೊಬ್ಬೆಗಳು ಜೋರಾಗಿ ಕೇಳಿಸುತ್ತಿದ್ದುವು. ಆದರೆ ಇಷ್ಟು ಹತ್ತಿರವಿದ್ದರೂ ಅವರಿಗೆ ಹೊರಗೆ ನಡೆಯುವುದೇನೆಂದು ತಿಳಿಯುವಂತಿರಲಿಲ್ಲ.

ತಮ್ಮ ದಂಡು ಒಳಗೆ ಪ್ರವೇಶಿಸುವ ಮೊದಲೇ ಜರ್ಮನರು ತಮ್ಮ ಇತಿಶ್ರೀ ಮಾಡಿಬಿಡುತ್ತಾರೆಂದು ಮುದುಕ ಎವ್ಡೊಕಿಮನಿಗೆ ಅನಿಸಿತು. ಆದರೆ ಉಳಿದವರು ಹೆದರಿ ಕಂಗಾಲಾಗುವರೆಂದು ಅವನ ಆ ವಿಚಾರವನ್ನು ಹೊರಗುಸುರಲಿಲ್ಲ. ಹೊರಗಿನ ಘಟನೆಗಳನ್ನು ಸಾಧ್ಯವಾದಷ್ಟು ತಿಳಿಯಲು ಕಿವಿಗಳನ್ನು ಸೂಕ್ಷ್ಮ ಮಾಡಿ ಕೇಳಹತ್ತಿದನು. ತುಸು ಹೊತ್ತಿನಲ್ಲಿ ಯಾರೊ ಬಾಗಿಲಿಗೆ ಬಡೆದ ಹಾಗೂ ಓಡ್ಯಾಡುವ ಜನರ ಕಾಲಿನ ಸಪ್ಪಳ ಕೇಳಿಸಿತು. ತಮ್ಮವರು ಒಳಗೆ ಪ್ರವೇಶಿಸಿದರೆಂದು ಮುದುಕನು ಎಣಿಸಿದನು. 'ನಮ್ಮನ್ನು

ಹೊರಗೆ ಬಿಡಿರಿ, ನಮ್ಮನ್ನು ಹೊರಗೆ ಬಿಡಿರಿ" ಎಂದು ಬಾಗಿಲಿಗೆ ಬಡೆದು ಒದರಿದನು.

ಹೊರಗಿನ ಗಲಾಟೆಯಲ್ಲಿ ಮುದುಕನ ಒದರಾಟ ಹೊರಗಿನವರಿಗೆ ಕೇಳಿಸುವುದು ಶಕ್ಯವಿರಲಿಲ್ಲ

"ಬನ್ನಿರೋ, ನೀವೂ ಒದರಿ ಹೇಳಿರಿ, ಇಲ್ಲವಾದರೆ ಅವರಿಗೆ ಕೇಳಿಸುವುದು ಹೇಗೆ?" ಎಂದು ಎವ್ಡೊಕಿಮನು ಇತರರಿಗೆ ಕೂಗಿ ಹೇಳಿದನು. ಎಲ್ಲರೂ ಬಾಗಿಲಿಗೆ ಜೋರಿನಿಂದ ಬಡೆದು ಎವ್ಡೊಕಿಮನು ಒದರಿದಂತೆ ತಾವೂ ಒದರಿದರು.

ಆದರೆ ಕಾಳಗದ ಕಿವಿ ಕೊರೆಯುವ ಬೊಬ್ಬಾಟದಲ್ಲಿ ಇವರ ಮೊರೆ ಕೇಳಿಸುವುದೆಂತು? "ಇನ್ನೂ ಜೋರಾಗಿ ಒದರಿರಿ ಅವರಿಗೆ ಕೇಳಿಸದಿದ್ದರೆ ಸರ್ವನಾಶ!" ಎಂದನು ಮುದುಕ ಎವ್ಡೊಕಿಮ

"ಯಾಕೆ ಈ ಒದರಾಟ? ನಾವಿಲ್ಲಿರುವುದನ್ನು ಊರವರು ಅವರಿಗೆ ತಿಳಿಸದಿರುತ್ತಾರೆಯೇನು? ಯಾಕೆ ಇಷ್ಟು ಗಾಬರಿ?" ಗ್ರೊಖಾಚ ಹೇಳಿದನು.

ಗ್ರೊಖಾಚನ ಮಾತು ನ್ಯಾಯವಾದದ್ದಿದ್ದರೂ ಎವ್ಡೊಕಿಮ ಅಜ್ಜನು ಹುಟ್ಟಿಸಿದ ಹೆದರಿಕೆಯು ಅದರಿಂದ ಕಡಿಮೆಯಾಗಲಿಲ್ಲ ಒಂದೇಸವನೆ ಬಾಗಿಲಿಗೆ ಇನ್ನೂ ಜೋರು ಜೋರಾಗಿ ಬಡಿಯತೊಡಗಿದರು ಅಷ್ಟರಲ್ಲಿ ಒಳಗಿನ ಸಪ್ಪಳ ಕಡಿಮೆಯಾಯಿತು ಕಟ್ಟಡದ ಹೊರಗಿನಿಂದ ಜನ ಓಡುವ ಶಬ್ದ ಕೇಳಿಸಿತು "ಏನು ನಮ್ಮವರು ಪಲಾಯನ ಮಾಡಿದರೇ?" ಎವ್ಡೊಕಿಮನು ಗಾಬರಿಪಟ್ಟು ಉಗ್ಗಾರ ತೆಗೆದನು. ಇದನ್ನು ಕೇಳಿ ಎಲ್ಲರ ಮುಂದೆ ಶೂನ್ಯವೇ ಕಾಣಿಸಹತ್ತಿತು

ನೀನಾ ಗಟ್ಟಿಯಾಗಿ ರೋದಿಸಹತ್ತಿದಳು.

"ಬಾಯಿ ಮುಚ್ಚು, ಹುಚ್ಚಳು ಬರೀ. ಮತ್ತೆ ಮುದುಕಾ ನಿನಗೂ ಬುದ್ಧಿಯಿಲ್ಲವೇ? ಪಲಾಯನಗೈದರಂತೆ! ಇನ್ನೊಂದು ಕಡೆಯಿಂದ ಶಬ್ದ ಕೇಳಿಸುವುದಿಲ್ಲವೇನು ನಿನಗೆ? ಆ ಕಡೆಯಿಂದ ಒಳನುಗ್ಗಲು ಯತ್ನಿಸುತ್ತಾರೆ. ಇಷ್ಟಕ್ಕೇನೇ ವಿಚಾರ ಮಾಡದೆ ಎಲ್ಲರ ಹೌಹಾರಿಸಿಬಿಟ್ಟೆ" ಗ್ರೊಖಾಚನು ನುಡಿದನು

ಎವ್ಡೋಕಿಮನು ಮೌನಕಾಲೂರಿ ದೇವರಿಗೆ ಪ್ರಾರ್ಥಿಸತೊಡಗಿದನು.

"ಏನು ಈಗ ದೇವರ ನೆನಪಾಯಿತೇನು ನಿನಗೆ ?'' ತಿರಸ್ಕಾರದ ದನಿಯಲ್ಲಿ ಗ್ರೊಬಾಚನು ಕೇಳಿದನು.

'ಪಾರ್ಥಿಸಲಿ ಅಪ್ಪಾ ಮುದುಕ. ಅದರಿಂದ ಯಾರಿಗೇನೂ ತೊಂದರೆ ಇಲ್ಲವಷ್ಟೆ ?" ಚೆಚ್ಕೋರಾ ಸಮಾಧಾನಪಡಿಸಿದಳು.

ಹೊರಗೆ ಒಂದೇಸವನೆ ಗೋಳಿಬಾರು ನಡೆಯುತ್ತಾ ಇತ್ತು. ಫಕ್ಕನೆ ಭೂಮಿಯನ್ನೇ ಕಂಪಿಸುವಷ್ಟು ಘೋರ ಶಬ್ದವಾಯಿತು. ಇದಾದ ಒಂದೆರಡು ನಿಮಿಷಗಳಲ್ಲಿ ಅವರಿದ್ದ ಕೋಣೆಯ ಬಾಗಿಲು ಒಡೆದು ತೆರೆಯಲ್ಪಟ್ಟಿತು. ಮೂರು ದಿವಸಗಳಿಂದ ಪೂರಾ ಕತ್ತಲು ಮುಸುಕಿದ್ದ ಆ ಕೋಣೆಯಲ್ಲಿ ಅರುಣೋದಯದ ಅಸ್ಪಷ್ಟ ಪ್ರಕಾಶವು ಹರಿದಾಡಿದಾಗ ಒಳಗಿದ್ದ ಕೈದಿಗಳು ದಾಸ್ಯತ್ವದ ಕತ್ತಲೆ ಮಾಯವಾಗಿ ಸ್ವಾತಂತ್ರ್ಯದ ಸವಿಬೆಳಕಿನಲ್ಲಿ ಕಾಲಿಟ್ಟರು.

ಬಿಡುಗಡೆಯು ಬಂದೊಡನೆ ಮಾಲಾನ್ಯಾಳು ಕೂತಲ್ಲಿಂದ ತಟ್ಟನೆ ಹಾರಿ ಹೊರಗೆ ಓಡಿದಳು. ಅಲ್ಲಿ ಒಬ್ಬ ಕೆಂಪು ಸೈನಿಕನು ತನ್ನ ಕೋವಿಯನ್ನು ಬದಿಗಿಟ್ಟು ಕಾಲಿನ ಗಾಯಕ್ಕೆ ಅರಿವೆ ಸುತ್ತುತ್ತಿದ್ದನು. ಮಾಲಾನ್ಯಾಳು ಫಕ್ಕನೆ ಆ ಕೋವಿಯನ್ನು ಎತ್ತಿಕೊಂಡು ಓಡಿದಳು.

ಹುಚ್ಚಳಂತಿದ್ದ ಅವಳ ತೀಕ್ಷ್ಣ ದೃಷ್ಟಿಯನ್ನು ನೋಡಿ ಆ ಸೈನಿಕನು ಅವಳನ್ನು ಹಿಂಬಾಲಿಸಿ ಕೋವಿಯನ್ನು ಸೆಳೆದುಕೊಳ್ಳಲು ತನ್ನವರಿಗೆ ಹೇಳುವಷ್ಟರಲ್ಲಿ ಗ್ರೊಬಾಚನು ತಡೆದನು. "ಅವಳು ಹುಚ್ಚಳಲ್ಲ, ಕೊವ್ರೀಡ. ಏನಾದರೂ ಮಾಡ್ಯಾಳೆಂಬ ಅಂಜಿಕೆ ಬೇಡ. ಕೋವಿಗಳಿಗೇನು ಕೊರತೆ ? ಬೇಕಾದಷ್ಟು ಜರ್ಮನ ಕೋವಿಗಳಿವೆಯಲ್ಲಾ. ಇರಲಿ, ಅದು ಅವಳ ಕೈಯಲ್ಲಿ." ನಾಡಿಗರ ಪೈಕಿ ಎಷ್ಟೇ ಅಲ್ಪನ ಮನಸ್ಸನ್ನು ಕೂಡಾ ನೋಯಿಸದಿರುವ ಕೆಂಪು ಸೈನಿಕರು ಗ್ರೊಬಾಚನ ಈ ಮಾತುಗಳಿಗೆ ಸಮ್ಮತಿಸಿ ಮಾಲಾನ್ಯಾಳಿಗೆ ಆ ಕೋವಿಯನ್ನು ತಗೊಂಡು ಹೋಗಲು ಬಿಟ್ಟರು.

ಒಳನುಗ್ಗಿದ ಕೆಂಪು ಸೈನಿಕರು ಹೆಂಡ್‌ಗ್ರೆನೇಡಿನ ಸ್ಫೋಟದಿಂದ ಸಾಯದೆ ಉಳಿದವರನ್ನು ತಮ್ಮ ಬೆಯೊನೆಟ್ಟಿಗೆ ಆಹುತಿ ಕೊಟ್ಟರು. ಆದರೆ ಕರ್ಟನು ಮಾತ್ರ ಎಲ್ಲಿಯೂ ಕಾಣಸಿಗಲಿಲ್ಲ. "ಕೆಪ್ಟನ್ ಫರಾರಿ !" ಈ

ಗುಲ್ಲು ಕೇಳಿಸತೊಡಗಿತು ಕೆಂಪು ಸೈನಿಕರೂ ಊರಿನ ಜನರೂ ಎಲ್ಲಾ ಕಡೆಗಳಲ್ಲಿ ಹುಡುಕತೊಡಗಿದರು.

ಹೆಂಡ್‌ಗ್ರೆನೇಡಿನ ಭಯಂಕರ ಸ್ಫೋಟದಿಂದ ಕರ್ಟನು ನಿಂತಲ್ಲೇ ಗೋಡೆಗೆ ಬಡಿದಂತಾದನು ಕಿಟಕಿಯ ಬಾಗಿಲು ಹಾರಿದೊಡನೆ ಅವನಿಗೆ ನಡೆದ ಘಟನೆಯು ಅರಿವಾಯಿತು. ಅಲ್ಲಿಂದ ಅವನು ಕಾಗದ ಪತ್ರಗಳನ್ನಿಡುವ ಚಿಕ್ಕ ಕೋಣೆಗೆ ಹಾರಿದನು ಅದು ಕಟ್ಟಡದ ತೀರ ಬದಿಗಿದ್ದು ಅದಕ್ಕೆ ಮಗ್ಗುಲಿಗೆ ಒಂದೇ ಕಿಟಕಿ ಇತ್ತು. ಎದುರು ಭಾಗದಲ್ಲಿದ್ದ ಒಂದು ತೂತಿನಿಂದ ಒಬ್ಬ ಸೈನಿಕನು ನಡೆದ ಘಟನೆಯೇನೆಂದು ತಿಳಿಯದೆ ಮಶಿನ್‌ಗನ್ನಿನಿಂದ ಗುಂಡು ಹಾರಿಸುತ್ತಲೇ ಇದ್ದನು. ಈ ಸಂಧಿಯಲ್ಲಿ ಕರ್ಟನು ಮಗ್ಗುಲಿನ ಕಿಟಕಿಯನ್ನು ತೆರೆದು ಹೊರಗೆ ಹಾರಿದನು ಅವನ ಹಿಂದೆ ಕಟ್ಟಡದ ಒಳಗೆ ಪ್ರವೇಶಿಸಿದ ವಿಜಯೋನ್ಮುಖ ಕೆಂಪು ಸೈನಿಕರ ಕೋಲಾಹಲವು ಕೇಳಿಸುತ್ತಿತ್ತು. ಎಲ್ಲಾದರೂ ಅಡಗಿ ನುಸುಳುವ ಉದ್ದೇಶದಿಂದ ಉದ್ದುದ್ದ ಹೆಜ್ಜೆಗಳನ್ನಿಟ್ಟು ಸದ್ದಿಲ್ಲದೆ ಹೊರಟನು ಆದರೆ ಅನಪೇಕ್ಷಿತ ಶತ್ರುವೊಂದು ಅವನನ್ನು ಅಡ್ಡಕಟ್ಟಿತು. ಮಾಲಾನ್ಯಾಳು ಕೋವಿಯನ್ನು ನಳಿಗೆಯಿಂದ ಹಿಡಿದು ಅವನನ್ನು ತಡೆದಳು. ಅವಳ ಕೆದರಿದ ಕೂದಲು, ಕಿಡಿ ಕಾರುವ ಕಣ್ಣುಗಳು ಕರ್ಟನಲ್ಲಿಯೂ ಕೂಡ ಕ್ಷಣಕಾಲ ಭಯವನ್ನು ಹುಟ್ಟಿಸಿದುವು. ಅವಳು ಒಮ್ಮೆಲೆ ಅವನ ಮೈಮೇಲೆ ಹೋದಳು. ಆದರೆ ಕರ್ಟನು ಪ್ರಸಂಗಾವಧಾನವನ್ನು ಮರೆಯಲಿಲ್ಲ. ಕೋವಿಯ ನಳಿಗೆಯನ್ನು ಅವಳ ಕಡೆಗೆ ತಿರುಗಿಸಿ ಕುದುರೆಯನ್ನೆಳೆದನು ಗುಂಡು ಹಾರಿ ಅವಳ ಹೊಟ್ಟೆಯನ್ನು ಹೊಕ್ಕಿತು. ಆದರೆ ಆ ಕ್ಷಣದಲ್ಲೇ ಕೋವಿಯ ಬುಡದ ಬಲವಾದ ಏಟು ಅವನ ತಲೆಯ ಮೇಲೆ ಬಿದ್ದು ಅವನ ತಲೆಬುರುಡೆಯನ್ನು ಒಡೆಯಿತು. ನೆತ್ತರು ಧಾರವಾಹಿಯಾಗಿ ಅವನ ಕಣ್ಣು, ಮೂಗುಗಳ ಮೇಲೆ ಹರಿದು ಅವನ ಶ್ವಾಸ ಕಟ್ಟಿದಂತಾಯಿತು.

ಮಾಲಾನ್ಯಾ ಅವನಿಂದ ಎರಡೇ ಅಡಿ ದೂರದಲ್ಲಿ ಬಿದ್ದಿದ್ದಳು. ಕರ್ಟನ ತಲೆಬುರುಡೆ ಒಡೆದದ್ದರ ಹಾಗೂ ತನ್ನ ಮೈಗೆ ಗುಂಡು ತಗಲಿದ್ದರ ಶಬ್ದವನ್ನು ಏಕಕಾಲದಲ್ಲಿ ಕೇಳಿದ್ದಳು. ಗುಂಡು ಹೊಟ್ಟೆಯೊಳಗೇನೇ

ನಾಟಿದ್ದು ಅವಳಿಗೆ ಅತುಲ ಆನಂದವನ್ನುಂಟುಮಾಡಿತು. ಅದೇ ಹೊಟ್ಟೆ ಯಲ್ಲವೇ ಜರ್ಮನ ಕುನ್ನಿಯನ್ನು ಹೊತ್ತಿರುವುದು! ಗುಂಡಿನ ಹೊಡೆತ ದಿಂದ ಹೊಟ್ಟೆಯಲ್ಲಿ ಆಗುತ್ತಿದ್ದ ನೋವು ಅವಳಿಗೆ ದುಃಖದ ಬದಲು ಒಂದು ರೀತಿಯ ಸುಖವನ್ನೇ ಕೊಟ್ಟಿತು. ಎಷ್ಟೋ ದಿವಸಗಳಿಂದ ಅವಳ ಮುಖ ವನ್ನು ಆವರಿಸಿದ್ದ ಸಂತಾಪ ನಿರಾಶೆಗಳ ಪರದೆಯು ಈಗ ಮಾಯವಾಗಿ ಅವಳ ಮೊದಲಿನ ಮಂದಹಾಸವು ಪುನಃ ಮೊಗದಲ್ಲಿ ಮೂಡಿತು

ಗುಂಡಿನ ಹೊಡೆತದ ಜೋರಿನಿಂದ ಫಕ್ಕನೆ ಮುಚ್ಚಿಹೋಗಿದ್ದ ಕಣ್ಣು ಗಳನ್ನು ಮಾಲಾನ್ಯಾ ಮೆಲ್ಲನೆ ತೆರೆದಳು ಪ್ರಾತಃಕಾಲದ ಪ್ರಥಮ ಕಿರಣಗಳ ಪ್ರಕಾಶದಿಂದ ಆಕಾಶದಲ್ಲಿನ ಇಂದ್ರಚಾಪ ಸ್ಪಷ್ಟವಾಗಿ ಕಾಣುತ್ತಲಿತ್ತು. ಇರುಳಿನ ಮಬ್ಬಿನಲ್ಲಿ ಮುತ್ತಿನ ಮಾಲೆಯಂತೆ ಅಸ್ಪಷ್ಟವಾಗಿ ಪ್ರಕಾಶಿಸುತ್ತ ಲಿದ್ದ ಆ ಧನುಷ್ಯಾಕೃತಿಯು ಸೂರ್ಯನಿಂದ ಈಗ ತೇಜಸ್ಸನ್ನೂ ಹಾಗೂ ಸಪ್ತ ವರ್ಣಗಳನ್ನೂ ಪಡೆದಿತ್ತು. ಮಂಗಲ ಪ್ರಭಾತದಲ್ಲಿ ಅದು ವಿವಿಧ ರಾಗ ರಂಜಿತ ಭಂಗಿ ಭಣಿತಗಳಿಂದ ನರ್ತನಗೈಯುತ್ತಿತ್ತು ಬಾಲರವಿಯ ಹೊನ್ನ ಕಿರಣಗಳಿಂದ ದೇದೀಪ್ಯಮಾನವಾದ ಈ ವರ್ಣರಾಶಿಯು ಕಣ್ಣುಗಳಿಗೆ ಎಂದಿಗೂ ಮರೆಯಲಾಗದ ಹಬ್ಬದೂಟವಾಗಿತ್ತು

ಮಾಲಾನ್ಯಾ ತನ್ನ ಕಣ್ಣುಗಳನ್ನು ಆ ಇಂದ್ರಚಾಪದ ಕಡೆ ತಿರುಗಿಸಿ ದಳು. ಅವಳ ಜೀವರಸವು ಸುರಿಯುವ ನೆತ್ತರದೊಂದಿಗೆ ದೇಹದಿಂದ ಹೊರಗೆ ಹರಿಯುತ್ತಲಿತ್ತು. ಬೆರಳುಗಳು ಮರಗಟ್ಟಿದುವು. ಕೈಕಾಲು ತಣ್ಣಗಾದುವು. ಆದರೆ ಅವಳ ಲಕ್ಷ್ಯವು ಅವುಗಳ ಕಡೆಗೆ ಇರಲಿಲ್ಲ ಅವಳು ದಿಗಂತದಿಂದ ದಿಗಂತಕ್ಕೆ ಜೋಡಿಸಿದ ಸುಂದರ ಸೇತುವೆಯಂತೆ ಕಂಗೊಳಿಸು ತ್ತಿದ್ದ ಆ ಬಿಲ್ಲನ್ನೇ ಕಣ್ಣಿಟ್ಟು ನೋಡುತ್ತಿದ್ದಳು.

ಮಾಲಾನ್ಯಾಳಿಗೆ ತನ್ನ ಪ್ರಿಯಕರನ ನೆನಪಾಯಿತು ಅವನೊಡನೆ ಆನಂದದಿಂದ ಹೊಲದಲ್ಲಿ ಕಳೆದ ಆ ಸುಗ್ಗಿಯ ದಿನಗಳ ದೃಶ್ಯವು ಅವಳ ಕಣ್ಣ ಮುಂದೆ ಬಂದಿತು. ಯುದ್ಧಕ್ಕೆ ಹೋದ ಐವಾನನು ಈಗ ಎಲ್ಲಿರು ವನೋ! ತಾನೂ ತನ್ನ ಪ್ರಿಯ ಐವಾನನೂ ಈ ದುಷ್ಟ ಜರ್ಮನರ ಆಕ್ರಮಣ ದಿಂದ ದೂರವಿದ್ದ ಈ ಜಾಜ್ವಲ್ಯಮಾನವಾದ ಇಂದ್ರಚಾಪದ ಮಾರ್ಗದಲ್ಲಿ

ಬಹು ದೂರ ಯಾರಿಗೂ ತಿಳಿಯದ ಅಜ್ಞಾತ ಸ್ಥಳಕ್ಕೆ ಹೋಗಬೇಕೆಂದು ತೋರಿತು. ಅಂದೊಮ್ಮೆ ಬೆಳುದಿಂಗಳಲ್ಲಿ ತಾನು ಒಂದು ದಿನ್ನೆಯ ಮೇಲೆ ಸುಂದರವಾಗಿ ಪಸರಿಸಿದ್ದ ಒಂದು ಮರದ ಮೇಲೆ ಹತ್ತಿ ಐರಾವತವನ್ನು ಕರೆದಂತೆ ಈಗ ಇಂದ್ರಚಾಪದ ಮೇಲೆ ಏರಿ ಅವನನ್ನು ಕರಿಯೋಣವೆನಿಸಿತು. ಈ ರಮ್ಯ ಕಲ್ಪನೆಯಿಂದ ಇಮ್ಮಡಿಯಾಗಿದ್ದ ಅವಳ ಆನಂದವು ಅವಳ ಅಂಗಾಂಗಗಳನ್ನು ತುಂಬಿತು. ಉತ್ಸಾಹವು ಉಕ್ಕೇರಿ ಬಂತು. ಇವುಗಳ ಸುಖಮಯ ಮಹಾಪೂರದಲ್ಲೇ ಅವಳ ಪ್ರಾಣವು ತೇಲಿ ಹೋಗಿ ಆ ಇಂದ್ರಚಾಪದ ಅನಂತಸೌಂದರ್ಯವನ್ನು ಸೇರಿಕೊಂಡಿತು.

ಅತ್ತ ಕೆಪ್ಟನ್ ಕರ್ಟಿ ವಾರ್ನರನೂ ಅದೇ ಇಂದ್ರಚಾಪವನ್ನು ಕಾಣುತ್ತಿದ್ದನು. ಬೆಳಕು ಹರಿದರೂ ಎಲ್ಲ ಕಡೆಗೂ ನಿಶ್ಶಬ್ದವಾಗಿತ್ತು. ಈ ನೀರವತೆಯಿಂದ ಅವನ ಮನಸ್ಸಿನ ನಿರಾಶೆಯು ಇನ್ನೂ ಅಧಿಕವಾಯಿತು ತನ್ನ ಸೈನ್ಯವು ಸಂಪೂರ್ಣವಾಗಿ ನಿರ್ನಾಮವಾಗಿರಬೇಕೆಂಬುದು ಅವನಿಗೆ ಅರಿವಾಯಿತು. ಶಿಶಿರ ಋತುವಿನ ಹಿಮದ ನಡುವೆ ದುರ್ಲಭವಾದ ಈ ಇಂದ್ರಚಾಪದ ಸೌಂದರ್ಯರಾಶಿಯನ್ನು ಅವನು ಕೆಲವೇ ದಿನಗಳ ಹಿಂದೆ ನೋಡಿ ಆನಂದಿಸಿದ್ದನು ಚಳಿಗಾಲದ ಕಾಮನಬಿಲ್ಲು ಶುಭಶಕುನವೆಂದು ಆ ಮುದುಕಿಯು ಅಂದು ಅಂದಿದ್ದಳು. ಈ ನಾಡ ಮುಂದಿಗೆ ಅದು ಶುಭಶಕುನವಾಗಿದ್ದಿರಬಹುದು ಆದರೆ ಅವನ ಪಾಲಿಗೆ ಅದು ಅಶುಭವನ್ನೇ ತಂದಿದ್ದಿತು. ಆ ದಿನವೇ ಅವನು ಒಲೆನಾಳಿಂದ ಗ್ಯುರಿಲ್ಲಾಗಳ ಗುಟ್ಟನ್ನು ತಿಳಿಯುವ ನಿಷ್ಫಲ ಪ್ರಯತ್ನವನ್ನು ಪ್ರಾರಂಭಿಸಿದ್ದನು. ಅಂದಿನಿಂದ ಅವನ ಯಾವ ಕೆಲಸವೂ ಯಶಸ್ವಿಯಾಗಿದ್ದಿಲ್ಲ. ಆಗಲೇ ತೋರತೊಡಗಿದ್ದ ಸೋಲಿನ ಲಕ್ಷಣಗಳು ಬೆಳೆಯುತ್ತ ಹೋಗಿ ಇಂದು ಅವನಿಗೆ ಹೇಳಹೆಸರಿಲ್ಲದ ಪೂರ್ಣ ಪರಾಜಯವನ್ನು ತಂದೊಡ್ಡಿದ್ದುವು

ವಿಜಯಶ್ರೀಯ ಸ್ವಾಗತದ ಕಮಾನಿನಂತೆ ಕಂಗೊಳಿಸುತ್ತಿದ್ದ ಆ ಇಂದ್ರಚಾಪದ ಪ್ರಕಾಶಯುಕ್ತ ಸೌಂದರ್ಯವು ಅವನ ಹೃದಯವನ್ನು ಇರಿಯಿತು ಆ ದೃಶ್ಯವನ್ನು ನೋಡಲಾರದೆ ಕರ್ಟಿನು ಕಣ್ಣು ಮುಚ್ಚಿದನು. ಮುಚ್ಚಿದ ಕಣ್ಣು ತೆರೆಯಲಿಲ್ಲ. ಮುರಿದ ಮೂಗಿನ ಮೇಲೆ ಹರಿದ ರಕ್ತವು

ಹೆಪ್ಪುಗಟ್ಟಿ ಅವನ ಶ್ವಾಸಕ್ರಿಯೆಯನ್ನು ನಿಲ್ಲಿಸಿತು. ಇಂದ್ರಚಾಪವೇ ಕಾಣದ ದೀರ್ಘ ಕತ್ತಲೆಯಲ್ಲಿ ಅವನು ಮುಳುಗಿದನು

## ೧೩

ಅಂದು ಮಧ್ಯಾಹ್ನ ದೇವಾಲಯದ ಬಳಿಯ ಚೌಕದಲ್ಲಿ ಎಲ್ಲರೂ ಕೂಡಿದರು. ಹಿಂದಿನ ರಾತ್ರಿಯ ಕಾಳಗದಲ್ಲಿ ಮಡಿದವರು ಹಾಗೂ ಆ ಮೊದಲೇ ಕೊಲ್ಲಲ್ಪಟ್ಟು ಜರ್ಮನರು ಶವಸಂಸ್ಕಾರ ಮಾಡಗೊಡದವರು, ಇವರೆಲ್ಲರಿಗೆ ಅಂದೇ ಮಣ್ಣು ಕೊಡುವುದೆಂದು ನಿಶ್ಚಯಿಸಲಾಗಿತ್ತು. ಚೌಕದಲ್ಲಿ ಕುಡಗೋಲಿನಾಕಾರದ ಒಂದು ದೊಡ್ಡ ಹೊಂಡವನ್ನು ತೋಡಿದ್ದರು. ಸಮಾಧಿಯಾಗಬೇಕಾಗಿದ್ದ ಎಲ್ಲಾ ಮೃತದೇಹಗಳನ್ನು ಅಲ್ಲಿಗೆ ತಂದರು.

ಹೊಳೆ ಬದಿಯ ಕೊರಕಲಿನಲ್ಲಿ ಬಿದ್ದಿದ್ದ ತನ್ನ ಮಗ ವಾಸ್ಯಾನ ದೇಹವನ್ನು ಗಾಡಿಯಲ್ಲಿಡಲು ಫೆಡೋಸ್ಯಾ ತಾನೇ ಕೈ ನೀಡಿದಳು. ಅವನಿಗೆ ನೋವಾಗಬಾರದೆಂಬಂತೆ ಅವನ ತಲೆಯನ್ನು ತನ್ನ ತೊಡೆಯ ಮೇಲಿಟ್ಟು ಗಾಡಿಯಲ್ಲಿ ಕುಳಿತಳು.

ಮಾಲಾನ್ಯಾಳನ್ನೂ ಅಲ್ಲಿಗೆ ತಂದರು. ಅವಳೂ ಸೈನಿಕರಂತೆ ಯುದ್ಧದಲ್ಲಿ ಸತ್ತುದರಿಂದ ಅವಳಿಗೂ ಇದರೊಡನೆಯೇ ಹೂಳತಕ್ಕದ್ದೆಂದು ಶಿಲೊಹನು ಅಪ್ಪಣೆ ಇತ್ತಿದ್ದನು. ಅವಳ ಮೊಗದ ಮೇಲಿನ ನಗು ಹಾಗೆಯೇ ಇತ್ತು. ಕೋವಿಯನ್ನು ಹಿಡಿದಿದ್ದ ಅವಳ ಕೈಯ ಹಿಡಿತವು ಬಿಡಿಸಲಾರದಷ್ಟು ಬಿಗಿಯಾಗಿತ್ತು. ಅವಳ ಕೋಮಲತೆ, ಸೌಂದರ್ಯಗಳನ್ನು ಕಂಡು ಎಲ್ಲರೂ ತಲೆದೂಗಿದರು. ಊರಿನವರಿಗೆ ಅವಳ ಸಂಭ್ರಮದ ಮದುವೆಯ ದಿನದ ನೆನಪಾಯಿತು. ಒಂದು ವರ್ಷದ ಕೆಳಗೆ ಅದೇ ದಿನದಲ್ಲಿ ವಿವಾಹವಾಗಿತ್ತು.

ಛಾಶಿ-ಕಂಬದಿಂದ ನೇತಾಡುತ್ತಿದ್ದ ಲೆವೊನ್ಯುಕನನ್ನೂ ಅಲ್ಲಿಗೆ ತಂದರು. ಅವನ ತಾಯಿ ತುಂಬಿದ ಬಸುರಿಯಿದ್ದಳು. ಆದರೂ ಮನೆಯಲ್ಲಿ ನಿಲ್ಲಲಾರದೆ ತನ್ನ ಮಗನಿಗೆ ಮಾಡುವ ಕೊನೆಯ ಸೇವೆಯನ್ನು ಕಾಣಲು ಬಂದಿದ್ದಳು. ಬರೀ ಹದಿನಾರು ವರ್ಷದ ಬಾಲಕನವನು. ಬೇರೆ ಯಾರಿಗೂ ಅವನನ್ನು

ಹಿಡಿಯಲು ಬಿಡದೆ ಅವಳೇ ತನ್ನ ಮಗಳ ಸಹಾಯದಿಂದ ಸಮಾಧಿಯ ಸ್ಥಳಕ್ಕೆ ತಂದಿದ್ದಳು.

ಜರ್ಮನರಿಗೆ ಪತ್ತೆಯಾಗದಂತೆ ಮನೆಯಲ್ಲೇ ಹೂಳಲ್ಪಟ್ಟಿದ್ದ ಚಿಕ್ಕ ಮಿಾಶಾನನ್ನೂ ಅಲ್ಲಿಗೆ ತಂದರು ಅವನೂ ವೀರಕುವರ. ಜರ್ಮನರ ಗುಂಡಿಗೆ ಗುರಿಯಾದವನು ಯೋಧರ ಜತೆಯಲ್ಲಿ ಮಲಗಲು ಅವನೂ ಯೋಗ್ಯನಿದ್ದನು.

ಎಲ್ಲ ಸಿದ್ಧತೆಯೂ ಆದ ಬಳಿಕ ಲೆಫ್ಟನೆಂಟ ಶೆಲೊವನು ಚಿಕ್ಕ ಭಾಷಣ ಮಾಡಿದನು. ಶಾಂತಚಿತ್ತದಿಂದ ಎಲ್ಲರೂ ಅದನ್ನು ಕೇಳಿದರು. ಕೂಡಿದವರಲ್ಲಿ ಯಾರೂ ರೋದಿಸಲಿಲ್ಲ ಶೋಕಾತೀತವಾದ ಮನೋಧಾರ್ಢ್ಯ ವಿದ್ದುದರಿಂದಲೇ ಊರಿನ ಮೇಲೆ ಸಾವು, ಸುಲಿಗೆಗಳನ್ನು ಕಾರುತ್ತ ಬಿದ್ದಿದ್ದ ಯುದ್ಧದ ಭೀಕರ ದಿನಗಳನ್ನು ಎದುರಿಸಿ ಅಂತಿಮ ವಿಜಯಕ್ಕಾಗಿ ಕಾದು ನಿಲ್ಲಲು ಸಾಧ್ಯವಾಯಿತು. ಆದರೆ ಆ ವಿಜಯವನ್ನು ಸಾಧಿಸಲು ಎಷ್ಟು ಜನರು ಪ್ರಾಣವನ್ನು ಅರ್ಪಿಸಬೇಕಾಯಿತು! ಅದಕ್ಕಾಗಿ ಅವರಾರೂ ಮರುಗುತ್ತಿರಲಿಲ್ಲ ಜನತೆಗೆ ಜೀವನವನ್ನು ಒದಗಿಸಿ ನೆರವು ನೀಡಿದ ತಾಯಿ. ನೆಲವನ್ನು ತಮ್ಮ ನೆತ್ತರು ಹಾಗೂ ಜೀವವನ್ನೇ ಕೊಟ್ಟು ರಕ್ಷಿಸಬೇಕಾಗುವುದೆಂಬ ಪಾಠವು ಅವರಿಗೆ ಎಂದೊ ರಕ್ತಗತವಾಗಿತ್ತು ಅಂದು ಸಮಾಧಿಸ್ಥರಾಗಲಿರುವ ಜ್ಞಾತ, ಅಜ್ಞಾತ ಸೈನಿಕರೊಡನೆ ಅವರು ಒಂದು ರೀತಿಯ ದಿವ್ಯ ಆತ್ಮೀಯ ಬಂಧನದಿಂದ ಬದ್ಧರಾಗಿದ್ದರು. "ತಾಯ್ನಾಡು ಅವರನ್ನು ಮರೆಯುವಂತಿಲ್ಲ" ಎಂಬ ಕೊನೆಯ ವಾಕ್ಯವನ್ನು ಶೆಲೊವನು ಉಚ್ಚರಿಸಿದಾಗ "ಎಂದಿಗೂ ಇಲ್ಲ" ಎಂಬ ಶಬ್ದಗಳು ಎಲ್ಲರ ಗೌರವ ತುಂಬಿದ ಹೃದಯಗಳಿಂದ ತಾವಾಗಿ ಹೊರಟು ಬಾಯಿಯಿಂದ ಹೊರಬಿದ್ದುವು.

ಕಳೇಬರಗಳನ್ನು ಒಂದೊಂದಾಗಿ ಹೊಂಡದಲ್ಲಿಟ್ಟರು. ಶೆಲೊವನು ಮೊದಲಾಗಿ ಅವುಗಳ ಮೇಲೆ ತುಸು ಮಣ್ಣನ್ನು ಚೆಲ್ಲಿದನು. ಆಮೇಲೆ ಒಬ್ಬೊಬ್ಬರಾಗಿ ಎಲ್ಲರೂ ವೃತ್ತಿಕಾತರ್ಪಣದಿಂದ ತಮ್ಮ ಕೊನೆಯ ವಂದನೆಯನ್ನು ಸಲ್ಲಿಸಿದರು. ಚಿಕ್ಕ ಮಕ್ಕಳೂ ಕೂಡ ತಮ್ಮ ಪುಟ್ಟ ಕೈಗಳಿಂದ ತುಸು ತುಸು ಮಣ್ಣನ್ನು ತೆಗೆದು ಹೊಂಡದಲ್ಲಿ ಚೆಲ್ಲಿದರು. ಇದಾದ ಮೇಲೆ ಸೈನಿಕರು ಹೊಂಡದ ಮೇಲೆ 'ಪಿಕಾಸಿ'ಗಳಿಂದ ಮಣ್ಣನ್ನು ಹಾಕಿದರು. ಸ್ವಲ್ಪ

ಸಮಯದಲ್ಲೇ ಹೊಂಡದ ಮೇಲೆ ಕುಡುಗೋಲಿನಾಕೃತಿಯ ಒಂದು ದಿನ್ನೆಯು ಕಾಣಹತ್ತಿತು.

"ವಸಂತಋತು ಬಂದೊಡನೆ ಅಲ್ಲಿ ಹೂಗಿಡ ಹಚ್ಚೋಣ." ಎಂತ ಮಿಶಾನ ತಾಯಿ ಗಾಲ್ಯಾ ಹೇಳಿದಳು. ಎಲ್ಲರೂ ತಲೆದೂಗಿ ಅದಕ್ಕೆ ಸಮ್ಮತಿಯನ್ನು ಕೊಟ್ಟರು.

ಸ್ಮಶಾನಯಾತ್ರೆಯಿಂದ ಜನರು ಮರಳುವಾಗ ಮಧ್ಯಾಹ್ನವಾಗಿತ್ತು. ಮನೆಗೆ ಮುಟ್ಟಿದ ಮೇಲೆ ಮನಸ್ಸಿನಲ್ಲಿನ ಹಾಗೂ ಮೊಗದ ಮೇಲಿನ ಗಂಭೀರತೆಯು ಬಹಳ ಹೊತ್ತು ಉಳಿಯಲಿಲ್ಲ. ಮಿಂಚಿ ಹೋದುದಕ್ಕಾಗಿ ಚಿಂತಿಸದಿರುವ ಪ್ರಾಮುಖ್ಯ ಪಾಠವನ್ನು ಬಾಳಿನ ಸಾಲೆಯಲ್ಲಿ ಅವರು ಈ ಮೊದಲೇ ಕಲಿತಿದ್ದರು.

ಬಿಡುಗಡೆಯ ಆನಂದದ ಕೋಲಾಹಲವು ಎಲ್ಲೆಡೆಗಳಲ್ಲೂ ಕೇಳ ಬಂತು. ಜರ್ಮನರ ಕೈಗೆ ಸಿಕ್ಕದಂತೆ ಅಡಗಿಸಿಟ್ಟ ಕಾಳು ಕಡಿ, ದೂರ ಊರ ಹೊರಗೆ ಹುಗಿದಿಟ್ಟ ಬೆಲ್ಲ, ಜೇನು, ಒಣಮಾಂಸ ಇವೆಲ್ಲವನ್ನೂ ಹೊರಗೆ ತೆಗೆದರು. ಜರ್ಮನ ಆಕ್ರಮಣದ ಒಂದು ತಿಂಗಳ ಅವಧಿಯಲ್ಲಿ ಅರೆಹೊಟ್ಟೆಯಲ್ಲೇ ದಿನ ಕಳೆದ ಊರವರಿಗೆಲ್ಲಾ ಅಂದು ಹಬ್ಬದೂಟ. ಎಲ್ಲ ಮನೆಗಳಲ್ಲೂ ಅದರ ತಯಾರಿಯು ನಡೆಯಿತು.

ಶೆಲೊವನ ಸೈನಿಕರಿಗಾಗಿ ಊರವರು ಒಂದು ದೊಡ್ಡ ಮೇಜವಾನಿಯನ್ನು ಏರ್ಪಡಿಸಿದ್ದರು ಹಸಿಮಾಂಸವಿಲ್ಲದ್ದೇ ಅದರ ಮಟ್ಟಿಗೆ ಒಂದು ಕೊರತೆಯಾಗಿತ್ತು ಊರಿನಲ್ಲಿದ್ದ ಕೋಳಿ, ಹಂದಿ ಹಾಗೂ ಆಡು, ಕುರಿ ಇವುಗಳ ಪೈಕಿ ಒಂದನ್ನೂ ಜರ್ಮನರು ಬಿಟ್ಟಿರಲಿಲ್ಲ. ಅಡಗಿಸಿಟ್ಟ ಒಣ ಮಾಂಸವಷ್ಟೇ ಉಳಿದಿತ್ತು

ಕಾಳಗದಲ್ಲಿ ಗಾಯಗೊಂಡವರನ್ನು ಗ್ರಾಮ ಸೋವಿಯಟ ಕಚೇರಿಯ ಒಂದು ಕೋಣೆಯಲ್ಲಿ ಮಲಗಿಸಿದ್ದರು. ದಾದಿ (Nurse) ಯ ಶಿಕ್ಷಣವನ್ನು ಪಡೆದಿದ್ದ ಫೆಡೋಸ್ಯಾ ಬಿಳಿಯ ಉಡುಪನ್ನುಟ್ಟು ಅವರ ಆರೈಕೆಯ ಕೆಲಸವನ್ನು ಕೈಕೊಂಡಿದ್ದಳು. ಶೆಲೊವನ ದಳದಲ್ಲಿದ್ದ ಒಬ್ಬ ಎಳೇ ಪ್ರಾಯದ ಡಾಕ್ಟರನು ಚಿಕಿತ್ಸೆಗೈಯ್ಯುತ್ತಿದ್ದನು. ಗ್ರೊಖಾಚನ ಹೆಂಡತಿಯು ಈ

ತಾತ್ಪೂರ್ತಿಕ ಆಸ್ಪತ್ರೆಗೆ ಬಂದು ಡಾಕ್ಟರರ ಕೂಡ "ನಮ್ಮ ಪೈಕಿ ಒಬ್ಬಳಿಗೆ ಪ್ರಸವವೇದನೆ ಸುರುವಾಗಿದೆ. ನೀವು ತುಸು ಬರುವಿರಾ?" ಎಂತ ಕೇಳಿದಳು.

"ನಾನು ಶಸ್ತ್ರಕ್ರಿಯೆಯಲ್ಲಷ್ಟೇ ತಜ್ಞನು. ಹೆರಿಗೆಯ ಕೆಲಸದ ಮಾಹಿತಿ ನನಗೆ ಇಲ್ಲ."

"ಚಿಂತಿಲ್ಲ, ಎಷ್ಟು ಇಲ್ಲವೆಂದರೂ ನೀವು ಡಾಕ್ಟರರಲ್ಲವೇ? ಅವಳಿಗೆ ವಿಪರೀತ ತ್ರಾಸವಾಗುತ್ತಿದೆ. ಮುಂಜಾನೆ ವೈಗೆ ಶ್ರಮವಾಗಿದ್ದಿತು"

"ಆಯಿತು, ಹಾಗಿದ್ದರೆ ಬರುತ್ತೇನೆ. ಹೊಸ ನಾಗರಿಕನೊಬ್ಬನು ಹುಟ್ಟುವಾಗ ಸಾಧ್ಯವಿದ್ದಷ್ಟು ಸಹಾಯ ಮಾಡುವುದು ಎಲ್ಲರ ಕರ್ತವ್ಯ."

ಗಾಯಗೊಂಡವರನ್ನು ಫೆಡೋಸ್ಯಾಳ ಸ್ವಾಧೀನ ಬಿಟ್ಟು ಡಾಕ್ಟರನು ಗ್ರೊಖಾಚನ ಹೆಂಡತಿಯ ಜೊತೆಯಲ್ಲಿ ಹೊರಟನು.

ಗರ್ಭಿಣಿಯು ಜರ್ಮನರು ಗಲ್ಲಿಗೇರಿಸಿದ ಹುಡುಗ ಮಿಟ್ಯಾ ಲೆವೂನ್ಯೂಕನ ತಾಯಿಯಾಗಿದ್ದಳು. ಡಾಕ್ಟರನು ಅಲ್ಲಿಗೆ ತಲಪುವಷ್ಟರಲ್ಲೇ ಅವಳು ಹೆತ್ತಳೆಂಬ ಶುಭವಾರ್ತೆಯನ್ನು ಅಲ್ಲಿ ನೆರೆದಿದ್ದ ಹೆಂಗಸರ ಪೈಕಿ ಒಬ್ಬಳು ತಿಳಿಸಿದಳು.

"ಹಾಗಾದರೆ ನನ್ನ ಆಗತ್ಯವಿಲ್ಲ. ನಾನು ಹಿಂತಿರುಗಲೇ?" ಎಂದು ಡಾಕ್ಟರನು ಕೇಳಿದನು.

"ಅದ್ಯಾಕೆ? ಬಾಣಂತಿಯನ್ನು ಒಮ್ಮೆ ನೋಡಿಬಿಡಿರಿ. ಬಹಳ ಸಂಕಟಪಡುತ್ತಿದ್ದಳಾಕೆ. ಏನಾದರು ಚಿಕಿತ್ಸೆಯು ಅಗತ್ಯವಿರಬಹುದು."

ಗ್ರೊಖಾಚನ ಹೆಂಡತಿಯ ಈ ಮಾತಿಗೆ ಡಾಕ್ಟರನು ಸಮ್ಮತಿಸಿ ಅವಳೊಡನೆ ಹೆರಿಗೆಯ ಕೋಣೆಗೆ ಹೋದನು. ಗ್ರೊಖಾಚನ ಹೆಂಡತಿಯು ಬಾಣಂತಿಗೆ "ಅಕ್ಕಾ, ನಾನು ನಿನಗಾಗಿ ಡಾಕ್ಟರರನ್ನು ಕರೆತಂದಿದ್ದೇನೆ" ಎಂದು ಹೇಳಿದಳು. ಬಾಣಂತಿಯು ಅವಳ ಕಡೆಗೂ ಡಾಕ್ಟರನ ಕಡೆಗೂ ನೋಡಿ ಹುಸಿನಗುವನ್ನು ನಕ್ಕಳು. "ಡಾಕ್ಟರರು ಯಾಕೆ? ನನಗೆ ಇದೇನು ಮೊದಲನೇ ಹೆರಿಗೆಯೇ? ಅಲ್ಲದೆ ಈ ಹುಡುಗ! ಇವನಿಗೇನು ಗೊತ್ತು ಹೆರಿಗೆಯ ವಿಚಾರ?"

ಅವಳ ಮಾತುಗಳನ್ನು ಕೇಳಿ ವಿಸ್ಮಯಗೊಂಡ ಡಾಕ್ಟರನಿಗೆ ಸಹ ನಗುವನ್ನು ತಡೆಯಲಾಗಲಿಲ್ಲ. ಇದನ್ನು ಅವಳು ನೋಡಿದಳು. "ಮನಸ್ಸಿಗೆ ಬೇಜಾರ ಮಾಡಿಕೊಳ್ಳಬೇಡಿರಿ, ಡಾಕ್ಟರರೇ ಇವಳು ಸುಮ್ಮನೆ ನಿಮಗೆ ತ್ರಾಸ ಕೊಟ್ಟಳು. ಹಡೆಯಲು ಡಾಕ್ಟರರ ಅಗತ್ಯವೇನು? ಆಗಲಿ, ಹೇಗೂ ಬಂದಿದ್ದೀರಿ. ಮಗುವನ್ನು ನೋಡಿ ಹೋಗಿರಿ" ಅಂದಳು.

ಡಾಕ್ಟರನು ತೊಟ್ಟಿಲಲ್ಲಿ ಇಣಿಕಿ ನೋಡಿದನು. ದುಂಡಗಾಗಿ ಪುಷ್ಟವಾಗಿದ್ದ ಗಂಡುಕೂಸು!

"ಎಂತಹ ಮುದ್ದುಮಗು! ಏನೆಂದು ಹೆಸರಿಡುವಿರಿ?" ಅಂತ ಕೇಳಿದನು.

"ಅದೇ ನಾನು ಈ ಹೆಂಗಸರೊಡನೆ ಮಾತಾಡುತ್ತಿದ್ದುದು. ಅವನ ಅಣ್ಣನ ನೆನಪಿಗಾಗಿ ಮಿಟ್ಯಾ ಅಂತ ಹೆಸರಿಡಬೇಕೆಂದಿದ್ದೆ. ಆದರೆ ಎಲ್ಲರೂ ಆ ಹೆಸರು ಶುಭಕರವಲ್ಲವೆನ್ನುತ್ತಾರೆ."

"ಯಾಕೆ? ಅವನ ಅಣ್ಣನಿಗೇನಾಯಿತು?"

"ಅವನ ಅಣ್ಣನಿಗೆ ಈ ಹೊತ್ತು ಇತರರೊಂದಿಗೆ ಸಮಾಧಿಯಾಯಿತು. ಇಡೀ ಒಂದು ತಿಂಗಳು ಅವನು ಫಾಶಿ ಖಂಬದ ಮೇಲೆ ತೂಗುತ್ತಿದ್ದ. ಈವತ್ತು ಅವನನ್ನು ಕೆಳಗಿಳಿಸಿ ಸಮಾಧಿಯ ಹೊಂಡದ ಬಳಿ ನಾನೇ ತಗೊಂಡು ಬಂದೆ."

ಡಾಕ್ಟರನು ಅಚ್ಚರಿಗೊಂಡನು. "ಅವನು ನಿನ್ನ ಮಗನೆಂದು ನನಗೆ ಗೊತ್ತೇ ಇದ್ದಿಲ್ಲ!" ಎಂದನು.

"ನನ್ನ ಹಿರೇ ಮಗ ಅವನು ಗ್ಯುರಿಲ್ಲಾಗಳಿಗೆ ಮಹತ್ವದ ಕಾಗದಪತ್ರಗಳನ್ನು ಒಯ್ಯುತ್ತಿದ್ದಾಗ ಜರ್ಮನರ ಕೈಗೆ ಸಿಕ್ಕಿದ್ದನು. ಬರೇ ಹದಿನಾರು ವರ್ಷ ಅವನಿಗೆ. ಅವನ ಹೆಸರು ಮಿಟ್ಯಾ ಎಂದಿತ್ತು. ಅದೇ ಹೆಸರನ್ನು ಈ ಮಗುವಿಗೆ ಇಡಬೇಕೆಂದಿದ್ದೆ. ಆದರೆ ಇವರೆಲ್ಲರೂ ಬೇಡವೆನ್ನುತ್ತಾರೆ. ಬೇರೆ ಏನು ಹೆಸರು ಇಡಲಿ?"

"ವಿಜಯ ಎಂತ ಹೆಸರಿಡು, ಅವನಿಗೆ. ಈ ಹೊತ್ತು ಹುಟ್ಟಿದ್ದರಿಂದ ಅದು ಅವನ ಹಕ್ಕಿನ ಹೆಸರು." ಡಾಕ್ಟರನಂದನು.

" ಸರಿ, ಯೋಗ್ಯ ಸೂಚನೆ. ನೀವು ಇಲ್ಲಿಯ ತನಕ ಬಂದದ್ದು ನಿರುಪಯೋಗವಾಗಲಿಲ್ಲ." ಎಂದಳು ಗ್ರೊಖಾಚನ ಹೆಂಡತಿ.

ಕೂಡಿದವರ ನಿರೋಪ ತಗೊಂಡು ಡಾಕ್ಟರನು ಹೋಗಲು ಹೊರಟನು. ಆದರೆ, ವಿಜಯನ ತಾಯಿಯು ಅವನನ್ನು ಕೂಡಲು ಒತ್ತಾಯ ಪಡಿಸಿದಳು. " ನೀವು ತುಂಬಾ ದಣಿದಿರಬೇಕು, ಡಾಕ್ಟರರೇ. ಜರ್ಮನರ ಕಣ್ಣು ತಪ್ಪಿಸಿ ಸ್ವಲ್ಪ ವೊಡ್ಕಾ (ರಶ್ಯನ ಜನರ ಪ್ರೀತಿಯ ಮದ್ಯ) ಉಳಿಸಿದ್ದೇನೆ. ಅದನ್ನು ತುಸು ತಕ್ಕೊಳ್ಳುವಿರಂತೆ ಈ ಕಠಿಣ ಚಳಿಯಲ್ಲಿ ಅದು ದಣುವಾರಿಸಿ ಹೊಸ ಹುರುಪನ್ನು ಕೊಡುವುದು." ಹೀಗೆ ಹೇಳಿ ಅವಳು ಮಗಳಿಗೆ ವೊಡ್ಕಾದ ಸೀಸೆ ತರಲು ಹೇಳಿದಳು. ಮಗಳು ಲೀಡಾ ವೊಡ್ಕಾ ತಂದು ಒಂದು ಹಸುರು ಗ್ಲಾಸಿನಲ್ಲಿ ಹೊಯ್ದು ಡಾಕ್ಟರನಿಗೆ ಕೊಟ್ಟಳು. ಗ್ಲಾಸನ್ನು ಎತ್ತಿ ಹಿಡಿದು "ಮಗುವಿನ ಆರೋಗ್ಯಕ್ಕಾಗಿ" ಎಂತ ಹೇಳಿ ಅವನು ಮದ್ಯವನ್ನು ಸೇವಿಸಿದನು.

" ಲೀಡಾ, ಡಾಕ್ಟರರಿಗೆ ಫೋಟೊ ತೋರಿಸು " ಅಂದಳು ತಾಯಿ. ಪೆಟ್ಟಿಗೆಯೊಳಗಿಂದ ಒಂದು ಮಾಸಿದಂತ್ತಿದ್ದ ಫೋಟೊ ತಂದು ಲೀಡಾ ಡಾಕ್ಟರರಿಗೆ ತೋರಿಸಿದಳು. ಮಿಟ್ಯಾ ಲೆವೊನ್ಯೂಕನ ಫೋಟೊವಾಗಿತ್ತು, ಅದು. ಎಳೇ ಪ್ರಾಯದ ಸರಳ ಮನಸ್ಸಿನ ಹಳ್ಳಿಯ ಬಾಲಕ.

ಆ ಫೋಟೊವನ್ನು ನೋಡಿ ಡಾಕ್ಟರರಿಗೆ ಕಣ್ಣಲ್ಲಿ ನೀರು ಹರಿಯಿತು. ತನ್ನ ತಾಯಿಯ ನೆನಪಾಯಿತು ದಂಡಿನೊಟ್ಟಿಗೆ ಹೋಗಲು ಅವನು ಹೊರಟ ದಿನ ಅವಳು ಪಟ್ಟ ದುಃಖ, ಅವಳ ಮೈಯ ನಡುಕ, ಇಳಿಸಿದ ಕಣ್ಣೀರು, ಇವೆಲ್ಲವೂ ಅವನ ಕಣ್ಣ ಮುಂದೆ ಬಂದುವು. ಅವಳ ಆ ಅಂಜಿಕೆಯು ಅವನನ್ನೂ ಬಿಟ್ಟಿರಲಿಲ್ಲ ದಂಡಿನ ಮುಂಭಾಗದೊಡನೆ ಹೋಗಬೇಕಾಗಿದ್ದ ಅವನಿಗೆ ಪ್ರತಿ ಕದನದ ಆದಿಯಲ್ಲೂ ಕೊನೆಯಲ್ಲೂ ಒಂದು ಅಜ್ಞಾತ ಭಯವು ಹೃದಯವನ್ನು ಕಂಪಿಸುತ್ತಿತ್ತು. ಯುದ್ಧ ಬೆಳೆದಂತೆ ಕಡಿಮೆಯಾಗುವ ಬದಲು ಅದೂ ಬೆಳೆಯುತ್ತ ಹೋಗಿತ್ತು. ಈ ರೀತಿ ಜೀವ ಕೊಟ್ಟು ನೆತ್ತರು ಸುರಿಸಿ ನಾವು ಏನನ್ನು ಸಾಧಿಸಬಹುದು ? ಇದರ ಅಂತ್ಯ ಎಂದು ? ಈ ಪ್ರಶ್ನೆಗಳು ಅವನನ್ನು ಆಗಾಗ ಬಾಧಿಸುತ್ತಿದ್ದುವು.

ಆದರೆ ಈ ಹಳ್ಳಿಯ ಹೆಂಗಸು, ಅವಳ ಮನಸ್ಸು ಎಷ್ಟು ಪ್ರಶಾಂತವಾಗಿದೆ! ಫಾಶಿ ಖಂಬದಿಂದ ನೇತಾಡುವ ತನ್ನ ಮಗನ ಮೃತ ದೇಹವನ್ನು ಅವಳು ಒಂದು ತಿಂಗಳ ವರೆಗೆ ಪ್ರತಿದಿನ ನೋಡುತ್ತಲಿದ್ದಳು. ಪ್ರತಿ ರಾತ್ರಿ ಆ ದೇಹವನ್ನು ಅಲುಗಾಡಿಸುತ್ತಿದ್ದ ಗಾಳಿಯ ಮೊರೆಯನ್ನು ಕೇಳಿದ್ದಳು. ತುಂಬಿದ ಬಸುರಿಯಾಗಿದ್ದಾಗ ಉಪವಾಸವನ್ನೂ ಜರ್ಮನ ಆಕ್ರಮಣದ ಇತರ ಸಂಕಷ್ಟಗಳನ್ನೂ ಅನುಭವಿಸಿದ್ದಳು. ಅಂದೇ ಮುಂಜಾನೆ ಮಗನ ಕಳೇಬರವನ್ನು ಫಾಶಿಖಂಬದಿಂದ ಕೆಳಗಿಳಿಸಿ ತಾನೇ ಸಮಾಧಿಯ ಸ್ಥಳಕ್ಕೆ ಒಯ್ದಿದ್ದಳು. ಹೃದಯಕ್ರಿಯೆಯೇ ನಿಂತುಹೋಗುವ ಅಥವಾ ಸಹನಾ ಶಕ್ತಿಯು ನಷ್ಟವಾಗಿ ಹುಚ್ಚುಹಿಡಿಯುವ ಪರಿಸ್ಥಿತಿ. ಆದರೂ ಅವಳು ಏನೂ ಕಷ್ಟವಿಲ್ಲದೆ ಮಗುವನ್ನು ಹಡೆದು ಈಗ ತನ್ನಲ್ಲಿದ್ದ ಕೊನೆಯ ಪೊಡ್ಕಾದ ಗುಟುಕಿನಿಂದ ಅವನನ್ನು ಉಪಚರಿಸಿ ಪ್ರಸನ್ನಚಿತ್ತದಿಂದ ಅವನೊಡನೆ ಮಾತುಕತೆಯಾಡುತ್ತಿದ್ದಳು.

ಅಲ್ಲಿ ನೆರೆದಿದ್ದ ಹೆಂಗಸರು, ಅವರೂ ಅದೇ ರೀತಿ ಹಲವು ಸಂಕಷ್ಟಗಳನ್ನು ಸಹಿಸಿದ್ದರು. ಪ್ರತಿಯೊಬ್ಬರ ಮನೆಯ ಗಂಡಸರು ದಂಡಿಗೆ ಹೋಗಿದ್ದರು. ಹೆಚ್ಚಿನವರಿಗೆ ಅವರು ಬದುಕಿರುವರೊ ಸತ್ತಿರುವರೊ ಎಂಬುದು ಕೂಡ ಗೊತ್ತಿರಲಿಲ್ಲ. ಈ ವರೆಗೆ ಬದುಕಿದ್ದರೂ ಜೀವ ಸಹಿತ ಮರಳುವರೆಂಬ ಆಸೆಯೇನೂ ಇರಲಿಲ್ಲ. ಈ ಒಂದು ತಿಂಗಳಲ್ಲಿ ಅವರಾರೂ ಸರಿಯಾಗಿ ಉಂಡವರಿಲ್ಲ. ಎಷ್ಟೊ ಜನರ ಮೈಯಲ್ಲಿ ಜರ್ಮನರು ಕೊಟ್ಟ ಚಿತ್ರಹಿಂಸೆಯ ಕಲೆಗಳು ಕಾಣುತ್ತಿದ್ದುವು. ಆದರೆ ಅವರನ್ನು ನೋಡಿದಾಗ ಇದಾವುದರ ಅರಿವೂ ಆಗುತ್ತಿರಲಿಲ್ಲ. ಅವರ ಮುಖದಲ್ಲಿ ತೋರುವ ಗಾಂಭೀರ್ಯ, ಅವರ ವರ್ತನೆಯಲ್ಲಿ ಕಂಡುಬರುವ ದಿಟ್ಟತನ, ಇವು ವಿದ್ಯಾವಂತನಾಗಿದ್ದು ಬೊಲ್ಶೆವಿಕ್ ತತ್ವಗಳನ್ನು ಚೆನ್ನಾಗಿ ಅರಿತಿದ್ದ ಡಾಕ್ಟರನಲ್ಲಿಯೂ ಆಶ್ಚರ್ಯವನ್ನುಂಟುಮಾಡಿದುವು, ಮಾನವ ಸಹಜ ಅಭಿಮಾನವನ್ನು ಹುಟ್ಟಿಸಿದುವು.

"ಕಿಸಾನ ಹೆಂಗಸರು," ಈ ಶಬ್ದಗಳಿಗೆ ಸ್ಫೂರ್ತಿದಾಯಕವಾದ ಹೊಸ ಅರ್ಥವು ಅವನಿಗೆ ಅಂದು ಹೊಳೆಯಿತು.

ಅವನ ಕಣ್ಣೀರನ್ನು ವಿಜಯನ ತಾಯಿ ನೋಡಿದಳು. "ದುಃಖಿಸುವ ಕಾರಣವಿಲ್ಲ ಡಾಕ್ಟರರೇ, ದುಃಖಿಸಲು ಇದು ಸಮಯವೂ ಅಲ್ಲ ಮಿಟ್ಯಾ ಹೋದ ಆದರೆ ಈಗ ವಿಜಯನಿದ್ದಾನೆ ನಾವು ಕಿಸಾನರು, ಭೂಮಿ ಯಿಂದ ಬೆಳೆಯುವವರು. ಆಲದ ಮರವನ್ನು ಕಡಿದರೆ ಅದರ ಬೇರುಗಳಿಂದ ಹೊಸ ಚಿಗುರು ಕೆಲ ದಿನಗಳಲ್ಲೇ ಬರುತ್ತದೆ. ಹಾಗೆಯೇ ನಾವು, ನೆಲ ತಾಯಿಯ ಮಕ್ಕಳು. ಮಿಟ್ಯಾ ಹೋದ, ಬೇರೆ ಎಷ್ಟೋ ಜನರು ಹೋದರು. ಆದರೆ ನಾಡು, ನೆಲ ಉಳಿದಿದೆ, ಜನತೆ ಉಳಿದಿದೆ ನಮ್ಮನ್ನೆಲ್ಲಾ ಕೊಲ್ಲುವ ರೆಂದು ಕೆಲವು ಸಾರೆ ನಮಗೆ ಭಯವಾಗುತ್ತಿದೆ ಆದರೆ ಅದೆಲ್ಲ ಭ್ರಮೆ. ಏನಾದರೂ ಎಂತಹ ಘೋರಯಾತನೆ ಕೊಟ್ಟರೂ ಕೊನೆಗೆ ಜನತೆ ಬದು ಕುವುದು, ನಾಡು ಉಳಿಯುವುದು."

ಅವಳು ಕಿಸಾನರಿಗೆ ಸಹಜವಾದ ಸರಳ ಭಾಷೆಯಲ್ಲಿ ನುಡಿದ ಈ ಮಾತುಗಳು ಡಾಕ್ಟರನ ಮನಸ್ಸಿನಲ್ಲಿ ಆಗಾಗ ತಲೆಯೆತ್ತಿ ಅವನನ್ನು ಧೈರ್ಯ ಗುಂದಿಸುತ್ತಿದ್ದ ಸಂಶಯಗಳನ್ನು ದೂರೀಕರಿಸಿದುವು ಅಲ್ಲಿಂದ ಹೊರಬೀಳು ವಾಗ ಅವನು ತೀರಾ ಹೊಸ ಮನುಷ್ಯನಾಗಿದ್ದನು.

## ೧೪

ಕೆಪ್ಟನ್ ಕರ್ಟ ವಾರ್ನರನ ದಂಡಿನಲ್ಲಿ ಆ ರಾತ್ರಿ ಶೆಲೊವನ ಸೈನಿಕರ ಕೈಗೆ ಸಿಕ್ಕವರೆಲ್ಲರೂ ಹತರಾಗಿದ್ದರು. ಆದರೆ ಬೇರೆ ಬೇರೆ ಮನೆಗಳಲ್ಲಿ ಮಲ ಗಿದ್ದ ಕೆಲವು ಸೈನಿಕರು ಹಟ್ಟಿಗಳ ಹಿಂಬದಿಯಲ್ಲೂ ಮರಗಳ ಪೊದರಿನಲ್ಲೂ ಅಡಗಿ ಕೂತು ರಶ್ಯನರ ಬೆಯೊನೆಟ್ಟಿನ ತಿವಿತಗಳಿಂದ ತಪ್ಪಿಸಿಕೊಂಡಿದ್ದರು.

ಅಂದು ಮುಂಜಾನೆ ಹೆಂಗಸರೂ ಹಸುಳೆಗಳೂ ಊರಿನ ಎಲ್ಲಾ ಭಾಗಗಳನ್ನು ಹಾಗೂ ಸರಹದ್ದಿನ ಸ್ಥಳಗಳನ್ನು ಹುಡುಕಿ ಅಡಗಿ ಕೂತಿದ್ದ ಐದು ಜರ್ಮನರನ್ನು ಹೊರಗೆಳೆದು ಶೆಲೊವನ ಸ್ವಾಧೀನಕ್ಕೆ ಒಪ್ಪಿಸಿದ್ದರು.

ಆ ದಿನ ಮಧ್ಯಾಹ್ನದ ಮೇಲೆ ಅವರ ಚೌಕಶಿಯಾಗುವುದಿತ್ತು. ಜಾಮೀ ನಾಗಿ ಗ್ರೋಖಾಚ, ಎವ್ದೊಕಿಮ, ವಗೈರೆ ಐದು ಜನರನ್ನು ಬಂಧಿಸಿದ

ಕೋಣೆಯಲ್ಲೇ ಈ ಐವರನ್ನು ಶಿಲೋವನ ಮುಂದೆ ನಿಲ್ಲಿಸಿದರು. ಕುತೂಹಲಿಗಳಾದ ಊರ ಹೆಂಗಸರು ಅದರ ಸುತ್ತಲೂ ನೆರೆದಿದ್ದರು.

"ಇದೆಲ್ಲಾ ಸವಾಲು, ಅಡ್ಡ ಸವಾಲು ಯಾಕಾಗಿ ? ತಟ್ಟೋಣದ ಹಿಂದೆ ಕೊಂಡು ಹೋಗಿ ಎಲ್ಲರ ತಲೆಗೂ ಒಂದೊಂದು ಗುಂಡು ಇಡಬೇಕಲ್ಲ." ಬೇಸತ್ತ ದನಿಯಲ್ಲಿ ತೆರಷಿಲೀಕಾ ಹೇಳಿದಳು

"ನಿನಗೇನು ತಿಳಿಯುತ್ತದೆ ಈ ವಿಚಾರ ? ಅವರ ಬಾಯಿಯಿಂದ ಎಲ್ಲವನ್ನೂ ಹೊರಪಡಿಸದೆ ಸುಮ್ಮನೆ ಅವರನ್ನು ಕೊಲ್ಲುವುದರಲ್ಲಿ ಏನು ಅರ್ಥವಿದೆ ? " ಇನ್ನೊಬ್ಬಳೆಂದಳು.

"ಹಾಗಿದ್ದರೆ ಸರಿ, ಚೌಕಶಿ ಮುಗಿದ ಮೇಲಾದರೂ ಗುಂಡು ಹಾಕುವರಷ್ಟೇ ?" ತೆರಷಿಲೀಕಾ ಕೇಳಿದಳು.

ಇದನ್ನು ಕೇಳುತ್ತಿದ್ದ ಮುದುಕಿ ಫೆಡೋಸ್ಯಾಳು. " ಏನು ಮಾತಿದು. ಕೈದಿಗಳನ್ನು ಕೊಲ್ಲುತ್ತಾರೆಯೇನು ?'' ಎಂದು ನಡುವೆಯೇ ಹೇಳಿದಳು. ತೆರಷಿಲೀಕಳಿಗೆ ಹೊಟ್ಟೆಯಲ್ಲಿ ಚುಚ್ಚಿದಂತಾಯಿತು. ಫಕ್ಕನೆ ಹಾರಿಬಿದ್ದಳು.

" ಎಂತಹ ವಿಚಾರ! ಕೈದಿಗಳಂತೆ, ಕೈದಿಗಳು. ನಮ್ಮವರನ್ನು ಕೈದಿನಲ್ಲಿ ಅವರು ಹೇಗೆ ನಡಿಸುತ್ತಾರೆ ನೋಡಿದ್ದಿಯಲ್ಲಾ. ಇವರನ್ನು ಜೀವ ಸಹಿತ ಕಾಯ್ದ ಎಣ್ಣೆಯಲ್ಲಿ ಕಾಯಿಸಿಬೇಕು. ಅಲ್ಲದೆ ಹೊಟ್ಟೆಗೆ ತುಂಬಾ ಹಿಟ್ಟು ಕೊಟ್ಟು ಅವರನ್ನು ಸುಖದಲ್ಲಿ ಇಡುವುದೇ ?" ತೆರಷಿಲೀಕಾ ಬೇಸರಿಕೆಯ ಉದ್ವೇಗದಲ್ಲಿ ನುಡಿದಳು.

"ಅದೆಲ್ಲಾ ಉಸಾಬರಿ ನಮಗೆ ಹೇಳಿದ್ದಲ್ಲ, ತೆರಷಿಲೀಕಾ. ನಿಯಮವೇ ಹಾಗಿದೆ, ಕೈದಿಗಳನ್ನು ಕೊಲ್ಲಬಾರದೆಂದು.''

"ನಿಯಮ ! ಈಗ ಎಲ್ಲಿದೆ ನಿಯಮ ? ಕಳೆದ ಯುದ್ಧದಲ್ಲಿ ಇತ್ತೊ ಏನೊ ! ಈಗ ಏನೂ ಇಲ್ಲ. ಎಳೇ ಮಕ್ಕಳನ್ನು ಕೊಲ್ಲುವುದೂ ಊರ ಜನರಿಗೆ ಚಿತ್ರಹಿಂಸೆ ಕೊಡುವುದೂ ನಿಯಮವೇ ?''

ಫೆಡೋಸ್ಯಾ ಒಂದು ನಿಟ್ಟುಸಿರು ಬಿಟ್ಟಳು. "ಇದೆಲ್ಲಾ ನನಗೆ ಗೊತ್ತಿಲ್ಲವೇ ? ನಿನಗಿಂತ ಹೆಚ್ಚಾಗಿ ನನ್ನ ಪಾಲಿಗೆ ಬಂದಿತ್ತು, ಇದರ ಅನುಭವ.''

" ಹಾಗಿದ್ದರೆ, ನಿಯಮ, ನಿಯಮ ಅಂತಾ ಯಾಕೆ ಒದರುತ್ತಿ ? ನಿಜವಾದ ಯೋಧರಿಗೆ ಅವೆಲ್ಲಾ ನಿಯಮಗಳು ಇವರು ಯೋಧರಲ್ಲ, ದರೋಡೆಗಾರರು, ಕೊಲೆಗಾರರು."

ಫೆಡೋಸ್ಯಾ ಮರುಮಾತಾಡಲಿಲ್ಲ. ತೆರಕ್ಷಿಲೀಕಾ ಹೇಳಿದ್ದು ಅವಳಿಗೂ ಒಮ್ಮೆಗೆ ನಿಜವೆನಿಸಿತು.

ತೆರಷಿಲೀಕಾ ಮುಂದರಿಸಿದಳು. " ಯುದ್ಧ ಮುಗಿಯುವವರೆಗೆ ಅವರನ್ನು ಏನೊಂದು ಅಪಾಯಕ್ಕೀಡುಮಾಡದೆ ಸುಖಭೋಜನವನ್ನು ಕೊಟ್ಟು ಸಾಕಿ, ಯುದ್ಧ ಮುಗಿದ ಮೇಲೆ ಅವರನ್ನು ಸುರಕ್ಷಿತವಾಗಿ ಕಳಿಸುವುದೆಂದರೇನು ? ಅವರು ಏನು ನಮ್ಮ ಅಳಿಯಂದಿರೇ ?"

ಹೊರಗೆ ಹೆಂಗಸರ ಸಂಭಾಷಣೆಯು ಇದೇ ರೀತಿಯಲ್ಲಿ ನಡೆಯುತ್ತಿರುವಾಗ ಒಳಗೆ ಕೈದಿಗಳ ಚೌಕಶಿಯು ಮುಗಿದು ಕೆಂಪು ಸೈನಿಕರು ಅವರನ್ನು ಹೊರಗೆ ತಂದರು

" ಏನು, ಅವರನ್ನು ಕಳಿಸುತ್ತೀರೇನು ಈಗ ?" ತೆರಷಿಲೀಕಾ ಸಿಟ್ಟಿನಿಂದ ಕೇಳಿದಳು.

" ಹೌದು, ನಮ್ಮ ದಳದ ಮುಖ್ಯ ಠಾಣ್ಯಕ್ಕೆ ಕಳಿಸುತ್ತೇನೆ. ಶೆಲೊವನೆಂದನು "

ಕೈದಿಗಳಲ್ಲಿ ಕೆಂಪು ಕೂದಲಿನ ನಡುವಯಸಿನೊಬ್ಬನು ಎಲ್ಲರಿಗಿಂತ ಹಿಂದೆ ನಿಂತಿದ್ದನು. ಅವನನ್ನು ನೋಡಿದೊಡನೆ ಪೆಲ್ಯೊಗಿಕಾ ಎಂಬ ಇನ್ನೊಬ್ಬ ಹೆಂಗಸು " ನೋಡು, ಅವನೇ, ಮಿಟ್ಯಾ ಲಿವೊನ್ಯೂಕನನ್ನು ಗಲ್ಲಿಗೇರಿಸಿದವನು " ಎಂತ ಚೀರಿದಳು. ಹೆಂಗಸರೆಲ್ಲರೂ ಅವನ ಬಳಿ ನೆರೆದರು " ಹೌದು, ಅವನೇ, ಸಂಶಯವೇ ಇಲ್ಲ !" ಎಂದು ಹೇಳತೊಡಗಿದರು.

" ಕಾಮ್ರೇಡ ಲೆಫ್ಟನೆಂಟ, ಈತನು ನಮ್ಮಲ್ಲಿನ ಒಬ್ಬ ಹುಡುಗನನ್ನು ಗಲ್ಲಿಗೇರಿಸಿದ್ದನು." ಶೆಲೊವನನ್ನುದ್ದೇಶಿಸಿ ಪೆಲ್ಯೊಗಿಕಾ ಅಂದಳು.

" ಹದಿನೈದು ವರ್ಷವೂ ತುಂಬಿದ್ದಿಲ್ಲ, ಹುಡುಗನೆಲ್ಲಿ ? ಬರೇ ಮಗು." ಇನ್ನೊಬ್ಬಳಂದಳು.

"ಕಾಮ್ರೇಡ ಲೆಫ್ಟನೆಂಟ, ನೀವು ಉಳಿದವರನ್ನು ಬೇಕಾದರೆ ಕೊಂಡು ಹೋಗಿರಿ. ಆದರೆ ಇವನು ಮಾತ್ರ ಇಲ್ಲಿಂದ ಜೀವ ಸಹಿತ ಹೋಗಲಾರ ನಾವು ಇಲ್ಲೇ ಇವನನ್ನು ಮುಗಿಸುವೆವು." ಎಂದು ತಿರ ಸಿಲೀಕಾ ಹಟ ಹಿಡಿದಳು ಹೆಂಗಸರೆಲ್ಲರೂ ಅವನನ್ನು ಹಿಡಿದಿಳೆಯಲು ಉದ್ಯುಕ್ತರಾದರು

ನಡುವೆ ಒಳಗೆ ಹೋದ ಫೆಡೋಸ್ಯಾ ಆಗ ಹೊರಗೆ ಬಂದಳು "ಏನು ತಿರಸಿಲೀಕಾ? ಇಷ್ಟರವರೆಗೆ ನಡೆದ ಕೊಲೆ ಸಾಲದೇ? ಈಗ ನೀನೂ ಒಂದು ಕೊಲೆಮನೆಯನ್ನು ಏರ್ಪಡಿಸಲಿರುವೆಯೊ? ಏನು, ಇವನನ್ನು ಕೊಲ್ಲುವುದೇ? ಜೀವ ಹೋಗುವ ವರೆಗೆ ಎರಡು ನಿಮಿಷ ನೋವಾದೀತು, ಅಷ್ಟೇನೆ. ಅವನು ಮಾಡಿದ ಘೋರ ಅಪರಾಧಗಳಿಗಾಗಿ ಇಷ್ಟು ಸುಲಭದ ಶಿಕ್ಷೆಯೇನು ಅವನಿಗೆ? ಬೇಡ, ಅವನಿಗೆ ಇಷ್ಟು ಸುಲಭದ ಶಿಕ್ಷೆ ಕೊಡುವುದು ಬೇಡ ಅವನು ಬದುಕಲಿ. ಜರ್ಮನರು ಸೋತು ತಮ್ಮ ನಾಡಿಗೆ ಓಡುವುದನ್ನು ನೋಡಲಿ. ಯುದ್ಧವು ಅವರ ದೇಶಕ್ಕೂ ಹಬ್ಬಿ ಅಲ್ಲಿ ಆಗುವ ಅನಾಹುತಗಳನ್ನು ಕಾಣಲಿ. ಸಂಕಟ ಪರಂಪರೆಯನ್ನು ಸ್ವತಃ ಅನುಭವಿಸಲಿ ಜರ್ಮನಿಯ ಊರುಗಳು ನೆಲಸಮವಾಗಿ ಬಯಲುಗಳೆಲ್ಲಾ ಸತ್ತವರ ಎಲುಬುಗಳಿಂದ ಬಿಳುಪಾದಾಗ, ಹೊಟ್ಟೆಗಿಲ್ಲದೆ ಬಳಲುವ ಮಕ್ಕಳು ಇದಕ್ಕೆಲ್ಲಾ ಹೊಣೆಗಾರರು ನೀವೇ ಎಂದು ಈವತ್ತಿನ ಹಿಟ್ಲರನ ಸೈನಿಕರನ್ನು ಧಿಃಕರಿಸಿ ಶಪಿಸುವುದನ್ನು ಕೇಳಲು ಉಳಿಯಲಿ ನರಕಯಾತನೆಯನ್ನು ಈ ಲೋಕದಲ್ಲೇ ಅನುಭವಿಸುವಾಗ, ಬರಲಾರದ ಸಾವಿಗಾಗಿ ಅವನು ಮೊರೆ ಇಡಲಿ. ಸುಮ್ಮನೆ ಅವನನ್ನು ಈ ಹೊತ್ತು ಕೊಲ್ಲುವ ವಿಚಾರ ಬಿಟ್ಟುಬಿಡು"

ಫೆಡೋಸ್ಯಾ ಆವೇಶದಿಂದ ನುಡಿದ ಈ ಮಾತುಗಳು ಅತ್ಯಂತ ಪರಿಣಾಮಕಾರಿಯಾದುವು. ಹೆಂಗಸರೆಲ್ಲರೂ ಮಾತೆತ್ತದೆ ದೂರ ಸರಿದರು.

## ೧೫

ಸಂಜೆಯ ಔತಣದ ಸಿದ್ಧತೆಯು ಭರದಿಂದ ಸಾಗಿತ್ತು. ಆದರೆ ಸೂರ್ಯನು ದಿಗಂತಕ್ಕೆ ತಲಪುವ ಮೊದಲೇ, ಶೆಲೊವನ ದಳವು ಕೂಡಲೇ

ಹೊರಡುವದೆಂಬ ಸುದ್ದಿಯು ಎಲ್ಲಾ ಕಡೆಗಳಲ್ಲೂ ಹಬ್ಬಿತು. ಹೆಂಗಸರು, ಮಕ್ಕಳೆನ್ನದೆ ಊರಿನ ಎಲ್ಲಾ ಜನರು ಅದೇನೆಂದು ತಿಳಿಯಲು ಅವರೆದ್ದೆಡೆ ಕೂಡಿದರು "ದಿನವಿಡೀ ಸರಿಯಾದ ಊಟವಿಲ್ಲ, ನಿಮಗೆ. ಈಗ ಎಲ್ಲವೂ ಸಿದ್ಧವಾಗಿದೆ. ಊಟ ತೀರಿಸಿಯೇ ಹೋಗಿರಿ." ಎಂದು ಊರಿನ ಪ್ರತಿನಿಧಿ ಯಾಗಿ ಫೆಡೋಸ್ಯಾ ಶೆಲೊವನನ್ನು ಬೇಡಿಕೊಂಡಳು.

"ಸಾಧ್ಯವಿಲ್ಲ, ತಾಯಿ ಒಂದು ಕ್ಷಣವೂ ವಿಲಂಬ ಮಾಡದೆ ಮುಂದೆ ಸಾಗಬೇಕೆಂದು ಈಗಲೇ ಮೇಲಿನವರ ಆಜ್ಞೆ ಮುಟ್ಟಿದೆ ಇದು ಯುದ್ಧ. ಶಿಸ್ತನ್ನು ಸಂಪೂರ್ಣವಾಗಿ ಪಾಲಿಸದಿದ್ದರೆ ಅನಾಹುತವಾದೀತು." ಶೆಲೊವ ನೆಂದನು.

"ಅಂದರೆ, ನಮ್ಮನ್ನು ಬಿಡುಗಡೆ ಮಾಡಿದವರಿಗೆ ಒಂದು ಊಟ ಕೂಡ ಕೊಡಲು ನಾವು ಅಸಮರ್ಥರಾದೆವಲ್ಲಾ!" ಎಂದು ಎಲ್ಲರೂ ಮರುಗಿದರು.

"ಬೇಜಾರ ಮಾಡಿಕೊಳ್ಳಬೇಡಿರಿ ನಮಗೆ ಯಾರಿಗೂ ಈಗ ಹಸಿ ವಿಲ್ಲ. ಇನ್ನೆರಡು ತಾಸಿನಲ್ಲಿ ಬೇರೊಂದು ದಳವು ಈ ಊರಿಗೆ ಬರುವುದು. ಅವರು ಹಸಿದು ಬರುವರು. ನಿಮ್ಮ ಔತಣ ಅವರಿಗೆ ನೀಡಿರಿ." ಎಂದು ಶೆಲೊವನು ಸಮಾಧಾನಪಡಿಸಿದನು ಹಾಗೂ ಎಲ್ಲರನ್ನೂ ವಂದಿಸಿ ಸೈನಿಕ ರಿಗೆ ಹೊರಡಲು ಹುಕುಮ ಮಾಡಿದನು. ಭಾರವಾದ ಹೃದಯದಿಂದ ಊರಿನ ಜನರು ಅವರನ್ನು ಬೀಳ್ಕೊಟ್ಟರು.

ಸಮ ಹೆಜ್ಜೆಯನ್ನಿಟ್ಟು ಶಿಸ್ತಿನಿಂದ ಸಾಗುತ್ತಿದ್ದ ಶೆಲೊವನ ದಳವನ್ನು ಊರಿನ ಯಾವತ್ತೂ ಜನರು ಕೊನೆಯ ಸೈನಿಕನು ಅದೃಶ್ಯನಾಗುವ ವರೆಗೆ ನೋಡುತ್ತಾ ನಿಂತರು.

ವಾತಾವರಣವು ಪ್ರಶಾಂತವಾಗಿತ್ತು. ವಿಜಯೋತ್ಸವಕ್ಕಾಗಿ ನಿಸರ್ಗವು ಕಟ್ಟಿದ ಕಮಾನಿನಂತೆ ಕಂಗೊಳಿಸುತ್ತಿದ್ದ ಕಾಮನಬಿಲ್ಲು ಮುಳುಗುವ ಸೂರ್ಯನ ಹೊಂಬಣ್ಣದ ಕಿರಣಗಳಿಂದ ದೇದಿಪ್ಯಮಾನವಾದ ತನ್ನ ವಿವಿಧ ವರ್ಣಗಳ ತೇಜೋರಾಶಿಯಿಂದ ಇಡಿಯ ಸೃಷ್ಟಿಯನ್ನು ಬೆಳಗಿಸಿತ್ತು. ಹಿಂದೆ ಎಷ್ಟೋ ಸಲ ನೋಡಿದ್ದರೂ ಆ ಶುಭದಿನದಲ್ಲಿ ಆ ಕಾಮನಬಿಲ್ಲು ಎಂದೂ

ಕಾಣದ ಹೊಸ ಸೌಂದರ್ಯವನ್ನು ತಾಳಿ ಸ್ವಾತಂತ್ರ್ಯದ ಹಾಗೂ ಸಮಾಜವಾದದ ದಿವ್ಯ ಸಂದೇಶವನ್ನು ಜಗತ್ತಿಗೆ ಸಾರುತ್ತಿರುವಂತೆ ಅವರಿಗೆ ತೋರಿತು.

---